MADRAS GOVERNMENT ORIENTAL MANUSCRIPTS SERIES No. 52




ವೆಂಕಾಮಾತ್ಯಕವಿವಿರಚಿತಂ

ಶ್ರೀಮದ್ರಾಮಾಯಣಂ

# ಬಾಲಕಾಂಡಂ

# BĀLAKĀṆḌAM

(RĀMĀYAṆAM) OF VEṄKĀMĀTYA

*Edited by*

T. CHANDRASEKHARAN, M.A. L.T.,
CURATOR, GOVERNMENT ORIENTAL MANUSCRIPTS LIBRARY, MADRAS
*and*
THE STAFF OF THE LIBRARY

*( Under the orders of the Government of Madras )*

1956

**Price: Rs. 5-8-0**

MADRAS GOVERNMENT ORIENTAL MANUSCRIPTS SERIES No. 52




ವೆಂಕಾಮಾತ್ಯಕವಿವಿರಚಿತಂ

ಶ್ರೀಮದ್ರಾಮಾಯಣಂ

# ಬಾಲಕಾಂಡಂ

# BĀLAKĀṆḌAM

(RĀMĀYAṆAM) OF VEṄKĀMĀTYA

*Edited by*

T. CHANDRASEKHARAN, M.A. L.T.,

CURATOR, GOVERNMENT ORIENTAL MANUSCRIPTS LIBRARY, MADRAS

*and*

THE STAFF OF THE LIBRARY

*( Under the orders of the Government of Madras )*

1956

**Price: Rs. 5-8-0**

# INTRODUCTION

The present edition, Bālakāṇḍa should have been taken up in the first instance for publication in this series of the Rāmāyaṇa of Veṅkāmātya, but due to the nonavailability of a few pages in the beginning of the manuscript ( D. No. 1731. ) of this library, it was not taken up for publication till last year. This year a request was made to the Mysore Oriental Research Institute for getting transcribed the portions which were not available here. My thanks are due to the Director of Mysore University and the Oriental Research Institute of Mysore for their kind response. The missing portions of the second Sandhi have been secured but the first Sandhi still remains incomplete as the missing portion is not found even in the manuscript of the Mysore Library.

The other Kāṇḍas, which have already been published, are Sundarakāṇḍa, Ayōdhyākāṇḍa and Kiṣkindhākāṇḍa. Details regarding the author and the literary value of the work have been noted in the first volume, Sundarakāṇḍa. Therefore it is enough to state here that the same flow of language and style which is seen in the first three volumes, runs through out this Kāṇḍa also with flashes of fine poetical thoughts. It is hoped that this volume will have the same good reception as the other volumes.

This work almost follows the story of Vālmīki Rāmāyaṇa. Some important differences from the Vālmīki Rāmāyaṇa and literal translations made by the poet are indicated at the bottom of the page with the corresponding Sanskrit S'lokas. Corrections are shown within brackets and the original readings are also given at the bottom of the page.

My thanks are due to Sri Vidvān C. Madhusudana Bhat, Kannada Pandit of this library for preparing the press-copy and going through the proofs. My thanks are also due to Messrs. B. N. K. Press, Ltd., Madras who spared no pains in printing the book neatly in a very short period.

Madras,
13-2-1956.

T. CHANDRASEKHARAN,
*Curator,*
Government Oriental Manuscripts
Library.

# ಮುನ್ನುಡಿ

ಇದೀಗ ಪ್ರಕಟವಾದ ಬಾಲಕಾಂಡವನ್ನು ಈ ರಾಮಾಯಣಗ್ರಂಥದ ಭಾಗಗಳ ಪೈಕಿ ಮೊದಲಾಗಿ ಪ್ರಕಾಶನಕ್ಕೆ ತೆಗೆದುಕೊಳ್ಳಬೇಕಾಗಿತ್ತು. ಆದರೆ ಈ ಲೈಬ್ರೆರಿಯಲ್ಲಿರುವ ಇದರ ತಾಳೆಯೋಲೆಯ ಹಸ್ತಲಿಖಿತಪ್ರತಿ (ಡಿ. ನಂ. 1731)ಯಲ್ಲಿ ಮೊದಲಣ ತಾಡಪತ್ರವೊಂದು ಇಲ್ಲದೆ ಬಾಲಕಾಂಡವು ಅಪೂರ್ಣವಾಗಿದ್ದುದರಿಂದ ಇದನ್ನು ಪ್ರಥಮದಲ್ಲಿ ಮುದ್ರಿಸಲಾಗಲಿಲ್ಲ. ಈ ವರುಷ ಮೈಸೂರು ಓರಿಯೆಂಟಲ್ ಲೈಬ್ರೆರಿಯಲ್ಲಿರುವ ಇದರ ಇನ್ನೊಂದು ಪ್ರತಿಯ ಸಹಾಯದಿಂದ ಇದನ್ನು ಪೂರ್ಣವಾಗಿ ಮುದ್ರಿಸಲು ಪ್ರಯತ್ನಿಸಲಾಯಿತು. ಈ ಸಂದರ್ಭದಲ್ಲಿ ನಮ್ಮ ಕರೆಗೆ ಓಗೊಟ್ಟು ಈ ಲೈಬ್ರೆರಿಯ ಪ್ರತಿಯಲ್ಲಿಲ್ಲದ ಗ್ರಂಥಭಾಗವನ್ನು ಒದಗಿಸಲು ಒಪ್ಪಿಕೊಂಡ ಮೈಸೂರು ಓರಿಯೆಂಟಲ್ ರಿಸರ್ಚ್ ಇಲಾಖೆಯ ಅಧಿಕಾರಿಗಳ ಹಾಗೂ ಮೈಸೂರುಯುನಿವರ್ಸಿಟಿಯ ಡೈರೆಕ್ಟರರ ಉಪಕೃತಿಯು ನೆನೆಸತಕ್ಕುದಾಗಿದೆ. ಇದರಿಂದ ಎರಡನೆಯ ಸಂಧಿಯಲ್ಲಿ ನಷ್ಟವಾಗಿಹೋದ ಭಾಗಗಳನ್ನು ಪೂರ್ತಿಗೊಳಿಸಲು ಸಾಧ್ಯವಾಯಿತಾದರೂ ಪೀಠಿಕಾ ಸಂಧಿಯು ಮೈಸೂರಿನ ಪ್ರತಿಯಲ್ಲೂ ಇಲ್ಲದೆಹೋದುದರಿಂದ ಅದು ಇನ್ನೂ ಅಪೂರ್ಣವಾಗಿಯೇ ಉಳಿದಿದೆ.

ಹದಿನೆಂಟನೆಯ ಶತಮಾನದಲ್ಲಿ ಮೈಸೂರನ್ನು ಆಳುತ್ತಿದ್ದ ಹೈದರಲ್ಲಿಖಾನನ ಮಂತ್ರಿಗಳಲ್ಲೊಬ್ಬನಾದ ವೆಂಕಾಮಾತ್ಯನೆಂಬ ಕವಿಯಿಂದ (ಕಾಲ. ಸು. ಕ್ರಿ. ಶ. 1770) ರಚಿತವಾದ ಈ ರಾಮಾಯಣಗ್ರಂಥದ ಸುಂದರಕಾಂಡ, ಅಯೋಧ್ಯಾಕಾಂಡ ಮತ್ತು ಕಿಷ್ಕಿಂಧಾಕಾಂಡಗಳು ಈ ಮೊದಲೇ ಕ್ರಮವಾಗಿ ಒಂದೊಂದಾಗಿ ಪ್ರಕಟವಾಗಿ ಕನ್ನಡಿಗರಿಗೆ ಚಿರಪರಿಚಿತವಾಗಿರುವುದರಿಂದ ಪುನಃ ಅದರ ಭಾಷಾಶೈಲಿ ಕವಿಯ ಕಾಲದೇಶ ಇತ್ಯಾದಿಗಳ ವಿವೇಚನೆಯನ್ನು ಇಲ್ಲಿ ಮಾಡುವುದಿಲ್ಲ. ಈ ಪುಸ್ತಕಕ್ಕೂ ಹಿಂದೆ ಪ್ರಕಟವಾದ ರಾಮಾಯಣದ ಇತರ ಭಾಗಗಳಿಗೆ ದೊರೆತಂತೆಯೇ ಕನ್ನಡಿಗರ ಹೆಚ್ಚಿನ ಆದರವು ದೊರಕೀತೆಂದು ಆಶಿಸಲಾಗಿದೆ.

ಈ ಗ್ರಂಥದಲ್ಲಿ ಕವಿಯು ಇತರ ಗ್ರಂಥಗಳ ಆಧಾರದಿಂದಲೂ ತನ್ನ ಸ್ವಂತ ಅಭಿಪ್ರಾಯದಿಂದರೂ ಸೇರಿಸಿದ ಕೆಲವು ಪ್ರಾಸಂಗಿಕ ವಿಷಯಗಳನ್ನೂ, ರಾಮನಾಮಸ್ಮರಣೆಯ ಮಹತ್ವ ಈಶ್ವರಪಾರ್ವತಿಯರ ಸಂವಾದ ಮುಂತಾದ ಕೆಲವು ವಿಚಾರಗಳನ್ನೂ ಬಿಟ್ಟರೆ ಕಥೆಯು ಹೆಚ್ಚಿನ ಮಟ್ಟಿಗೆ ವಾಲ್ಮೀಕಿರಾಮಾಯಣದ ಅನುವಾದವೆಂಬಂತೆಯೇ ರಚಿತವಾಗಿದೆಯೆನ್ನಬಹುದು. ವಾಚಕರ ಅವಗಾಹನೆಗಾಗಿ ಅಂತಹ ಕೆಲವು ಬದಲಾವಣೆಗಳೂ ಛಾಯಾನುವಾದರೂಪದ ಪದ್ಯಗಳೂ ಇರುವಲ್ಲಿ ತತ್ಸಂಬಂಧವಾದ ಸಂಸ್ಕೃತಶ್ಲೋಕಗಳನ್ನು ಆಯಾ ಪುಟದ ಕೆಳಗಡೆ

ಯಲ್ಲಿ ಕೊಟ್ಟು ತೋರಿಸಿಯದೆ. ತಿದ್ದಿದ ಭಾಗಗಳನ್ನು ಆವರಣಚಿಹ್ನೆಯೊಳಗೆ ಕಾಣಿಸಿ ಮೂಲಮಾತೃಕೆಯ ಪಾಠಗಳನ್ನು ಪುಟದ ಕೆಳಗಡೆಯಲ್ಲಿ ಕೊಟ್ಟಿದೆ.

ಕೊನೆಯದಾಗಿ ಇದರ ಮುದ್ರಣಪ್ರತಿಯನ್ನು ಸಿದ್ಧಪಡಿಸುವುದು, ಪ್ರೂಫ್ ಗಳನ್ನು ತಿದ್ದುವುದು ಇತ್ಯಾದಿ ಕೆಲಸಗಳನ್ನು ದಕ್ಷತೆಯಿಂದ ನೆರವೇರಿಸಿದ ಶ್ರೀ ಸಿ. ಮಧುಸೂದನಭಟ್ಟ, ವಿದ್ವಾನ್ ಇವರಿಗೂ ಸಕಾಲದಲ್ಲಿ ಈ ಹೊತ್ತಗೆ ಯನ್ನು ಅಂದವಾಗಿ ಅಚ್ಚುಮಾಡಿಕೊಟ್ಟಿರುವ ಬಿ. ಯನ್. ಕೆ. ಪ್ರೆಸ್, ಮದರಾಸ್ ಇವರಿಗೂ ನನ್ನ ಹಾರ್ದಿಕಕೃತಜ್ಞತೆಗಳನ್ನು ಸೂಚಿಸಿ ಇದನ್ನು ವಾಚಕರ ಮುಂದಿಡುವೆನು.

ಮದರಾಸು,
13-2-1956.

**ತಿ. ಚಂದ್ರಶೇಖರನ್.**
ಕ್ಯೂರೇಟರ್,
ಗವರ್ನ್‌ಮೆಂಟ್ ಓರಿಯೆಂಟಲ್ ಮಾನ್ಯುಸ್ಕ್ರಿಪ್ಟ್ಸ
ಲೈಬ್ರೆರಿ.

---

# ಅನುಕ್ರಮಣಿಕೆ

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| 1 | 5 | ವಾರ್ಧಕಷಟ್ಟದಿ | ವಾರ್ಧಕಷಟ್ಪದಿ |
| 9 | 27 | ಪರಮುವುರುಷ | ಪರಮುಪುರುಷ |
| 11 | 26 | ಕಾಳಿರುಳ | ಕಾರಿರುಳ |
| 16 | 22 | ಸೃಷ್ಟಿಕರ್ತತ್ವ | ಸೃಷ್ಟಿಕರ್ತೃತ್ವ |
| 17 | 24 | ಕೆಲವು ಕಡೆಗಳಲ್ಲಿ | ಹಲವು ಕಡೆಗಳಲ್ಲಿ |
| 23 | 8 | ಮಾನಗೈದು | ಮ್ಲಾನಗೈದು |
| 32 | 9 | ಬಹುಧಾನ್ಯಮೀವ | ಬಹುಧಾನ್ಯಮಿಾವ |
| 35 | 21 | ಸಿಂಧುರವನಿಟ್ಟು | ಸಿಂದುರವನಿಟ್ಟು |
| 40 | 17 | ಪತ್ರಕಾಮೇಷ್ಟಿ | ಪುತ್ರಕಾಮೇಷ್ಟಿ |
| ,, | 28 | ರಸಿಕಿತೆವೆರಸಿ | ರಸಿಕತೆವೆರಸಿ |
| 44 | 5 | ಮಖಕಮಲ | ಮುಖಕಮಲ |
| ,, | 25 | ಲವಂಗಿಸು । | ಲವಂಗಿಸುಮ । |
| 45 | 30 | ಕಲ್ಲಾರ | ಕಲ್ಹಾರ |
| 48 | 12 | ಜೃಂಭಣೆಯನು ॥ | ಜೃಂಭಣೆಯ (ಲೆಸೆದಿರಲ್ಕೆ) |
| 57 | 9 | ತುರಗಮೇಧಾದ್ವರ | ತುರಗಮೇಧಾಧ್ವರ |
| 60 | 29 | ಷಡ್ಋತು | ಷಡೃತು |
| 63 | 30 | ಪಾರವಶ್ಯದೊಳಿರ್ಪ | ಪಾರವಶ್ಯದೊಳಿರ್ದ |
| 65 | 6 | ಗೈವರೇನೆಂಬೆ | ಗೈದರೇನೆಂಬೆ |
| 82 | 9 | ಧಾರುಣೀ ; ಚರಿಸುತ್ತ | ಧಾರಿಣೀ ; ರಚಿಸುತ್ತ |
| 92 | 15 | ಪಣಿಪಗಳವೆ | ಫಣಿಪಗಳವೆ |
| 108 | 26 | ದುರತರದ | ದುರುತರದ |
| 109 | 27 | ನವವಮಿ | ನವಮಿ |
| 113 | 26 | ಯೆನಲ್ಲೋಷ್ಠವದ | ಯೆನಲ್ಕೋಷ್ಠವದ |
| 114 | 22 | ಕೆಡಪುವೆನ । ಲ್ಮತಿ | ಕೆಡಪಲ್ಕೆ । ಮತಿ |
| 117 | 27 | ಚುತುರ್ಣಾ | ಚತುರ್ಣಾ |
| 145 | 27 | ಸುಬಾಹುಮಖ್ಯರ | ಸುಬಾಹುಮುಖ್ಯರ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 146 | 18 | ಭೇಧಮಿಲ್ಲದೆ | ಭೇದಮಿಲ್ಲದೆ |
| 147 | 24 | ಬೃಸಿಯು | ಬ್ರುಸಿಯು |
| 154 | 3 | ಕುಸುಮಾಸ್ತ್ರನಯನನಂ | ಕುಸುಮಾಸ್ತ್ರನಯ್ಯನಂ |
| 155 | 26 | ಯಕ್ತಾ್ರಯಾಂ | ಯುಕ್ತಾ್ರಯಾಂ |
| 161 | 15 | ವ್ಯಾಪಸ | ವ್ಯಾಪಿಸ |
| 172 | 19 | ನಂದಿನಿಂ | ನಂದದಿಂ |
| 173 | 2 | ರಕ್ಷಯಾತ್ಮಕ | ಅಕ್ಷಯಾತ್ಮಕ |
| 178 | 26 | ಪುರಷ | ಪುರುಷ |
| 183 | 26 | ತುತ್ತುನುಳಿದತಿ | ತುತ್ತನುಳಿದತಿ |
| 184 | 4 | ನಿನ್ನಂಫ್ರಿ | ನಿನ್ನಂಘ್ರಿ |
| ,, | 27 | ವಿಸ್ತರಿಸಿರುವೆನೆಂಬ | ವಿಸ್ತರಿಸಿರುವನೆಂಬ |
| 185 | 3 | ತಪಿಸಿಗಳು | ತವಸಿಗಳು |
| 190 | 30 | ಮಧುಸೂನಾ | ಮಧುಸೂದನಾ |
| 196 | 6 | ಪರಸಿ | ಪರ(ಸೆ) |
| ,, | 7 | ನೈತಂದನೆಲೆ | (ನಿಂತೆ)ಂದನೆಲೆ |
| 197 | 2 | ನಿನ್ನಂಫ್ರಿ | ನಿನ್ನಂಘ್ರಿ |
| 203 | 15 | ಭಾಧಿಸು | ಬಾಧಿಸು |
| 208 | 23 | ಮುಗಳೊಂದು | ಮುಗುಳೊಂದು |
| ,, | 26 | ಧೃಡ | ದೃಢ |
| 216 | 16 | ಸಾರವರ | ಸಾಲುಮರ |
| 224 | 13 | ತಪಗ । ನ | ತಪಸಿ । ಯ |
| ,, | 20 | ಹರ್ಷ | ಹರುಷ |

ವೆಂಕಾಮಾತ್ಯವಿರಚಿತಂ

**ಶ್ರೀಮದ್ರಾಮಾಯಣಂ**

# ಬಾಲಕಾಂಡಂ

## * ಪೀಠಿಕಾಸಂಧಿ

ವಾರ್ಧಕಷಟ್ಪದಿ॥ .... .... .... .... .... .... .... |
.... .... .... .... .... .... .... |
.... .... .... .... .... .... .... .... .... ತದಿರವ॥
ಮಿಕ್ಕು ಸುರತರುಕುಸುಮನಿಃಸೃತಮರಂದಮಂ |
ನ್ಯಕ್ಕರಿಸಿ ವ್ಯಾಕೋಚವಿಚಕಿಲದ ಸೌರಭದೊ |
ಳಕ್ಕರಂ ಪುಟ್ಟಿಸುವುದನವರತ ರಸಭರಿತ
(ವೀ ಕಾವ್ಯ ಮೂಲೋಕದಿ)॥ (24)

.... .... .... .... .... .... .... |
.... .... .... .... ... .... .... |
.... .... .... .... .... .... ....ಭೃಂಗಿಗಾನದಿಂ.... ॥
ಚೆಲುವ ಕೋಕಿಲಕಾಕಲೀರಾವಮೆಸೆವಂತೆ |
ಕಲಿತತಂತ್ರೀಸ್ವನದ ಸಂಗೀತದಂದದಿಂ |
ಸುಲಲಿತಾನಂದಕರಮೆನಿಸಿರ್ಪುದೀ ಕೃತಿಯು ಸಕಳಜ್ಞ ಸತ್ಕವಿಗಳ॥ (25)

ಕಂಪೆಸೆವ ಸವಿನುಡಿಯ ಮಾಧು(ರ್ಯ)....|
.... .... .... .... .... .... .... |
.... .... .... .... ....ವದೆ ಸರಸಜನಹೃದ್ಯ ಮನವದ್ಯ ಕವಿತೆ॥
ಚಂಪಕದಲರ್ವ ಸೌರಭ್ಯದಂತತಿಶಯದ |
ಲಂಪಟದ ದುಷ್ಕಬ್ಬ ರಸಕಲಿತಮಧುಪಗ- |
ಳ್ಗಿಂಪಾಗದಿರ್ದಡೆಯು ಸುಮನಸರ್ಗಾನಂದಕರಮಾಗಿ ಪರಿಮಳಿಸದೇ (26)

---

* ಈ ಸಂಧಿಯು ಮೈಸೂರಿನಲ್ಲಿರುವ ಈ ಗ್ರಂಥದ ಇನ್ನೊಂದು ಪ್ರತಿಯಲ್ಲೂ ಇಲ್ಲದಿರುವುದರಿಂದ ಈ ಲೈಬ್ರರಿಯಲ್ಲಿರುವ ಡಿ. ನಂ. 1731 ನೆಯ ತಾಳೆಯೋಲೆಯ ಪ್ರತಿಯಲ್ಲಿ ದೊರೆತಷ್ಟು ಭಾಗವನ್ನು ಮಾತ್ರ ಮುದ್ರಿಸಲಾಗಿದೆ.

ಕವಿಜೀವನೌಷಧಮನಂತಪದ ಸಂಪದಂ।
ನವರಸ.... .... .... .... .... .... ।
.... .... .... .... .... ....ಮಂ ಸೀಕ್ಷಿಸುತಮಂ....ಲೀ॥

ತವಕದಿಂ ಬಂಧಕೀ ಬಂಧಕೌಷಿತನುದು-।
ಷ್ಕವಿಚಕ್ರಮೊಂದಾಗಿ ದೂಷಿಸಲು ಸಂತತಂ।
ಸವೆದಪುದೆ ಸದ್ಯಶಶ್ಚಂದ್ರಿಕೆಯು ಛಂದದಿಂ ಬುಧಸೇವ್ಯಮೆಂದೆನಿಸದೇ॥ (27)

ಘನದಂತೆ ವನದಂತೆ ವನಧಿ.... .... ।
.... .... .... .... .... .... .... ।
.... .... ....ಮಣಿಯಂತೆ ಶ್ರೀರಾಮ(ಮೆಂ)ಬಯೀ ಬೀಜಾಕ್ಷರಾ॥

ನೆನೆದ ಮಾತ್ರದೊಳಮೃತಸುಚ್ಛಾಯಕಾಮ್ಯಂಗ।
ಳನುವ ಸುಪ್ರದಭಾಸಮಾಗಂಧಸೌರಭ್ಯ।
ತನುಸೌಖ್ಯಸಂತಾನದಾಯಿಯೆಂದನವರತ ಜಾನಿಸುವುದಖಿಳಜನರು॥ (28)

ವೃತ್ತಗತಿ.... .... .... .... .... ।
.... .... .... .... .... .... .... ।
....ತ್ತರದಿಪರರರ್ಥವಂಚನೆಯ ಶ್ರುತಿಗಣಿತಕ್ರೂರತರವಾಕ್ಯಂಗಳಿಂ॥

ಬಿತ್ತರಿಪ ದುಷ್ಕೃತಿಯು ದುಷ್ಕೃತಿಯದೆಂತೆಂಬ।
ವೃತ್ತಮರಿಗಾನಂದಕರಮೆನಿಸಿ ತೋರ್ದಪುದೆ। [ಗೆಣೆಯುಪ್ಪುದೇ॥ (29)
ಪೊತ್ತೊಂದುಮಣಿಯ ಮಸ್ತಕದಿ ತೋರಿಸುವಹಿಯು ರತ್ನನಿಧಿ

ಪಾಲ್ಗಡಲ ಪಂಕಯುತಮೆನಿಸಿ ಪಾಟೀರಮಂ।
ಸೋಲ್ಗೈದು ಘನಸಾರವನಸಾರಮಿನಿರಸದ।
ಸಾಲ್ಗೊಡಗಳಂ ತುಳುಕಿ ದುಷ್ಕವಿಯ ನುಡಿಗಳಿಂ ದಕ್ಷಶ್ರುತಿಪಥದೊಳಿಳಿದು॥
ವಲ್ಗುಭಾಷಣೆಯರಿಂ ಸದುಹೃದಯ ಹೃದಯಮಂ।
ಮೇಲ್ಗೊಳಿಸದಲೆ ಕ್ಲಿಷ್ಟತರದ ನಾಸಾಕೇಶ।
ಸಾಲ್ಗಳಂ ಕೇಳ್ವಂತೆ ಪೇಳ್ವವರ ಸೊಲ್ಗಳಿಂ ಸಲ್ಲಲಿತಮೇನಕ್ಕುಮೇ॥ (30)

ಯೋಗಿಗಳ ಭೂಷಣ ವಿರಾಗಿಗಳ ಮೆಯ್ದೊಡವು।
ಭಾಗದೇಯಕೆ ನಿಲಯಮನವರತ ವೇದಾಂತ-।
ಭೋಗಿಯಾಲಯ ಸಾಂಖ್ಯತಂತ್ರಗಳ ತವರುಮನೆಯತುಲಭಕ್ತಿಯ ಮಂದಿರ।
ಭಾಗವತರಾಲಯ ಕ್ರಿಯಾಮಂತ್ರಗಳ ನೆಲೆಯು।
ಭೋಗಿಗಳ ಸುಮ್ಮಾನ ಸನ್ಮಾನ ಮಂತ್ರಿಗಳ।
ಶ್ರೀಗಾರ ರಾಜ್ಯಾಧಿಪತ್ಯಪೆರ್ಚುಗೆ ನಿಖಿಳಭೂಭುಜರಿಗೀ ಕಾವ್ಯವು॥ (31)

ಮುನಿತಿಲಕವಾಲ್ಮೀಕಿವಾಗಮೃತಕಾಸಾರ।
ಸನಿಹವನುಪಾನ ಲಕ್ಷ್ಮೀಕರವನಾಂತು ಶುಭ।
ಘನಸರಸಮೃದುವಚನರಚನೆಯಿಂದೀ ಮಹಾಕಾವ್ಯಮಂ ಭಕ್ತಿಯಿಂದ॥
ಇನಕುಲೋದ್ಭವನಾದ ಸರ್ವಜ್ಞನಾಜ್ಞೆಯಿಂ।
ವನಧಿಮೇಖಲೆಯೊಳುಂ ಪಂಡಿತಾಹ್ಲಾದಮೆನೆ।
ವಿನಯದಿಂದುಸುರಿದಂ **ಬಾಲವಾಲ್ಮೀಕಿ** ತಾ ಶ್ರೀರಾಮಸಚ್ಚರಿತೆಯ (32)

ಕಾಮಿತಪ್ರದಕಮಲನಾಭ ಕಲ್ಯಾಣಗುಣ।
ಧಾಮದಾ (ನಿಲಯಂ) ಸುಧಾಕಿರಣಶುಭನೇತ್ರ।
ಸಾಮಗಾನಪ್ರಿಯ ಸದಾಸಾಮಜಾರಿನುತ ಸರ್ವಲೋಕೇಶಯಿಾಶ॥
ಭೂಮಿಜಾರಮಣ ಬುಧನಿಕರಸೇವಿತಚರಣ।
ರಾಮಪುರದರಸ ರಘುವಂಶಚೂಡಾರತ್ನ।
ಪ್ರೇಮದಿಂ ಸಲಹು ಸಹಜಾನಂದಮಯರೂಪ ಭಜಕಜನಹೃದಯದೀಪ॥ (33)

ಪೀಠಿಕಾಸಂಧಿ ಸಮಾಪ್ತಂ

॥ ಶ್ರೀ ॥

---

## ಎರಡನೆಯ ಸಂಧಿ

ಸೂಚನೆ॥ ಸಕಲನಿಗಮಾಗಮಪುರಾಣೇತಿಹಾಸಗಳ।
ಪ್ರಕರಸಮ್ಮತಮೆನಿಪ ಶ್ರೀರಾಮಚರಿತೆಯಂ।
ಶುಕಶೌನಕಾದಿಋಷಿನಿವಹ ನಲಿವಂದದಿಂ ಹರನೊರೆದ ಗಿರಿಜಾತೆಗೆ॥

ಭೋಗಿಭೂಷಣಮಕುಟಮಣಿಮಾಲೆಯೆಂದೆನಿಪ।
ಭಾಗೀರಥೀನದೀತೀರವಾಸಿಗಳೆನಿಪ।
ಯೋಗಿವರರೊಂದುದಿನ ಸತ್ರಯಾಗಂಗೈದರತುಲಾನುರಾಗದಿಂದ॥
ಆಗಮೋದಿತದರ್ಥದಾಗುಹೋಗುಗಳರಿತ।
ಯೋಗಾನುಸಂಧಾನ ಸೂತಮುನಿವರ ಜಾತು।
ಸಾಗರಕೆ ಶುಭ್ರಾಂಶು ಉದಯಿಸಿದ ಮಾಳ್ಕೆಯೊಳ್ ಬಂದನಾನಂದದಿಂದೆ॥ (1)

ಬರವನೀಕ್ಷಿಸುತಾಗ ನೆರೆದ ವಿದ್ವಜ್ಜನರು।
ಹರುಷರಸಮಂಕುರಿಸಿ ಥರಥರದೊಳಿದಿರೆದ್ದು।
ಭರದೊಳಪಚಿತಿಗೈದರರ್ಘ್ಯಪಾದ್ಯಾದಿಗಳನಿತ್ತು ಸತ್ಕರವೆತ್ತು॥
ಪರಿವೇಷ್ಟನಂಗೈದು ಕುಳ್ಳಿರ್ದ ಮುನಿನಿಕರ।
ಸರಸದಿಂ ಕುಶಲಾನುಯೋಗಗಳ ಬೆಸಗೊಂಡು। [ದೊಳು॥ (2)
ಪರಿಪರಿಯ ಮೃದುಲೋಕ್ತಿಯಿಂದೆ ಸನ್ನುತಿಗೈದರಡಿಗಡಿಗೆ ಸಂಭ್ರಮ

ರಾಮ ಸರ್ವಾತ್ಮನೆಂದರಿತು ನಿಜಚಿತ್ತದೊಳ್ ।
ರಾಮನಾಮಾಕ್ಷರದ್ವಯವ ಜಪಿಸುತ ಸತತ ।
ರಾಮಚಂದ್ರಾನಂದಪೀಯೂಷಕರಗಳಿಂ ತಂಪೆನಿಸಿ ರಾಮನಾಗಿ ॥
ಈ ಮಹಿಯ ರಕ್ಷಿಸಲ್ ಕರುಣದಿಂ ಯತಿಕುಲದ ।
ಸೋಮವಾಲ್ಮೀಕಿಮುನಿ ನಿಜಶಿಷ್ಯರೊಡವೆರೆದು ।
ಪ್ರೇಮದಿಂದೈತಂದ ತಾಪಸರ ತತ್ಸಭೆಗೆ ತತ್ಸಮಯಕುತ್ಸವದೊಳು ॥ (3)

ನೋಡುತಾ ದ್ವಿಜಯಮಿಯ ಯತಿನಿವಹವಾನಂದ ।
ಗೂಡಿ ಸದ್ಯುಪಚಾರಗಳ ಮಾಡಿ ನುತಿಸುತಂ ।
ಮೂಡಿಬಹ ಹರ್ಷದಿಂ ಮೂರ್ಧಗಳನೊಲದೊಲವುತನ್ಯೋನ್ಯಭಾರತಿಗಳ ॥
ಪಾಡಿದರು ವ್ರತಿಯ ಸಂದರ್ಶನದಿ ಪಾತಕಗ- ।
ಳೋಡಿದವು ಶ್ರೀರಾಮನಾಮಾಮೃತೋದನವ ।
ನೂಡಿದವು ಜಿಹ್ವೆಗಳು ಸಾಧುಸಂಸರ್ಗದತಿಮಹಿಮೆಯಿನ್ನೆಂತುಟೆನುತ ॥ (4)

ಬಲುಜನ್ಮಸುಕೃತಪರಿಪಾಕದಿಂ ಸಾಧುಜನ ।
ರೊಲವು ಸಮನಿಪುದದರ ದೆಸೆಯಿಂದಮಘರಾಶಿ ।
ತೊಲಗುವುದು ತೊಲಗಿದರೆ ಶ್ರೀರಾಮಭಕ್ತಿ ಸಂಜನಿತಮಪ್ಪುದು ಭಕ್ತಿಯಿಂ ॥
ಸುಲಭಮಲ್ಲದ ವಿದ್ಯೆ ಸಮನಿಪುದು ಸುಜ್ಞಾನ ।
ಬಲದಿಂದ ನಿರ್ವೃತಿಯು ದೊರೆಕೊಂಬುದದರಿಂದೆ ।
ನೆಲದೊಳಗೆ ಸಜ್ಜನರ ಸಂಗ ಕಾರಣಮಲ್ತೆ ಮುದದಿಂ ಮುಮುಕ್ಷುತತಿಗೆ ॥ (5)

ಅರಿತು ಶ್ರುತಿಪುರಾಣಸ್ಮೃತಿಗಳರ್ಥಂಗಳಂ
ಮರೆಯದನುಸರಿಸುತಂ ಪರಲೋಕಚಿಂತೆಯಿಂ ।
ದರಿಗಳಲಿ ಮಿತ್ರರಲಿ ಸ್ತುತಿನಿಂದೆ ಭಯಹರ್ಷವೊಂದೆನಿಸಿ ವೈರಮುಳಿದು ॥
ಹರಿಕಥಾಶ್ರವಣದಿಂ ಹಗಲಿರುಳು ಸಂತೋಷ ।
ವೆರಸಿ ರಾಗವಿರಾಗಮುಳಿದ ನಿರ್ದ್ವಂದರೇ ।
ಧರೆಯೊಳಗೆ ಸಂತರೆಂದೆನುತ ಭಾವಿಸವೇಳ್ಕು ಸಾಧುಸಂಗತರೆನಿಪರೆ ॥ (6)

ಜನನಮರಣದ ಬಂಧಕಳ್ಕುವನು ಸತ್ಸಂಗ ।
ವನು ಬಯಿಸಿ ಸುಖಮಿರ್ಪನೆಂದೆನುತ ವಾಲ್ಮೀಕಿ ।
ಮುನಿಯ ದರ್ಶನದಿಂದ ಸಂಜಾತಶ್ರೀರಾಮಬೋಧೆಯಿಂ ಋಷಿಗಳೆಲ್ಲ ॥
ಮನದಿ ಸಂತಸವೆರ್ಚಿ ಪೊಗಳಿ ತನ್ಮಾನಿಯಂ ।
ವಿನಯದಿಂ ಸೂತನೊಡನಿಂತೆಂದರಾರ್ಯ ಕೇಳ್ ।
ನಿನಗರಿವು ನಿಗಮಾಗಮಾರ್ಥದತುಲಾರ್ಥಗಳು ಸರ್ವಜ್ಞ ಸತ್ಯಬೋಧ ॥ (7)

ವರಮೌನಿ ನೀನೊರೆದ ಸಕಲಪೌರಾಣಶುಭ |
ಕರದ ಭಾರತಮುಖ್ಯಸತ್ಕಥೆಗಳಲಿ ರಾಮ |
ಪರಮತತ್ವಂಗಳನನೇಕವಿಧದಿಂ ಪೇಳ್ದಿಯಲ್ಲಲ್ಲಿ ಮನವೊಲಿವೊಲು ||
ಹರಿಯೆಂದು ಹರನೆಂದು ಸರಸಿಜಾಸನನೆಂದು |
ಹರಿಹರಾತ್ಮಕನೆಂದು ಮುಮ್ಮೂರ್ತಿಯೆಂದೆನುತ |
ಮೆರೆವ ನಿರ್ಗುಣಬೊಮ್ಮನೆಂದು ಪರಿಪರಿಯಿಂದಲಾದರದಿ ವಿಶದಮೆನಿಸಿ || (8)

ಪಲವು ವಿಧಮಾಗಿರ್ಪ ಪವಣಿನಿಂ ನಿಜತತ್ವ |
ವೊಲಬ ತಿಳಿಯಲ್ಕರಿದು ವಚನರಚನೆಗಳಿಂದ |
ಬಲು ವಿರೋಧಂಗಳೆಂದೆನಿಸಿ ತೋರುತಮಿವೆಕೊ ಮಾನಸಕ್ಕನುಮಾನವು ||
ನೆಲೆಯ ತಿಳಿಯದೆ ಲೋಕ ನಾನಾಪ್ರಕಾರದಿಂ |
ವಲಮಾನರಾಗಿ ವೈಷಮ್ಯದಿಂ ತೊಳಲುತಿಹ |
ರೆಲೆ ತಪೋಧನ ಭಾರತಾದಿಗ್ರಂಥಗಳಲ್ಲಿ ತೋರ್ಪುವೈ ಸಂಶಯಗಳು || (9)

*ಸುರರೆಲ್ಲ ಶ್ರೀಹರಿಯ ನುತಿಗೈದು ಪ್ರಾರ್ಥಿಸಿದ |
ರೆರೆಯ ಲೋಕವ ಪೊರೆಯೆ ಧರಣಿಯೊಳಗವತರಿಸು |
ಶರಧಿಮೇಖಲೆಯೊಳಗಯೋಧ್ಯಾಧಿನಾಥಸುರಪತಿಮಿತ್ರ ಪಂಕ್ತಿರಥನ ||
ಅರಸಿಯರು ಮೂವರಲಿ ಹ್ರೀಶ್ರೀಸುಕೀರ್ತಿಗಳ್ |
ವೆರಸಿ ತನು ನಾಲ್ಕೆನಿಸಿ ಲೋಕಕಂಟಕನಪ್ಪ |
ದುರುಳದಶಕಂಧರನ ಕಂಧರವನಿಳುಹೆಂದು (ಬೇಡೆ) ತದ್ಗೋತ್ರತತಿಗೆ || (10)

ಎಂದೆನುತ ಸುಮನಸರ ಸಂದೋಹ ಬಿನ್ನವಿಸ |
ಲಿಂದಿರಾವರ ಸುದರ್ಶನಮುಬ್ಜ ಶೇಷರಂ |
ಪೊಂದಿ ದಶರಥನಾತ್ಮಭವನಾದನೆಂಬರ್ಥ ಬಾಲಕಾಂಡದೊಳುಕ್ತವು ||
ಮಂದರಾವಣನ ವಧಿಸೆಂದು ಬೃಂದಾರಕರ |
ವೃಂದ ಬಿನ್ನವಿಸೆ ಹರಿ ರಘುವಂಶಸಂಭೂತ |
ನೆಂದೆನಿಸಿ ರಾಜಿಸಿದನೆನುತಯೋಧ್ಯಾಕಾಂಡದಲ್ಲೆಲ್ಲೈ ಮುನಿವರ್ಯನೆ || (11)

---

* ತ್ವಾಂ ನಿಯೋಕ್ಷ್ಯಾಮಹೇ ವಿಷ್ಣೋ ಲೋಕಾನಾಂ ಹಿತಕಾಮ್ಯಯಾ ||
ರಾಜ್ಞೋ ದಶರಥಸ್ಯತ್ವಮಯೋಧ್ಯಾಧಿಪತೇಃ ಪ್ರಭೋಃ || ೧೮ ||

ಧರ್ಮಜ್ಞಸ್ಯ ವದಾನ್ಯಸ್ಯ ಮಹರ್ಷಿಸಮತೇಜಸಃ ||
ತಸ್ಯ ಭಾರ್ಯಾಸುತಿಸೃಷು ಹ್ರೀಶ್ರೀಕೀರ್ತ್ಯುಪಮಾಸುಚ || ೧೯ ||

ವಿಷ್ಣೋಪುತ್ರತ್ವಮಾಗಚ್ಛಕೃತ್ವಾತ್ಮಾನಂ ಚತುರ್ವಿಧಂ ||
ತತ್ರ ತ್ವಂ ಮಾನುಷೋಭೂತ್ವಾ ಪ್ರವೃದ್ಧಂ ಲೋಕಕಂಟಕಂ || ೨೦ ||

(ವಾ. ರಾ.-ಬಾಲಕಾಂಡ-ಪಂಚದಶಸ್ಸರ್ಗ)

ಧರಣೀತನುಜೆ ಲಕ್ಷ್ಮಿ ಹರಿ ತಾನೆ ರಘುವೀರ |
ತರಿಯೆ ರಾವಣನಸುವ ಮನುಜಾವತಾರಮಂ |
ಧರಿಸಿದಂ ರಾಮನೆಂಬರ್ಥಮಂ ಯುದ್ಧಕಾಂಡದೊಳು ಪೇಳಿದೆ ತಿಳಿವೊಲು ||
ಸರಸಿಜಾಸನವಚನವಿಧವನಾಲಿಸಿ ವಿಷ್ಣು |
ಕರುಣದಿಂ ಮನುಜರಂತವತರಿಸಿ ತಾಂ ಮತ್ತೆ | [ಪ್ರತಿಪಾದ್ಯವು || (12)
ಪೊರೆದ ತ್ರಿಜಗವನೆಂದು ರಾಮಾಯಣೋತ್ತರದ ಕಾಂಡದಲಿ

ಬೆದರದಿರಿ ಸುರನಿಕರ ದಶರಥಮಹಾರಾಯ |
ನುದರದಲಿ ಸುತನೆನಿಸಿ ಜನಿಸಿ ಪೊರೆದಪೆನೆಂದು |
ಮಧುವೈರಿ ದಯದಿಂದ ಪೇಳ್ದನೆಂಬರ್ಥಮಂ ಪದ್ಮಪೌರಾಣದೊಳಗೆ ||
ವಿಧಿಸಿರುವುದಲ್ಲಿ ಶಿವನುತಿಗೈದ ರಾಮನಂ |
ಪದುಮಮಂದಿರೆ ಸೀತೆ ನೀನೆ ನಾರಾಯಣನು |
ಮಿದು ನನ್ನಿಯೆಂದೆನುತ ಭಾಗವತ ಸಂಭೂತದರ್ಥಮಂ ಸೂಚಿಸುವೆವು || (13)

ಹರಿಯೆ ನಿನ್ನಾತ್ಮಾಂಶನಾಲ್ಕರಲಿ ಲಕ್ಷ್ಮಣಂ |
ಭರತಶತ್ರುಘ್ನರೆಂಬಭಿಧಾನಮಾಂತು ದು |
ಸ್ತರಸಮುದ್ರವ ದಾಂಟಿ ದಶಗಳನ ಸಂಹರಿಸಿ ಧರಿಣಿಯಂ ಪೊರೆವುದೆಂದು ||
ಸುರಮುಖ್ಯರೊರೆದುದಂ ಪತಿಕರಿಸಿ ರವಿವಂಶ |
ದಿರವನಂಗೀಕರಿಸಿ ಸುತನೆನಿಸಿ ದಶರಥಗೆ | [ವಿಸ್ತರಿಪೆವು || (14)
ಮೆರೆದನೆಂದುಸುರ್ದಪುದು ಭಾಗವತದೊಳು ಕೌರ್ಮದರ್ಥಮಂ

ರಾಮಸಾಕ್ಷಾದ್ವಿಷ್ಣು ಲೋಕದಲಿ ಶ್ರುತದಿವ್ಯ |
ನಾಮ ಲಕ್ಷ್ಮಣಭರತಶತ್ರುಘ್ನರತಿಬಲರ್ |
ಭೀಮಬಲರಧಿಕಸಂಗ್ರಾಮಕೋವಿದರಬ್ಜನಾಭಸದ್ಭಕ್ತಿಯುತರು ||
ಕಾಮಚರಪಂಕ್ತಿಶಿರ ಗೋಮಮಂ ಮಸುಳಿಸಲು |
ಪ್ರೇಮದಿಂ ಮನುಜರಂತವತರಿಸು ನರರಿಂದ | [ನುಡಿದನು || (15)
ಲಾ ಮಹಾಸುರಗೆ ಮೃತಿಯೆಂದೆನುತಮಬ್ಜಭವ ಬಿನ್ನವಿಸೆ ಹರಿ

ಬಾಸೆವೆಣ್ಣಿನಯ ಕೇಳ್ ಭೂಸುರರ ಸಲಹುವರೆ |
ವಾಸಿಯಿಂದುದಯಿಸುವೆ ವಸುಮತಿಯೊಳೆಂದಾಗ |
ಚಾಸೆಯನ್ನೀವುತ್ತ ನಿಜನಿಲಯಕೈದಿದಂ ವಿಷ್ಣುಪೌರಾಣದೊಳಗೆ ||
ಭಾಸಿಸಿಹುದೀಯರ್ಥ ದಶರಥಗೆ ಹರಿಯಂಶ |
ಭಾಸನಾಲಂಕೃತಿಯನಾಂತು ಸುತರಾದರೆಂ- |
ಬೀ ಸದರ್ಥವ ಪೇಳ್ವುದದರಿಂದೆ ಶ್ರೀರಾಮ ಹರಿಯೆಂದು ತೋರುತಿದೆಕೋ || (16)

ಶ್ರೀಪತಿ ಸಹಸ್ರಾಕ್ಷ ಶಾರ್ಙ್ಗಧರ ಚಿನ್ಮಯಂ।
ಪಾಪಹರ ಪೌರಾಣವಾಗೀಶ ಕಲಿ ಶೈಲ।
ಚಾಪನರಸಿಯ ಪೊರೆದ ದಶರಥಾತ್ಮಜನೀತನಾದಿನಾರಾಯಣಾಖ್ಯ॥
ರೂಪವರ್ಜಿತನೆಂದು ಹೈರಣ್ಯಗರ್ಭ ಸಾಂ-।
ದೀಪಸಂಹಿತೆಯೊಳಗೆ ಪೇಳ್ದಪುದು ಚಿನ್ಮಯಂ। [ನೆಂದು॥ (17)
[1]ಸೋಪಾಧಿರಹಿತಹರಿ ರಘುಕುಲದಿ ದಶರಥಗೆ ಸುತನೆನಿಸಿ ತೋರ್ಪ

ರಾಮಕಾಶಿನಿಯೊಳಗೆ ಪೇಳ್ದಪುದು ಬು[ಧ]ವಂಶ।
ಸೋಮು [ಕೇಳ್ ಭಾರತದಿ ಲಕ್ಷ್ಮೀಸಹಾಯಕನು।
ಈ ಮಹೀಭಾರಮನ್ನಿಳುಹೆ] ಪ್ರಾರ್ಥಿಸೆ ದೇವತತಿಯ ಸದ್ವಚನವಿಡಿದು॥
ರಾಮನೆಂದವತರಿಸಿ ರಘುಕುಲದಿ ದುರ್ಜನ।
ಸ್ತೋಮಮಂ ಕತ್ತರಿಸಿ ಸುಗ್ರೀವಮುಖಕಪಿಲ। [ನಾಗಿಯೇ॥ (18)
ಲಾಮರನುಮೊಡಗೊಂಡು ನಿಜಪುರಿಯ ಪೊಕ್ಕನೆಂದೆನುತ ವಿಸ್ತರ

[ಈ ಪರಿಯೊಳಖಿಲಗ್ರಂಥಗಳಲ್ಲಿ ಶ್ರೀರಾಮು।
ತಾಂ ಪರಮಪುರುಷನೆಂ]ದೊರೆವುತಿರೆ ಮಗುಳೊಂದು।
ರೂಪಿನಲಿ ಶಿವನೆಂದು ಪೇಳುತಿಹವೆಂತೆಂದೊಡದನೊರೆವೆವಕ್ತಿಯಿಂದೇ॥
ಶ್ರೀಪಾರ್ವತೀರಮಣ ಸುರನಿಚಯಕಿಂತೆಂದ।
ತಾಪಗೊಳದಿರಿ ತಾನು ರಘುಕುಲದಿ ಮಾನುಷರ।
ರೂಪಿನಿಂದವತರಿಸಿ ರಾಮಾಭಿದಾನ[ದಿಂ ಸಂಹರಿಪೆ ದಶವದನನ]॥ (19)

[ಮುನಿಗಳನು ಕುರಿತು ಶಿವ ವಿನಯ]ದಿಂದಿಂತೆಂದ।
ಮನುವಂಶದಲ್ಲಿ ಸಂಜನಿಸಿ ರಾಘವನಾಗೆ।
ವನಮಾಲಿ ಲಕ್ಷ್ಮಣಂ ಭರತಶತ್ರುಘ್ನರೇ ಶಂಖಚಕ್ರಾಕೃತಿಗಳು॥
ಬಿನದಮೆನೆ ಗಿರಿಜಾತೆ ಸೀತಾಕೃತಿಯನಾಂತು।
ವಿನಯದಿಂದೆಮ್ಮ ಸೇವಿಪುದೆಂ[ಬುವರ್ಥಮಂ। [ದೊಳು॥ (20)
ಘನತರದಿ ಧರ್ಮಕಾಂಡೋಕ್ತಮೆಂದೊರೆದಪರು [2]ಸತ್ಪುರುಷರನುದಿನ

---

1 ಸಾವುರಹಿತಹರಿ (ಮೈಸೂರಿನ ಪ್ರತಿಯಲ್ಲಿ)—ಈ ಸಂಧಿಯಲ್ಲಿ ಇನ್ನುಮುಂದಿನ 18, 19, ಮತ್ತು 20ನೆ ಪದ್ಯಗಳಲ್ಲಿ [ ]—ಈ ಆವರಣ ಚಿಹ್ನೆಯ ಒಳಗಿರುವ ಭಾಗವು ಮೈಸೂರಿನ ಪ್ರತಿಯ ಆಧಾರದಿಂದ ಪೂರ್ಣಗೊಳಿಸಲ್ಪಟ್ಟುದೆಂದು ತಿಳಿಯಬೇಕು.

2 ಮದರಾಸಿನ ಪ್ರತಿಯಲ್ಲಿ—"ಸೇವಿಪುದೆಂ........ಮಾನುಷರ ಮಂದಿರದೊಳು॥" ಎಂದಿರುವುದು.

ಯತಿಗಳೊಡನಿಂತೆಂದ ವೆತೆಗಳಾಂತಿರಬೇಡ।
ಕ್ಷಿತಿಯೊಳಾನವತರಿಪೆ ದಶರಥಾತ್ಮಜನಾಗಿ।
ಕತಿಪಯದಿನಂಗಳಲಿ ದಂಡಕಾರಣ್ಯದೊಳ್ ವಧಿಸಿ ಮೋಕ್ಷವನೀವೆನು॥
ಸತತ ನಂಬುವುದೆಂದು ಸುರಪತಿಯೊಳೊರೆದು ಶಿವ।
ನುತಿಯುತರ ಬೀಳ್ಕೊಟ್ಟು ತುಹಿನಾದ್ರಿತಟದಿಂದ। [ನನ್ಮೊಲು (21)
ಲತಿಶಯೋಕ್ತಿಯ ಪೇಳ್ವುದೇಕವೆನೆ ರಜಕಾಂಡದಲಿ ಧೀಯುತರು

ಆನು ವಿಷ್ವಕ್ಸೇನನೊಡವೆರಸಿ ಭೂತಳದಿ।
ಮಾನುಷಾಕೃತಿವೆತ್ತು ರಾಮುಲಕ್ಷ್ಮಣರ ರೂ।
ಪಾನುತ್ತ ಬೇಗದಿ ದಶಾನನಪ್ರಮುಖರಂ ಮರ್ದಿಸುವೆ ನೀವೆಲ್ಲರು॥
ವಾನವರು ಭಲ್ಲೂಕಯೋನಿಸಂಭವರೆನಿಸಿ।
ಮೌನಿಸೇವಿತತುಂಗಭದ್ರೆಯರ ತಟಶೈಲ।
ಸಾನುಚರರಾಗಿರ್ಪುದಲ್ಲಿಗೈತಪ್ಪೆನೆಂದೊರೆಯೆ ಭೂತೇಶ ಪ್ರಿಯದೆ॥ (22)

ನುಡಿಗೇಳಿ ಹಿಗ್ಗುತಂ ಸುರನಿಚಯ ನಿಜನಿಲಯ।
ದೆಡೆಗೈದಿದರು ರಾಮ ನೀನೆ ಶಂಕರನಲ್ತೆ।
ಮಡುಹೆ ರಾವಣಕುಲವ ರಘುವಂಶಸಂಜಾತನಾದೆ ದಯದಿಂದನೆನುತ॥
ಪೊಡವಿಪತಿರಾಮನ ಮತಂಗ ಸನ್ನುತಿಗೈದ।
ನಡಿಗಡಿಗೆ ಶೇಷಧರ್ಮೋಕ್ತಮಿದು ಬ್ರಹ್ಮಾಂಡ।
ಸೊಡನೆ ಮತ್ಸ್ಯಸ್ಕಾಂದಮುಖ್ಯಪೌರಾಣಗಳೊಳೀಯರ್ಥ ಸಿದ್ಧ್ಯುಕ್ತವು॥ (23)

ತಿಳಿಯೆ ವಾಲ್ಮೀಕೀಯದಲಿ ರಾಮ ಬೊಮ್ಮನೆಂ।
ದುಲಿವುತಿದೆಯೆನ್ನ ಪ್ರಾಜಾಪತ್ಯನರನೆನುತ।
ಘಳಿಲನಿದನರಿಯೆನುತ ದಶರಥನಿಗಗ್ನಿಯಿಂದುದಿತಪುರುಷನು ಉಸುರಿದ॥
ತೊಳಪ ಹಯಮೇಧಗಳ ಶತಸಂಖ್ಯೆಯಂ ಮಾಡಿ।
ಪೊಳೆವ ಹಾಟಕಯುಕ್ತ ಗೋಸಹಸ್ರವು ಕೋಟಿ।
ಗಳನಿತ್ತು ಬ್ರಹ್ಮಲೋಕವ ಪೊಗುವ ರಘುವೀರನೆಂದು ವಿಸ್ತಾರಮಾಗೀ॥ (24)

ದಶವರ್ಷಸಾಹಸ್ರ ದಶವರ್ಷಶತಗಳಂ।
ದಶರಥಾತ್ಮಜ ರಾಜ್ಯಪ್ರತಿಪಾಲನಂಗೈದು
ಕುಶಲದಿಂ ಸತ್ಯಲೋಕಕೆ ನಡೆದನೆಂದಪುದು ಸಂಗ್ರಹದ ರಾಮಾಯಣ॥
ವಿಶದಮೆನೆ ಪೂರ್ವದಲಿ ಚತುರಾಸ್ಯ ತ್ರಿದಶಗಣ।
ವಶನೆನಿಸಿ ಜಗತಿಯೊಳು ಜನಿಸಿ ರಾವಣನ ಯಮ
ವಶಗೈದನೆಂದೆನುತ ಬ್ರಹ್ಮಾಂಡಪೌರಾಣ ಸಾಚಿಪುದು ವಿಧ್ಯುಕ್ತದಿ॥ (25)

ಹರಿಹರಬ್ರಹ್ಮೇಂದ್ರ ಸುರರೆಲ್ಲರುಂ ಪತ್ತು।
ಸಿರವಧೆಯನಾಲೋಚನೆಯ ಗೈವ ಸಮಯದೊಳ್।
ಗೊರೆದುದಶರೀರಿ ಹರಿಹರರಿಂದ ಮೃತಿಯವಗೆ ದೊರೆಕೊಂಬುದೆಂಬರ್ಥವ॥
ಭರದೊಳಾಲಿಸುತಿರ್ದರೊಂದೆನಿಸಿ ಭೂಭಾರ।
ಹರಮೆನಿಸಲುದಿಸಿರ್ದ ಹರಿಹರಾತ್ಮಕದುರಿತ।
ಹರನೆಂದು ಸ್ಕಾಂದಪೌರಾಣದಲಿ ಪೇಳ್ದಪುದು ಕೇಳು ಮುನಿವರ್ಯನೆನುತ॥(26)

ನರನಲ್ಲ ರಾಮನುಂ ಪರಬ್ರೊಮ್ಮ ಸರ್ವೇಶ।
ಹರರೂಪಿನಿಂದೆ ಸಂಹಾರ ಹರಿರೂಪಿನಿಂ।
ಪರಿಪಾಲನಂ ಗೈವ ಶಿವವಿಷ್ಣುರೂಪಾಂತನೀತನೇ ಪರಮಪುರುಷ॥
ಧರಣೀಸುರನ ಕುರಿತು ರಘುಕುಲೇಶ್ವರನೊರೆದ।
ವರಮೌನಿ ಶಿವನಾನೆ ಸಂದೇಹಮಿದಕಿಲ್ಲ।
ವರಿಯೆ ಭೇದವ ಮುಕ್ತನರಿಯದವನಜ್ಞಾನಿ ಸಿದ್ಧಾಂತ ಮೂಜಗದೊಳು॥ (27)

ಪತ್ತುಸಿರಮುಳ್ಳವನ ಸಂಹರಿಸೆ ಸುರರೆಲ್ಲ।
ಮತ್ತೆ ಹರಿಯೆಡೆಗೈದಿ ಪ್ರಾರ್ಥಿಸಲು ಕರುಣರಸ।
ವೆತ್ತು ಚಕ್ರಾಯುಧಂ ಪರಮೇಶನಂಶದಿಂ ದಶರಥಾತ್ಮಜನೆನಿಸುತ॥
ಬಿತ್ತರದಿ ಸಂಭೂತನಾದನೆಂಬರ್ಥಮುಂ।
ತತ್ತರವನುಳಿದು ಗರುಡಪುರಾಣದಾದಿಯೊಳ। [ನುಡಿದನು॥ (28)
ಗುತ್ತಮರು ಪೇಳುವರು ಗೀರ್ವಾಣಕಾಂಡದೊಳು ರಾಮನೊಳು ಶಿವ

ಹರಿವಿರಿಂಚಿಯುನಾನು ಭರದೊಳನುಜಾತರೆಂ-।
ದುರುತರದೊಳುದಿಸುವೆವು ನೀನೆ ಪರತತ್ವಮು-।
ನ್ನಿರುಪಮಾನಂದಾಬ್ಧಿ ಗತಿ ನೀನೆ ನಿನಗನ್ಯವೆಮಗಿಲ್ಲ ಮೂಜಗದೊಳು॥
ಪರತರಾನಂದಾಬ್ಧಿ ಮೂರ್ತಿತ್ರಯಾತೀತ।
ವರರಘುಕ್ಷಿತಿನಾಥನೆಂಬುದೇ ದಿಟವಿನ್ನು।
ಸರಸಿಜಾಸನ ಪೊಗಳಿದರ್ಥಮುಂ ತೋರುವೆವು ರಾಮಚಾರಿತ್ರದಲ್ಲಿ॥ (29)

ಭಾನುಸಂಕಾಶಮುಂ ಕೃಶಾನುನಿಭಮೆಂದೆನಿಪ।
ಶ್ರೀನಿಕೇತನಮಾದ ನಾಭೀಸರೋರುಹದೊ-।
ಳಾನುದಿಸೆ ತನಗೊಲ್ದು ಸೃಷ್ಟಿಕರ್ತೃತ್ವಮುಂ ಪಾಲಿಸಿದ ಪರಮಪುರುಷ॥
ನೀನೆ ಗಡ ನಿಖಿಲಾತ್ಮ ನಿಜಬೋಧನೆಂದೆನುತ।
ಜಾನಿಸುವೆನನವರತಮೆಂದು ಪೊಂಬೊಡೆಯನುಂ।
ನಾನಾಪ್ರಕಾರದಿಂ ನುತಿಗೆಯ್ದು ರಾಮನಂ ರಣಭೀಮನಿಸ್ಸೀಮನಂ॥ (30)

ಇನ್ನೊರೆವೆನಾ [1]ವಿಷ್ಣುಲೋಕದೊಳು ನಾರದಂ।
ಸನ್ನುತಿಸಿದರ್ಥಮುಂ ಹರಿಹರಬ್ರಹ್ಮಾದ್ಯ।
ರನ್ನು ನಿರ್ಮಿಪ ಕಾರಣಾತ್ಮ ಶ್ರೀರಘುವೀರ ಚಿದ್ರೂಪನವ್ಯಕ್ತನು॥
ಮನ್ನಿಸಲು ರವಿವಂಶ ಸಂಭೂತನಾದನೆಂ-।
ದೆನ್ನುತಲಿ ಸ್ಕಾಂದದಲಿ ಶಿವವಿಷ್ಣುಬ್ರಹ್ಮನುಂ।
ನನ್ನಿಯಿಂದಖಿಳದೇವತೆ ನೀನೆ ಸೀತೆಯುಂ ಗಿರಿಜೆಶ್ರೀವಾಣಿಯೆಂದು॥ (31)

ಸಗ್ಗಿಗರ ಪಿರಿಯನಂ ಸರಸೀರುಹಾಂಬಕನ।
ಬ[2]ಗ್ಗ(ದೊವಲುಡೆಯನಂ) ನಿಖಿಳಬೋಳೆಯ ನಿಚಯ।
ರುಗ್ಗಜುಃಸಾಮಾದಿ ಪಳವಾತು ಬಿಸುಗದಿರನೊದಲಾದ ಗ್ರಹರೂಪವ॥
ವಗ್ಗಿನಿಂದಾಂತಿರ್ಪೆ ನೀನೆ ರಘುಕುಲನಾಥ।
ವೆಗ್ಗಳಕೆ ವೆಗ್ಗಳನೆ ಅಣುವಿಗಣು ಸಕಲಾತ್ಮ।
ನುಗ್ಗಡಿಸಲೆಮಗಳವೆ ಕರುಣೆ ಪಾಲಿಪುದೆಂದು ಋಷಿನಿವಹ ನುತಿಗೈದುದು॥ (32)

ಶಿವವಿರಿಂಚಿಯು ವಿಷ್ಣು ನೀನೆ ರಘುಕುಲನಾಥ।
ಭವಹರ ಸಹಸ್ರಾಕ್ಷ ದಕ್ಷನು ಸಹಸ್ರಪದ।
ಕುವಲಯದಿ ಸಾಸಿರಸುಮಸ್ತಕಗಳುಳ್ಳಾತ ತಾತನೆಂಬರ್ಥಗಳನು॥
ವಿವರಿಪುದು ಪದ್ಮವಾಗಸ್ತ್ಯಬ್ರಹ್ಮಾಂಡಾದಿ।
ಸ್ತವರಾಜತಾಪನೀಯಂಗಳಲಿ (?) ರಾಮುನಂ [ದೊಳು॥ (33)
ಕುವಲಯಶ್ಯಾಮನಂ ಮೂರ್ತಿತ್ರಯಾತ್ಮನೆಂದೊರೆದಪುದು ನಿಶ್ಚಯ

ಸರಸಿಜಾಸನನಾಗಿ ನಿರ್ಮಿಸುವ ಲೋಕಮಂ।
ಹರಿಯಾಗಿ ಪಾಲಿಪಂ ಹರನಾಗಿ ಸಂಹರಿಪ।
ವರರಘುಕ್ಷಿತಿನಾಥನಲ್ಲದಿಲ್ಲನ್ಯತ್ರ ಕಾರಣಂ ಪರಿಕಿಸಲ್ಕೆ॥
ಪರಿಪರಿಯಲೊರೆದಪುವನೇಕ ಶಾಸ್ತ್ರಂಗಳೀ।
ಪರಿಯ ನಿಜತತ್ವಮಂ ಪರಿಕಿಸಲ್ ಸಂಶಯಂ।
ದೊರೆಕೊಂಬುದೆಲೆ ಸೂತ ತತ್ವಗಳ ಬಲ್ಲಾತ ನೀ ತಳುವದುಸುರೆನ್ನೊಳು॥ (34)

ಎಂದು ಮುನಿವರರಖಿಳ ಸಂದೇಹದಿಂ ಸೂತ।
ನಂದನನ ಬೆಸಗೊಂಡೊಡದಕಾತನಿಂತೆಂದ।
ಮಂದಸ್ಮಿತಾನಂದಬಂಧುರದ ನುಡಿಗಳಿಂ ಮುನಿವೃಂದಕೊಲವಿಸಿಂದ॥
ಛಂದವಾಯಿತು ಪ್ರಶ್ನೆ ಬ್ರಹ್ಮನಿಷ್ಠರದಲ್ತೆ।
ಮುಂದಭಾಗ್ಯರಿಗುಡಿಸದಿದು ಮಹೀತಳದಿ ರಘು।
ನಂದನನ ಚರಿತೆಯುಂ ಬರೆದೋದಿ ಕೇಳ್ದರ ಪುನೀತರಂ ಗೈವುದಲ್ತೆ॥ (35)

---

1 ವಿಷ್ಣುಯಾಮಳರಲ್ಲಿ—(ಮೈಸೂರಿನ ಪ್ರತಿಯಲ್ಲಿನ ಪಾಠ)

2 ಬಗ್ಗ ಪಾಕಾರಿಯಂ.

ರಾಮನೆಂಬಕ್ಷರದ್ವಯವಾರ ವದನದೊಳ್ |
ಪ್ರೇಮದಿಂ ನೆಲೆಗೊಳ್ಳಲವ ಧನ್ಯ ಲೋಕದೊಳ್ |
ತಾಮಸರ ನಾರಿಯರ ಪ್ರಾಶ್ನಿಕರ ಶ್ರೋತೃಗಳನಾಲೋಕ ಮಾತ್ರದಿಂದ ||
ಕಾಮಿತವನಿತ್ತು ಪಾಲನಗೈವ ಸಂಯಮಿಾ |
ಸೋಮ ಲಾಲಿಪುದಾತ್ಮವಿದ್ಯೆಯಿಂದಲಿ ನರರ |
ಸೌಮನಸ್ಯದೊಳಾಗೆ ಪೇಳುವುದು ಕೇಳುವುದು ದುಸ್ತರಂ ವಿಸ್ತರಮೆನೆ || (36)

ಆದಡೆ ಯಥಾಶಕ್ತಿಯುಳ್ಳನಕ ಸೂಚಿಸುವೆ |
ನಾದಿನಾರಾಯಣಾಂಶನ ಬಾದರಾಯಣನ |
ಪಾದಪದ್ಮಂಗಳಂ ನೆನೆದು ರಘುವೀರನಂ ವೈದೇಹಿಲಕ್ಷ್ಮಣರನು ||
ಮೋದದಿಂ ಭರತಶತ್ರುಘ್ನಪವನಾತ್ಮಜರ |
ನಾದರದಿ ಭಜಿಸುತಂ ಸೂತ ಪ್ರಾಙ್ಮುಖನಾಗಿ |
ವೇದಪುರುಷನಿಗೆರಗಿ ಕುಳ್ಳಿರ್ದು ಜಾನಿಸಿದನರೆಮುಗಿದು ದಿಟ್ಟಗಳನು || (37)

ಮಿನುಗಿಡುವ ಸನ್ಮಣೀಗಣಖಚಿತಸೌವರ್ಣ |
ಘನತರಸ್ತಂಭಗಳ ವಿದ್ರುಮದ ಲೋವೆಗಳ |
ತನಿವೆಳಗು ಬಜ್ಜರದ ಬೋದಿಗೆಯ ಹರಿಕಾಂತದರಳೆಲೆಗಳುರುಕಾಂತಿಯ ||
ಮನೆಯೆನಿಪ ಮಂಟಪದ ಮಧ್ಯಪ್ರದೇಶದೊಳ್ |
ದಿನಪಕರದೀಧಿತಿಯನಾಂತ ಸಿಂಹಾಸನವ |
ಮುನಿ ನಿರೀಕ್ಷಣೆಗೈದು ಮುಕ್ತಾಕ್ಷನಾಗುತಂ ಹೃತ್ಪುಂಡರೀಕದಲ್ಲಿ || (38)

ದಿನಮಣಿಸಹಸ್ರಂಗಳುದಯಮೊಂದೇ ಬಾರಿ |
ಮಿನುಗಿದೊಲ್ ಶೀತಾಂಶು ಸಾಸಿರದ ಸಂಖ್ಯೆಯಿಂ-|
ದನಲತಾರಾನಿಚಯ ವಿದ್ಯುತ್ಸಮೂಹಂಗಳೊಂದೆನಿಸಿ ಜನಿಸಿದಂತೆ ||
ತನುವುತಾಪಗಳಿಲ್ಲದನವರತ ಭಾಸಿಸುವ ||
ಮುನಿಜನೋಪಾಸಿತದಖಂಡತೇಜೋರಾಶಿ |
ಖನಿಯಾಗಿ ಗದ್ದುಗೆಯ ಮಧ್ಯಪ್ರದೇಶದೊಳು ಬೆಳಗಿತಾ ಮುನಿಯಕಣ್ಗೆ || (39)

ಮಣಿಕಿರೀಟೋದ್ಭವದ ರೋಚಿಗಳ ವೀಚಿಗಳ |
ಗುಣವಾಂತ ನಿರಿಗುರುಳ ಕಾಳಿರುಳ ಕಾಳಿಮದ |
ಪಣೆಯ ಮೃಗಮದತಿಲಕದಣ್ಪುಗಳ ಕಂಪುಗಳ ಪೆರೆನೊಸಲ ಭ್ರೂಲತೆಗಳ ||
ಕುಣಿಸುತಿರುವೆಳೆಮಿಂಚಿನಂಬಕಗಳಂಬಕಗ-|
ಳೆಣೆಯಾಂತ ನಾಸಿಕದ ಕನಕರುಚಿ ಕನಕರುಚಿ |
ಮಣಿಮುಕುರಕದಪುಗಳ ಭಾಸುರದ ಭಾಸುರಶ್ರೀಯೆನಿಪ ಶ್ರುತಿಗಳಿಂದೆ || (40)

ಅಧರಪ್ರವಾಳರುಚಿಯಧರಪ್ರವಾಳರುಚಿ।
ಭಿದುರರದನದ ಪಂಕ್ತಿ ಭಿದುರರದನದ ಪಂಕ್ತಿ।
ವಿಧುಕೌಮುದೀಹಾಸ ವಿಧುಕೌಮುದೀಹಾಸ ಭಾಸಿಸುವ ಕುಂಡಲಗಳ॥
ಸದರಗಳೆವುತಲಿರುವ ಸದರಗಳ ವಿಭ್ರಮಂ।
ಪದುಮತುಲಸೀಹಾರ ಪದುಮತುಲಸೀಹಾರ।
ಮುದವಾಂತ ವತ್ಸ ಸಮ್ಮದವಾಂತ ವತ್ಸದಿಂ ರಘುನಾಥ ರಂಜಿಸಿದನು॥ (41)

ವಾಮಾಂಕದಲ್ಲಿರ್ಪ ವೈದೇಹಿಯನ್ನಪ್ಪಿ।
ಪ್ರೇಮುಕರವೊಂದೊಪ್ಪೆ ವಾಮಕರವೊಂದರಿಂ।
ಸೋಮನಂತಿರುವಬ್ಜಧರ ಹಸ್ತವೊಂದರಿಂ ದಕ್ಷಿಣರಥಾಂಗ[1](ಪಾಣಿ)॥
ಕಾಮಿತಪ್ರದವರದಕರವಿರಾಜಿತವಾಗೆ।
ರಾಮಣೀಯಕಕಟಕಮಂಗುಳೀಕಪ್ರಭಾ।
ಸ್ತೋಮಮೆಣ್ದೆಸೆಯ ಬೆಳಗುತ್ತಿರಲು ಕಂಡನಾ ಸೂತ ಸಂಜಾತಮುದದೀ॥ (42)

ಚತುರದಶಭುವನಗಳನಾಂತಿರ್ಪ ಕಿರುಡೊಳ್ಳು।
ಚತುರಾಸ್ಯತೌರೆನಿಪ ನಾಭೀಸರೋಜಮುಂ।
ಚತುರತರ ಭಾವರುಹರುಹಲಿಂಗದತಿಶಯದ ಊರುದ್ವಯಗಳಿಂದೆ॥
ಸತತಗತಿಸಂಭೂತಕರವಿರಾಜಿತಮೆನಿಸು-।
ವತಿಶಯದ ದಕ್ಷಿಣಪದಾಗ್ರದಿಂ ರಂಜಿಸುವ।
ಚತುರತೆಯ ಸೀತಾಗ್ರವರ್ತಿಯಹ ಸವ್ಯಪದಶ್ರೀ ಕರಂ ರಾಜಿಸಿದುದು॥ (43)

ಸಕಲನಿಗಮಾಗಮಪುರಾಣೇತಿಹಾಸಂಗ।
ಳಖಿಲಸುರಮುನಿಮುಖ್ಯರಮಲಕ್ರತುಋತುಪೂಗ।
[2]ನಿಖಿಲ(ಗಿರಿನದಿನದಂ) ಸಚರಾಚರಂಗಳಂ ಕಂಡನಂಗಾಂಗದಲ್ಲಿ॥
ಭೃಕುಟಿಯಿಂ ಶತ್ರುಘ್ನ ಪಿಡಿದಾತಪತ್ರಮುಂ।
ಸುಕರದಿಂ ಚಾಮರವ ಕೈಕೇಯಭರತನುಂ।
ಪ್ರಕಟದಿಂ ಸುಗ್ರೀವ ಪಿಡಿದಿರ್ದ ವ್ಯಜನಮುಂ ಸೌಮಿತ್ರಿ ವರಚಾಪವ॥ (44)

ಇಂತನಂತಾಕೃತಿಯನಾಂತ ವಿಶ್ವಾಕಾರ।
ಶಾಂತರಸಪೂರಿತಕಟಾಕ್ಷವೀಕ್ಷಣ ಮೌನಿ।
ಯಂತರಂಗದಿ ಬೆಳಗುವಾನಂದಚಿಜ್ಜ್ಯೋತಿಯಂಗುಷ್ಠ ಮಾತ್ರ ಮೆನಿಪ॥
ದಾಂತ ಸೀತಾಕಾಂತ ನಿರಘ ನಿಶ್ಚಿಂತನನಿ।
ತಾಂತ ರವಿಶಶಿನೇತ್ರಮಾಂತ ಸಂತರ ತಾಪ।
ತಾಂತ ಜಗದಂತರಾತ್ಮಕ ದಿವ್ಯಮೂರ್ತಿಯಂ ಕಂಡನಾ ಯತಿಕಾಂತನು॥ (45)

---

1 ರಥಾಂಗಶಯನ॥

2 ನಿಖಿಲಹಾಯುನದಿನಂ.

ವರ ಕೌಸ್ತುಭಾಂಕಿತಸುವಕ್ಷಕಮಲಾಕ್ಷನುಂ।
ಮಿರುಮಿರುಪ ಕೋದಂಡಹಸ್ತಪ್ರಶಸ್ತನುಂ।
ಸುರುಚಿರದ ಪೀತಾಂಬರಾಂತ ನಿಶ್ಚಿಂತನುಂ ಮಣಿರದನ ಸದ್ವದನನುಂ॥
ಹರಚಾಪಖಂಡನೋದ್ದಂಡದೋರ್ದಂಡನುಂ।
ತರುಣತುಲಸೀಮಾಲಕಂಠವೈಕುಂಠನುಂ।
ಧರಣಿಜಾಪತಿರಾಮ ಸೋಮಗುಣಧಾಮನುಂ ಬೆಳಗಿದಂ ಥಳಥಳಿಸುತೆ॥ (46)

ರಾಕೇಂದುಮಂಡಲವ ಕಂಡುರುಚಕೋರಿಯಂ।
ತಾ ಕಮಲನಾಭನಹ ರಘುರಾಮಚಂದ್ರನವ।
ಲೋಕನಂಗೈದೈದೆ ಸೂತಮುನಿ ರೋಮಾಂಚಪುಳಕದಿಂ ಚಳಕದಿಂದೆ॥
ವೈಖರಿಯೊಳಾನಂದವೆತ್ತು ಜಾನಿಸಿ ಮಗುಳೆ।
ಸೌಕರ್ಯಮಾನಸಸ್ಥಿತನಾಗಿ ಹರ್ಷದಿಂ।
ಕಾಕುತ್ಸ್ಥಸನ್ಮಹಾಮಹಿಮೆಯಂ ವಿಸ್ತರಿಸಲಾರಂಭಿಸಿಂತೆಂದನು॥ (47)

ಮುನಿತಿಲಕರವಧರಿಸಿ ಮುದದಿಂದ ಬೆಸಗೊಂಡ।
ಘನಪ್ರಶ್ನೆಗುತ್ತರವನೀಯಲ್ಕಸಾಧ್ಯಮುಂ।
ವನಜಾಸನಾದಿಗಳು ಪೇಳ್ದರಿದ ಗೋಪ್ಯದೊಳಗತಿಗೋಪ್ಯತರಮೆನ್ನುತ॥
ಅನುಭವಿಗಳರಿವುದೈ ಆದಡಂ ಎನ್ನ ಮನ।
ಕನುಭವಂ ತೋರ್ದನಿತ ವಿಸ್ತರಿಸಿ ಪೇಳ್ದಪೆಂ।
ಘನಕೇಶ ತುಹಿನಾದ್ರಿಸುತೆಗೊರೆದ ಚರಿತೆಯಂ ರಘುವೀರಮಂದಾರನ॥ (48)

ಪರಕೆ ಪರತರಮೆನಿಪ ಪಾವನಕೆ ಪಾವನದ।
ಸುರುಚಿರದ ಕೈವಲ್ಯಪದಮೆನಿಪ ಕೈಲಾಸ।
ಗಿರಿಯಲ್ಲಿ ಗಿರಿಜೇಶ ಮಣಿಸಭಾಮಂಟಪದಿ ಬ್ರಹ್ಮೇಂದ್ರದಿಕ್ಪಾಲರ॥
ತರಣಿಶಶಿತಾರಕಾವಳಿನವಗ್ರಹಪ್ರಮಥ।
ನೆರವಿಪರಿವೇಷದೊಡ್ಡೋಲಗದಿ ಭೃಂಗೀಶ।
ನುರುನರ್ತನೋಲ್ಲಾಸವಿಭವದಿಂದಿರುತಿರ್ದನುಗ್ಗಡದಿ ನಂದೀಶನು॥ (49)

ಎಡದ ತೊಡೆಯೊಳಗಿರ್ದ ಘೂಡವಿಧರಸಂಜಾತೆ।
ಮೃಡ ನಮಃಶಿವ ತತ್ವನಿಧಿ ನಿರಂಜನ ನಿತ್ಯ।
ಜಡಜಂಗಮಾದಿಹೃನ್ನಿಳಯಚೇತನರೂಪ ಸರ್ವಜ್ಞ ಸರ್ವಸಾಕ್ಷಿ॥
ತುಡುಕಿದಾಪತ್ತಿನಲಿ ನೆನೆದಡೆಯು ನಾಮಮುಂ।
ಕೊಡುವೆ ಸ್ವರ್ವಾಭೀಷ್ಟಗಳ ಬೇಡಿದಂತೆ ನಿ-। [ಕಾಮಹರನೇ॥ (50)
ನ್ನಡಿ[1]ಗೆ(ರಗಿ ಕೇಳ್ವೆಯ)ನ್ನಯ ನುಡಿಯ ಲಾಲಿಪುದು ಕರುಣದಿಂ

1 ನ್ನಡಿಗೆ ಡಿಂಗರಿಗಳೆನ್ನಯ.

ಯೋಗಿಗಳು ಭೋಗಿಗಳು ವಿಹಿತಸತ್ಕರ್ಮಿಗಳು।
ತ್ಯಾಗಮುಳ್ಳವರಾತ್ಮನೈಷ್ಠಿಕರ್ ಶ್ವಪಚಿಗಳು।
ರಾಗದಿಂದಲಿ ಮಹಾಪಾತಕಂಗೈದವರು ಮರೆದೊಮ್ಮೆ ನೆನೆಯೆ ಭವದ॥
ರೋಗಮಂ ನೀಗಿ ನಿತ್ಯಾನಂದಸುಖಬೋಧ।
ರಾಗಿರ್ಪರದನೊರೆಯೆಬೇಕೆಂದು ಗಿರಿಜಾತೆ।
ಭೋಗಿಭೂಷಣನ ಬೆಸಗೊಂಡರತಿಹರ್ಷದಿಂದಿಂತೆಂದ ನಸುನಗುತಲಿ॥ (51)

ನೀತಿದಪ್ಪಿದ ಮಹಾಪಾತಕಿಗಳಾದೊಡಂ।
ಪ್ರೀತಿಭೀತಿಯು ಡಂಭವಣಕವೈರಂಗಳಲಿ।
ಜಾತು ಶ್ರೀರಾಮನಾಮಸ್ಮರಣೆಗೈದೊಡಂ ಶುಚಿಯಪ್ಪ ಮಲಿನವಳಿದು॥
ಜಾತ ಮರಣವ ಗೆಲಿದು ಪರಮಶ್ರೇಯಃಪದ।
ಖ್ಯಾತಮೆಂದೆನಿಪನಿದು ದಿಟಮೆನಲ್ ಕೇಳ್ದದ್ರಿ।
ಜಾತೆ ಮುಗುಳಿಂತೆಂದಳತಿವಿನಯದಿಂ ನಮಿಸಿ ಭೂತೇಶನಂಘ್ರಿಯುಗಕೆ॥ (52)

ಅರಿದರುಂ ಪರಬೊಮ್ಮಹರಿಹರಾತ್ಮಂ ತ್ರಿಗುಣ।
ಭರಿತ ಮುಮ್ಮೂರ್ತಿಗಳತೀತ ಪರಬೊಮ್ಮನೆಂ।
ಮರುತರದಿ ಪೇಳ್ದಪರು ನಿಗಮಾಗಮಂಗಳಲಿ ನಾನಾವಿಧಾನದಿಂದ॥
ಅರಿದುಕೊಂಬೆನದೆಂತು ಹರಿಯ ಸನ್ಮಹಿಮೆಯಂ।
ಪರಿಪರಿಯುಳೊರೆವುದಂ ಕರುಣನಿಧಿ ನೀನಲ್ಲ।
ವರಿದು ಸಂಶಯವ ಪರಿಹರಿಪರಿನ್ನಾರುಂಟು ಸರ್ವಜ್ಞ ದಯೆಗೈವುದು॥ (53)

ಹರಿಣಾಕ್ಷಿ ನೀ ಧನ್ಯೆ ಮಾನ್ಯೆ ಮೂಲೋಕದೊಳ್।
ಹರಿಯ ಚಾರಿತ್ರಮಂ ಬೆಸಗೊಂಬೆ ಬ್ರಹ್ಮಾದ್ಯ।
ರರಿಯದತಿಗೋಪ್ಯಮಂ ವಿಸ್ತರಿಸಿ ಪೇಳುವೆಂ ಸತ್ಯವಾಗೈಖರಿಯಲಿ॥
ನಿರುಪಮ ನಿರಾನಂದ ನಿತ್ಯ ನಿರ್ಮಲ ನಿರಘ।
ಪರಿಪೂರ್ಣ ಪರತತ್ವ ಪಾವನ ಪರಾತ್ಪರಂ।
ಸಿರಿಯರಸನುರು ನಾಮಸಾಸಿರಂಗಳ ತುಲ್ಯ ಶ್ರೀರಾಮನಾಮವನಘೆ॥ (54)

ಏಕಮೇವದ್ವಿತೀಯ ಸ್ವಗತಭೇದಗಳ।
ಸೋಕಿಲ್ಲದಣುವಿಗಣು ಘನಕೆ ಘನ ನಿರ್ಗುಣಂ।
ಸಾಕಾರನಕಲಂಕ ಸರ್ವಗತಸಾಕ್ಷಿಕಂ ಸತ್ಯ ಸಹಜಾನಂದನು॥
ಲೋಕೇಶ ಕಾರಣನಕಾರಣ ನಿರಂಜನಂ।
ಶ್ರೀಕರದ ಗಾಯತ್ರಿಬೋಧಿತ ಪರಬ್ರಹ್ಮ।
ಪಾಕಜಾಸನವಿನುತನಜರಾಮನೆಂದರಿತು ಸುಖಿಯಾಗು ಗಿರಿರಾಟ್ಸುತೆ॥ (55)

ಮೂರು ಗುಣದಿಂ ಮೂರು ಮೂರ್ತಿಗಳ ನಿರ್ಮಿಸುತೆ।
ಬೇರೆಬೇರವರಿಂಗೆ ಸೃಷ್ಟಿಸ್ಥಿತಿಯುಚರಮು।
ಕಾರಣಮನಿತ್ತು ಗುಣಮೂರು ತಾನೆಂದೆನಿಸಿ ಮಗುಳೆ ಗುಣಗಳನಂಟದೆ॥
ತಾರಕಬ್ರಹ್ಮಮೂರುತಿಯೆನಿಪನೀತ ರಘು।
ವೀರನೆಂದರಿತು ನಿಜಬೋಧಮಯಳಾಗೆಂದು। [ಗಳಿರ॥ (56)
ಮಾರಹರ ಪಾರ್ವತಿಯೊಳೊರೆದ ನಿಶ್ಚಯಮೆಂದು ಭಾವಿಪುದು ಮೌನಿ

ಮೃಡಮಹಾದೇವ ರಾಮನೆ ಪರಬ್ರಹ್ಮನೆಂ।
ದೊಡೆಯು ತದ್ವಿಧವನರಿದಪೆನೆಂತು ಗಾಯತ್ರಿ।
ಯೆಡೆಯು ಬೋಧಿತಮಾವುದದನು ವಿಸ್ತರಮಾಗಿ ಕೃಪೆಗೈಯವೇಳ್ಕುಮೆನಲು॥
ಪೊಡವಿಧರನಣುಗಿ ಕೇಳ್ವುದು ಗುಣಾಢ್ಯತ್ವದಿಂ।
ದೊಡನೆ ಕಾರ್ಯಾದಿತ್ವ ಶರಣಸಂರಕ್ಷಕತೆ।
ತಡೆಯದೆ ಪ್ರಕಾಶಕೆ ಪ್ರಕಾಶತ್ವಮೆಲ್ಲರಿಂ ಧೇಯತ್ವನೈಯಂತ್ರಿತೆ॥ (57)

ಎನಿಪುವೇ ಪರಬ್ರಹ್ಮಗುಣಗಣಂ ನಿತ್ಯಮಿದ।
ನನುಸರಿಸಿ ಗಾಯತ್ರಿ ಬೋಧಿಪುದು ಪ್ರಥಮದೊಳ್।
ಮಿನುಗುವ ಗುಣಾಢ್ಯತ್ವಮೆರಡರಿಂ ಲಕ್ಷಣಂ ತೃತಿಯದಿ ಶರಣ್ಯತ್ವವು॥
ಘನಭಾಸಕತ್ವಂ ಚತುರ್ಥಂ ಪ್ರಕಾಶಕಂ।
ವನಜಾಸ್ಯೆಯೈದನೆಯದದರಿಂದೆ ಧೇಯತ್ವ।
ಸನುಮತಂ ಷಷ್ಟದೊಳಗಂ ನಿಯಂತೃತ್ವಮೆಂದಖಿಳಮಂತ್ರಾರ್ಥಂಗಳು॥ (58)

ಪರಬೊಮ್ಮರಾಮನುಂ ನರರೂಪವಾಂತೈದಿ।
ಧರೆಯು ಮಾನಸನಂತೆ ಅನುದಿನಂ ಸುಖದುಃಖ।
ವೆರದಿರ್ದಡೇಂ ಪ್ರಯೋಜನ ರಾಮಚಾರಿತ್ರೆಯಾಮ್ನಾಯವೆಂದು ಬುಧರು॥
ಪರಿಪರಿಯೊಳೇನರಿದು ಪೇಳ್ದಪರು ಲೋಕದೊಳ।
ಗುರುತರದ ಕಾರ್ಯಗಳನೇಂ ಗೈದನೆಂಬುದಂ।
ಕರುಣದಿಂ ಪೇಳ್ವುದೆನಲಂಬಿಕಾವಚನಮಂ ಕೇಳುತಿಂತೆಂದ ಹರನು॥ (59)

ದಶಕಂಠನುರುಬೆಯಿಂ ತ್ರಿದಶಗಣ ಪ್ರಾರ್ಥಿಸಲ್।
ರಸೆಯಲ್ಲಿ ಮಾನುಷಾಕೃತಿಯೊಳುದ್ಭವಿಸುತಂ।
ಕುಶಿಕಸುತನಧ್ವರವ ಕಾಯ್ದು ಮುಚ್ಛಾಪಮಂ ನೆಗ್ಗೊತ್ತಿ ಜಾನಕಿಯನು॥
ಕುಶಲದಿಂ ಕರವಿಡಿದು ಕೋಪಿಸಿದ ಭಾರ್ಗವನ।
ವಶಗೆಯ್ದು ಪಿತನಾಜ್ಞೆಯಿಂದ ವಿಪಿನಕೆ ನಡೆದು।
ಪಿಶಿತಾಶನವಿರಾಧಕಲಿಕಬಂಧಾದಿಗಳ ತರಿದು ಶಬರಿಯನು ಸಲಹಿ॥ (60)

ಮರುತಜನ ವಾಣಿಯಿಂ ಮಮತೆಯಿಂ ಪತಿಕರಿಸಿ।
ಹರಿಸುತನ ರಕ್ಷಿಸಲ್ ಹರಿತನಯನಂ ಮಡುಹಿ।
ಹರಿಗಳೊಡವೆರೆದು ಶರಸಿಧಿಯ ಬಂಧಿಸಿ ಕಾಯ್ದು ವರವಿಭೀಷಣನ ಮುದದಿ॥
ದುರುಳದಶಕಂಧರನ ಧರಣಿಯೊಳ್ ಕೆಡಪುತಲಿ
ಧರಣಿಜೆಯ ಕರವಿಡಿದು ಭರದಿ ಪುಷ್ಪಕವೇರಿ।
ಸಿರಿಕರದೊಳೆಸೆವಯೋಧ್ಯಾನಗರಮಂ ಸಾರಿ ಪಟ್ಟಾಭಿಷಿಕ್ತನಾಗಿ॥ (61

ಧರಣಿಸುರರಂ ಪೊರೆದು ಧರ್ಮಸ್ಥಾಪನೆಯನುಂ।
ಸ್ಥಿರಗೊಳಿಸಿ ಹಯಮೇಧಸಾಸಿರಂಗಳ ಮಾಡಿ।
ಸುರರ ಸಂತಸಗೊಳಿಸಿ ಸುಗ್ರೀವಮುಖ್ಯರಿಗೆ ಶುಭಫಲಂಗಳನೀವುತ॥
ತರಣಿಶಶಿಯುಳ್ಳನಕ ಸ್ಥಿರರಾಜ್ಯಮಾಳೆಂದು।
ಕರುಣದಿಂದಭಯಮಂ ಪಾಲಿಸಿ ವಿಭೀಷಣಗೆ।
ಮರುತಸುತನಂ ಪೊರೆದು ಮಗುಳೆ ವೈಕುಂಠಪದಸದನಕಂದಿಚ್ಛೈಸೈಯೆ॥ (62)

ಸಾರಿ ಸಿರಿಯೊಡವೆರೆದು ಸುಖದಿಂದಲಿರ್ದ ರಘು।
ವೀರನ ಚರಿತ್ರೆಯಂ ಬರೆದೋದಿ ಕೇಳಿದರ।
ಕಾರುಣ್ಯದಿಂ ಪೊರೆದು ಬ್ರಹ್ಮಲೋಕವ ಕೊಡುವನೆಂಬುದಿದು ಶ್ರುತಿಸಮ್ಮತ॥
ಸೀರೆ ಪರಬೊಮ್ಮನಿಗೆ ನಿತ್ಯವಹ ಗುಣಗಣದ।
ಚಾರುತರದಿಂದ ರಾಮಾಯಣವ ವಾಲ್ಮೀಕಿ।
ಧೀರನೊರೆದಿರ್ಪಸಾ ವಿಧಗಳಂ ಸಂಕುಚಿತಮಾಗಿ ಪೇಳುವೆನೆಂಬಿಕೆ॥ (63)

ಇನಿಯುಳೆ ಮಹಾವಿಷ್ಣುಗುಣಗಳನು ಕೊಳ್ಳಗ್ನಿ(?)।
ಯೆನಿಸುವಷ್ಟಾದಶ ಶ್ಲೋಕಂಗಳಲಿ ಪೇಳ್ವೆ।
ವೆನೆ ಗುಣಪ್ರಕರಣದಿ ಸೂಚಿಪುದು ಕಾರಣತೆ ಮೊದಲಾದ ತಿಂತಿಣಿಗಳ॥
ವನಜಾಕ್ಷನಿಗೆ ಸೃಷ್ಟಿಕರ್ತತ್ವಸೂಚಕಂ।
ವನಜಾಸನೋಪಮಿತ ಶ್ರೀಮಂತನಾತನೆಂ।
ವನುವದಿಪುದರಿನಿಷೂದನನೆಂಬ ಪದ್ಯದಿಂ ಸಂಹಾರಕಾರಣತೆಯು॥ (64)

ಜೀವಲೋಕಕ್ಕೆ ರಕ್ಷಿತನೆನ್ನುವೆಡೆಯಲ್ಲಿ।
ಭಾವಿಸಲು ಸ್ಥಿತಿ ಸರ್ವತಾಭಿಗತಮೆಂಬಲ್ಲಿ।
ಪಾವನ ಶರಣ್ಯತ್ವಮತುಲಿತಯಶಸ್ವಿಯುಂ ಜ್ಞಾನಸಂಪನ್ನನೆನಲು॥
ಕೋವಿದರು ಪೇಳ್ವ ಪ್ರಕಾಶಯುತ್ ಜ್ಞಾನಪದ।
ಭಾವದಿಂ ಜ್ಞಾನಾತ್ಮಸಾರ್ಥಕತೆ ಧರ್ಮಜ್ಞ।
ಪಾವನಿತ ಸತ್ಯಸಂಧನು ಪ್ರಜಾಹಿತಕರಂ ಎಂಬಲ್ಲಿ ಸಂಪನ್ನತೇ॥ (65)

ಸಂಧಿ ಎರಡಕ್ಕಂ ಪದಂಗಳ್ 98.

---

# ಮೂರನೆಯ ಸಂಧಿ

ಸೂಚನೆ॥ ರಾಮಣೀಯಕಮೆನಿಪ ರಾಮಚಾರಿತ್ರೆಯಂ।
ಪ್ರೇಮದಿಂ ಪ್ರಾಲೇಯಶೈಲಾತ್ಮಸಂಭವೆಗೆ।
ಸೋಮವಿಸ್ತರಮೆನಿಸಿ ಪೇಳ್ದರ್ಥಮಂ ಸೂತನೊರೆದ ಸನ್ಮುನಿನಿಕರಕೆ॥

ಮೊದಲೊರೆದ ಸಕಲಾರ್ಥಸಾರಮಂ ಲಾಲಿಸುತ।
ಮುದವೆತ್ತು ತುಹಿನಾದ್ರಿಜಾತೆಯು ಕಪರ್ದಿಯಂ।
ಸದಯ ಸತ್ಯಾತ್ಮ ನೀನೊರೆದಖಿಳನಿಗಮಾರ್ಥತತ್ವ ರಘುವರನ ಚರಿತೆ॥
ಪದುಮಜಾಸನನಿಂದ ಪಾಡಿಪೊಗಳುತಲಿರುವ।
ಸದಮಲಶ್ರೀಕಾವ್ಯಬೋಧೆ ವಾಲ್ಮೀಕಿಗೆಂ-।
ತುದಯಿಸಿತು ಮತ್ತದಂ ವಿಸ್ತರಂಗೈವುದೆನಲಿಂತೆಂದ ಪರಮೇಶನು॥ (1)

* ಸುರಮೌನಿಯೊಂದು ದಿನ ಧರೆಯಂ ನಿರೀಕ್ಷಿಪೊಡೆ।
ಕರುಣದಿಂದೈತರಲ್ ಕಂಡು ಪ್ರಾಚೇತಸಂ।
ಕರಗಳಂ ಮುಗಿದರ್ಘ್ಯಪಾದ್ಯಾಸನಗಳಿತ್ತು ಕಲ್ಯಾಣದಿರವ ಕೇಳಿ॥
ಪರಮಪಾವನವಿಷ್ಣುಚರಿತಾಮೃತೋದಧಿಯೆ।
ಸರಸಿಜಾಸನತನಯ ಸಕಲಾಗಮಜ್ಞ ನೀ।
ಗುರುವಲ್ತೆ ಲೋಕದೊಳಗರಿತರಿಯದಿಹ ಜನರ ಪೊರೆಯುವ ನಿಮಿತ್ತದಿಂದ॥ (2)

[1]ಆವಾತ ಲೋಕದೊಳು ಗುಣವೀರ್ಯ ಧರ್ಮಜ್ಞ।
ನಾವನ ಕೃತಜ್ಞ ನಿಜವಾಣಿ ದೃಢವಿಕ್ರಮಂ।
ಪಾವನಚರಿತ್ರನುಂ ಸಕಲಭೂತಹಿತಾರ್ಥಿ ವಿದ್ವಾಂಸ ನೀತಿವಿದನು॥
ಭಾವಂ ಸಮರ್ಥ ಪ್ರಿಯದರ್ಶನುಂ ಆತ್ಮವಿ-।
ತ್ಕೋವಿದಂ ಕ್ರೋಧಜಿತ ದ್ಯುತಿಮಂತನನಸೂಯ।
ನಾವವನ ರೋಷಮನ್ನೀಕ್ಷಿಸುತ ಸುರರೆಲ್ಲ ಭಯಗೊಂಬರಾಜಿಯೊಳಗೆ॥ (3)

---

* ಇಲ್ಲಿಂದ ಮುಂದಕ್ಕೆ ಕಥೆಯು ಹೆಚ್ಚಿನ ಮಟ್ಟಿಗೆ ವಾಲ್ಮೀಕಿರಾಮಾಯಣವನ್ನೇ ಅನುಸರಿಸುತ್ತಿದ್ದು ಕೆಲವು ಕಡೆಗಳಲ್ಲಿ ವಾಲ್ಮೀಕಿರಾಮಾಯಣದ ಸಂಸ್ಕೃತಶ್ಲೋಕಗಳ ಅನುವಾದರೂಪದ ಪದ್ಯಗಳಿಂದ ಕೂಡಿರುತ್ತದೆ. ಅದರಲ್ಲೂ ಈ ಸಂಧಿಯು ಪೂರ್ಣವಾಗಿ ವಾಲ್ಮೀಕಿರಾಮಾಯಣದ ಮೊದಲನೇ ಮತ್ತು ಎರಡನೇ ಸರ್ಗಗಳ ಅನುವಾದವೇ ಎಂಬಂತಿದೆ. ಉದಾ:—ಮೇಲಿನ ಪದ್ಯಗಳನ್ನು ಈ ಕೆಳಗಣ ಶ್ಲೋಕಗಳೊಡನೆ ಹೋಲಿಸಿ ನೋಡಿರಿ.

ತಪಸ್ಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂವರಂ ॥
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಂ ॥ ೧ ॥

1 ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್ ಕಶ್ಚವೀರ್ಯವಾನ್ ॥
ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾಕ್ಯೋ ದೃಢವ್ರತಃ ॥ ೨ ॥

[2]ಈ ವಿಧವನರಿಯೆ ಕೌತೂಹಲದಿ ಮಚ್ಚಿತ್ತ।
ತಾವಕಪದಾಬ್ಜಮಂ ಬೆಸಗೊಂಬರಿಚ್ಛೈಸಿ।
ಭಾವಭಕ್ತಿಯೊಳಿದಕೊ ನೀನಲ್ಲದನ್ಯರಿನ್ನಿಲ್ಲವಿಾ ಜಗತಿಯೊಳಗೆ॥
ಕೋವಿದರು ಮೆಚ್ಚುವೊಲುವುಸುರುವುದು ದಯದಿಂದ।
ಪಾವನಚರಿತ್ರೆಯಂ ವಿಸ್ತರಿಸಿ ಪೇಳ್ವುದೆನೆ।
ಭಾವಭವ ಪಿತೃಲೀಲೆಯನು ವಿವರಣವ ಗೈದ ಬಾಸೆವೆಣ್ಣಿನಿಯಸೂನು॥ (4)

[3]ರಾಮಚಾರಿತ್ರೆಯಂ ಬೆಸಗೊಂಬ ಪ್ರಾಜ್ಞನೈ।
ನೀ ಮಹಾಮುನಿವರಂ ನಿಖಿಲಜನಹಿತಕಾರಿ।
ಯಿಾ ಮಹಿಯೊಳೀ ಗುಣಂ ದುರ್ಲಭವು ಕೇಳುವುದುಪೇಳುವುದು ಮರ್ತ್ಯತತಿಗೆ॥
ನೇಮದಿಂದೊಂದೆಡೆಯೊಳೀ ಗುಣಂಗಳ ರಾಶಿ।
ಕಾಮಮೆನಲೊಪ್ಪಿರುವುದತಿಶಯಂ ತಾಪಸನೆ।
ಪ್ರೇಮದಿಂ ಪಿತನೊರೆದ ಪರಿವಿಡಿದು ನಾನುಸುರ್ವೆ ಸಾವಧಾನದೊಳಾಲಿಸು॥ (5)

ಅಗಜೆ ಕೇಳಿಕ್ಷ್ವಾಕುವಂಶಸಂಭವ ರಾಮು।
ನಿಗಮಾಂತಸಂವೇದ್ಯ ನಿಯತಾತ್ಮದ್ಯುತಿಕಲಿತ।
ಮಿಗೆ ವೀರ್ಯ ಧೃತಿಬುದ್ಧಿನೀತಿಯುತ ಶ್ರೀಯುತಂವಾಗ್ಮಿ ರಿಪುಹರ್ತ ಭರ್ತ॥
ಬಗೆಬಗೆಯ ಶಾಸ್ತ್ರಜ್ಞ ಚಾಪವಿದ್ಯಾನಿರತ।
ಸೊಗಸೆನಿಪ ವಿಪುಲಾಂಸ ದೀರ್ಘಬಾಹಾಕಲಿತ।
ನಿಗಿನಿಗಿಪ ಕಂಬುಗಳ ವಿಸ್ತರಕಪೋಲನುಂ ಘನಮಹಿಮ ಗೂಢಜತ್ರು॥ (6)

---

ಚಾರಿತ್ರೇಣಚ ಕೋ ಯುಕ್ತಸ್ಸರ್ವಭೂತೇಷು ಕೋ ಹಿತಃ॥
ವಿದ್ವಾನ್ ಕಃ ಕಸ್ಸಮರ್ಥಶ್ಚ ಕಶ್ಚೈಕ ಪ್ರಿಯದರ್ಶನಃ॥ ೩॥
ಆತ್ಮವಾನ್ ಕೋ ಜಿತಕ್ರೋಧೋ ದ್ಯುತಿಮಾನ್ ಕೋನಸೂಯಕಃ॥
ಕಸ್ಯಬಿಭ್ಯತಿ ದೇವಾಶ್ಚ ಜಾತರೋಷಸ್ಯ ಸಂಯುಗೇ॥ ೪॥

2 ಏತದಿಚ್ಛಾಮ್ಯಹಂ ಶ್ರೋತುಂ ಪರಂ ಕೌತೂಹಲಂಹಿಮೆ॥
ಮಹರ್ಷೇತ್ವಂ ಸಮರ್ಥೋಸಿ ಜ್ಞಾತುಮೇವಂ ವಿಧಂನರಂ॥ ೫॥
ಶ್ರುತ್ವಾಚೈತತ್ತ್ರಿಲೋಕಜ್ಞೋ ವಾಲ್ಮೀಕೇರ್ನಾರದೋವಚಃ॥
ಶ್ರೂಯತಾಮಿತಿಚಾಮಂತ್ರ್ಯ ಪ್ರಹೃಷ್ಟೋ ವಾಕ್ಯಮಬ್ರವೀತ್॥ ೬॥

3 ಬಹವೋದುರ್ಲಭಾಶ್ಚೈವ ಯೇ ತ್ವಯಾ ಕೀರ್ತಿತಾಗುಣಾಃ॥
ಮುನೇ ವಕ್ಷ್ಯಾಮ್ಯಹಂ ಬುಧ್ವಾತೈರ್ಯುಕ್ತಶ್ಶ್ರೂಯತಾಂನರಃ॥ ೭॥

ಹೀಗೆಯೇ ಈ ಶ್ಲೋಕಗಳ ಅನುವಾದವು ಮೇಲಿನ ಪದ್ಯಗಳಲ್ಲಿ ಕ್ರಮವಾಗಿ ಮುಂದುವರಿಯುವುದು.

ವರವಿಶಾಲಸುವಕ್ಷ ಸರಸೀರುಹಕಟಾಕ್ಷ।
ಮೆರೆವ ಸುಲಲಾಟೋತ್ತಮಾಂಗದ ಕಿರೀಟಧರ।
ಸುರುಚಿರದ ಸದ್ವರ್ಣ ಶ್ರೀಕರಾಕೃತಿಕರ್ಣ ಸಮಸಮವಿಭಕ್ತಾಂಗನು॥
ಗುರುಸಮಾಖ್ಯಾಕಲಿತ ಶುಚಿ ದಕ್ಷ ಸೀಮಂತ।
ಧರೆಯ ಜನಹಿತಕಾರಿ ಧರ್ಮಜ್ಞ ಸತ್ಯಯುತ।
ಸರಸಿಜಾಸನಸಮಂ ಸರ್ವರಕ್ಷಕ ಲೋಕಕಾನಂದಕರಮೆನಿಪನು॥ (7)

[1]ಸಿಂಧುಸಮಗಾಂಭೀರ್ಯ ಶಿಶಿರನಗನಿಭಧೈರ್ಯ।
ನಿಂದಿರಾವರತೇಜ ವಿನತಾರ್ಥಿಸುರಭೂಜ।
ನಿಂದುಸಮಶುಭಕರಂ ವಿಪುಲಾಗ್ನಿಸಮಕ್ರೋಧ ಕ್ಷಮೆಯಿಂದ ಕ್ಷಮೆಯ ಪೋಲ್ಪ॥
ಇಂದುಮೌಳಿಯ ಸಖನ ಸಮವದಾನ್ಯನು ಸತ್ಯ।
ದಿಂದ ಸಾಕ್ಷಾತ್ಧರ್ಮಪ್ರತಿರೂಪನಿನಿತುಗುಣ।
ಬೃಂದಕಾಲಯಮೆನಿಪ ರಾಮನಂ ವೀಕ್ಷಿಸುತಲೊಂದು ದಿನ ಪಂಕ್ತಿರಥನು॥ (8)

ಭುವನಹಿತಕೋಸುಗಂ ಯುವರಾಜಪಟ್ಟಮಂ।
ಕುವಲಯದಳಶ್ಯಾಮ ರಾಮನಿಗೆ ಕಟ್ಟಲ್ಕೆ।
ತವಕದಿಂ ದಶರಥಂ ಸಂಭ್ರಮೋಜ್ಜುಗವೆತ್ತು ಸಕಲಸಂಭಾರಗಳನು॥
ಕುವಲಯಂ ಮೆಚ್ಚುವೋಲ್ ಕುಶಲದಿಂ ಸಂಗ್ರಹಿಸೆ।
ನವಮಹೋತ್ಸವದಿರವನಾಲಿಸುತ ಕೇಕಯನ।
ಕುವರಿ ಚಾಪಲ್ಯದಿಂ ಕುಬ್ಜೆಯ ದುರುಕ್ತಿಯಿಂ ಪೂರ್ವವರಗಳನು ನೆನೆದು॥ (9)

ಬೇಡಿದಳು ದಶರಥಂ ಬೇಗದಿಂ ಭರತನಿಗೆ।
ನಾಡಾಧಿಪತ್ಯಮಂ ಕಾನಂನಾಂತರವಾಸ।
ಕೂಡೆ ರಘುವರಗೆನುವ ಅರ್ಥದ್ವಯಂಗಳಂ ನಿಷ್ಠುರದ ನುಡಿಗಳಿಂದ॥
ಮೋಡಿ ಮುರಿದವನಿಪಂ ಧರ್ಮಪಾಶದೊಳೊಂದು।
ಗೂಡಿ ಪಿರಿಯಣುಗನಂ ಪುರದಿಂದ ಪೊರಮಡಿಸೆ।
ಜೋಡಗಲದವನಿಸುತೆಯೊಡನೈದಿ ಸೌಮಿತ್ರಿ ಮಿತ್ರತೆಯನನುಸರಿಸಲು॥ (10)

---

1 ಸಮುದ್ರ ಇವ ಗಾಂಭೀರ್ಯೆ ಧೈರ್ಯೇಣ ಹಿಮವಾನಿವ॥
ವಿಷ್ಣುನಾ ಸದೃಶೋವೀರ್ಯೇ ಸೋಮವತ್ಪ್ರಿಯದರ್ಶನಃ ॥ ೧೭ ॥
ಕಾಲಾಗ್ನಿಸದೃಶಃ ಕ್ರೋಧೇ ಕ್ಷಮಯಾ ಪೃಥಿವೀಸಮಃ।
ಧನದೇನ ಸಮಸ್ತ್ಯಾಗೆ ಸತ್ಯೇ ಧರ್ಮಇವಾಪರಃ ॥ ೧೮ ॥

(ವಾ. ರಾ:—ಪ್ರಥಮಸ್ಸರ್ಗ.)

ವನಕೆ ಗಮನಿಪ ರಾಮಲಕ್ಷ್ಮಣಾದಿಗಳಿರವ ।
ನನುಸರಿಸಿ ಪುರಜನಂ ಮನದ ಸಂತಾಪದೊಳು ।
ತನತನಗೆ ಬೆಂಬತ್ತಿ ಬರೆ ಕಂಡು ಸೈಪಿಟ್ಟು ಮನ್ನಿಸುತ ಕಳುಹುತವರ ॥
ಮನವೊಲಿದು ವರಶೃಂಗಿಬೇರನಾಮಕಪುರದ ।
ಜನಪಪ್ರಿಯ ನಿಷಾದಾಧಿಪಗುಹನ ಕಾಣುತಂ ।
ವನಜಾಕ್ಷಿಸೀತೆಲಕ್ಷ್ಮಣಸಹಿತ ಬನದೊಳಗೆ ರಾಘವಂ ವಿಹರಿಸಿದನು ॥ (11)

ಭರದಿಂದ ನಾವಿಕಗೆ ಲಕ್ಷ್ಮಣಪ್ರಿಯಮೆಂಬ ।
ತರಪಣ್ಯಮನ್ನಿತ್ತು ಹರಮೌಳಿಗಾಭರಣ ।
ಕರಮೆಸೆವ ಸ್ವರ್ಧುನಿಯ ದಾಂಟಿ ಲಕ್ಷ್ಮಣಸೀತೆಸಹಿತ ರಘುವಂಶಕೇತು ॥
ವರ ಭರದ್ವಾಜನನುಶಾಸನದಿ ನಡೆದರ ।
ಲ್ಲಿರದೈದಿ ಚಿತ್ರಕೂಟಾದ್ರಿಯಲಿ ಪರ್ಣಮಂ ।
ದಿರಗಟ್ಟಿ ವಾಸವಾಗಿರುತಿರ್ದರುತ್ಸವದೊಳಾನಂದ ಪೊರಪೊಣ್ಮಲು ॥ (12)

ಚಿತ್ರಕೂಟಾದ್ರಿಯೊಳು ರಘುವೀರನಿರಲಿತ್ತ ।
ಪುತ್ರಶೋಕದಿ ಸಗ್ಗಕೈದಿ ದಶರಥರಾಜ ।
ಸುತ್ರಾಮ ಗದ್ದುಗೆಯನಡರೆ ಮೈತ್ರಾವರುಣಿಮುಖ್ಯಮುನಿವರರೆಲ್ಲರು ॥
ಧಾತ್ರಿಗಧಿಪತಿಯಪ್ಪುದೆಂದು ಭರತಗೆ ಪೇಳೆ ।
ವಿತ್ರಾಸಭಕ್ತಿಯಿಂದಿಚ್ಛೈಗೈಯದೆ ಧರೆಯ ।
ಶತ್ರುಘ್ನಸಹವಾಗಿ ಬಂದು ಶ್ರೀರಾಮನಂ ಕಂಡ ಕೈಕಾತ್ಮಭವನು ॥ (13)

ಚರಣಕಾನತನಾಗಿ ದೀನಭಾವದಿ ಭರತ ।
ಕರುಣಯುತರಘುವೀರ ಕಲ್ಯಾಣಕರಮೆನಿಪ ।
ದೊರೆತನದ ಭಾರಮಂ ವಹಿಸೆನ್ನ ರಕ್ಷಿಸೆಂದೆನುತ ವಿಜ್ಞಾಪಿಸಿದಡೆ ॥
ತರುಣ ಕೇಳ್ ರಾಜ್ಯಮಂ ಪತಿಕರಿಸು ನೀನೆಂದು ।
ಗುರು ನಿರೂಪಿಸಿದರ್ಥಮಂ ಮೀರಲೆನಗಳವೆ ।
ಧರೆಯ ಪಾಲಿಪುದೆಂದು ವರಪಾದುಕೆಗಳಿತ್ತು ಕಳುಹಿದ ಕನೀಯಸನನು ॥ (14)

ಪೊತ್ತು ಪಾವುಗೆಗಳನು ಪದುಳದಿಂ ಭರತ ಮುದ ।
ವೆತ್ತು ನಂದಿಗ್ರಾಮಕೈತಂದು ಪಾದುಕೆಯೊ ।
ಳಿತ್ತಾಧಿಪತ್ಯಮಂ ಮುನಿಯಂತೆ ಸೇವಿಸುತ ಮೋನದಿಂ ಮಮತೆಯಳಿದು ॥
ಚಿತ್ತದೊಳಗಗ್ರಜನ ಬರವ ಕಾಂಕ್ಷಿಸುತಿರ್ದ ।
ನತ್ತ ರಘುಕುಲತಿಲಕ ವೈದೇಹಿಲಕ್ಷ್ಮಣರ ।
ಜೊತ್ತಿನಿಂ ದಂಡಕಾರಣ್ಯಮಂ ಪೊಕ್ಕಲ್ಲಿ ತರಿದಂ ವಿರಾಧಖಳನ ॥ (15)

ಮುಂದೆ ಶರಭಂಗನ ಸುತೀಕ್ಷ್ಣಮುನಿಯಂ ಕಂಡು |
ಛಂದದಿಂ ಕೊಡನಣುಗನವನಗ್ರಜಾತನಂ |
ಬಂಧುರಸ್ನೇಹದಿಂದೀಕ್ಷಿಸುತ ಕಲಶಜನ ನೇಮದಿಂದಿಂದ್ರಧನುವ ॥
ಕುಂದಿಲ್ಲದಿಹ ಬಾಣಖಡ್ಗಮಂ ಸ್ವೀಕರಿಸಿ |
ಬೃಂದಾರಕರ್ನಲಿಯೆ ಪಂಚವಟಿಯಲ್ಲಿರಲು |
ಬಂದರಲ್ಲಿಗೆ ಮಹಾಮೌನಿಗಳು ದಾನವರ ದಾರುಣವ ಪರಿಹರಿಸಲು ॥ (16)

ಮುನಿವರರು ರಕ್ಕಸರ ಘನತರೋಪದ್ರವವ |
ವಿನಯದಿಂ ಬಿನ್ನವಿಸೆ ವೇಗದಿಂ ಲಾಲಿಸುತ |
ಮನದೊಳಗೆ ಭಯಬೇಡ ಮಥಿಸುವೆವುಯೆನುತವರಿಗಭಯಹಸ್ತವನೀವುತ ॥
ವನಜಾಕ್ಷನಲ್ಲಿಂ ಜನಸ್ಥಾನಕೈತರಲು |
ಕನಲಿ ಖಳನನುಜಾತೆ ಕಾಮಮೋಹಿತಳಾಗಿ |
ಜನಪತಿಯ ಮೆಚ್ಚಿಸಲ್ಕೈತರಲ್ನಾಸಿಕವನಿಳುಹಿದಂ ಸೌಮಿತ್ರಿಯು ॥ (17)

ಆ ಶೂರ್ಪನಖಿಯ ನುಡಿಗೇಳುತ್ತ ಕನಲುತಂ |
ವಾಸಿಯಿಂ ಖರದೂಷಣಾದಿಗಳು ಬಲವೆರಸಿ |
ಬೇಸರದೆ ರಣಮುಖಕೆ ಬರಲವರ ಜೀವನವ ಪಿತೃಪತಿಯ ವಶಗೈಯಲು ॥
ಈಶವರಲಬ್ಧ ಬಲಯುತದಾನವಾಧೀಶ |
ನೀಸುಜನ ದಾಯಾದ್ಯರಳಿದ ವಾರ್ತೆಯ ಕೇಳ |
ಲೀಶನ ಲಲಾಟಾಗ್ನಿಕಲ್ಪಪ್ರತಿಘಾತಯುತನಾಗುತಂ ಗರ್ಜಿಸಿದನು ॥ (18)

ಮಾರೀಚಪುಣ್ಯಜನನೆಡೆಗೈದಿ ರಾವಣಂ |
ಕೋರಲ್ಸಹಾಯಮಂ ಕುಶಲಬುದ್ಧಿಯೊಳವ ನಿ |
ವಾರಿಸಲು ಕೋಪಿಸಿದ ಕಾಲವಶನೆಂದೆನಿಸಿ ಖಡ್ಗಜಾಲವ ನೆಗೆವುತ ॥
ಈ ರೀತಿಯಂ ಕಂಡು ವೇಷಾಂಗನಾಗುತಂ |
ಚಾರುವಾಕ್ಯಗಳಿಂದ ಚಂಚಲವನಪಹರಿಸೆ |
ಘೋರದಶಕಂಧರಂ ತಾಟಕಾತ್ಮಜನೊಡನೆ ಬಂದ ರಾಮಾಶ್ರಮಕ್ಕೆ॥ (19)

ಮೃಗರೂಪದಿಂ ಸುಳಿದು ಮಾರೀಚ ರಾಘವನ |
ಮಿಗೆ ದೂರಪಂಥಾನಕಂ ಸೆಳೆಯೆ ದಶಮೌಳಿ |
ಬಗೆಯದಾತ್ಮತ್ಯಾಗಮಂ ವನದಿ ಸೀತೆಯಂ ಕದ್ದೊಯ್ವ ಮಾರ್ಗದಲ್ಲಿ ॥
ತೆಗೆದಾ ಜಟಾಯುವಿನ ಪ್ರಾಣಗಳನಾ ಕ್ಷಣದಿ |
ಜಿಗಿಯೆ ಸದನಕೆ ರಾಮ ಗೃಧ್ರೇಶನಸುಗಳೆದ |
ಬಗೆಯ ಧರಣೀಜಾತೆ ಪೋದ ಪರಿಯಂ ಕೇಳಿ ಪಲುಬಿದಂ ನರರಂದದೆ ॥ (20)

ಬಂಧುರದ ಶೋಕದಿಂದಾ ಜಟಾಯುವ ವಿಷ್ಣು |
ಮಂದಿರಕೆ ಕಳುಪುತಂ ಬೆದಕುತವನೀಸುತೆಯ |
ಬಂದು ಕಂಡರು ಕಬಂಧನ ದಾರುಣಾಕೃತಿಯ ಕಡಿದಿಟ್ಟಡವನಟ್ಟೆಯಂ ॥
ಚಂದದಿಂದವನೊರೆದ ಮಾತನಾಲಿಸುತಾಗ |
ಲಂದು ಕರ್ಕಶವೀರನೈದಿ ಶಬರಿಯ ಪೊರೆಗೆ |
ವಂದನೆಯೊಳವಳಿತ್ತ ಸತ್ಕಾರಮಂ ಕೊಂಡು ಹೃದಯದಾನಂದದಿಂದೆ ॥ (21)

ವನವನಗಳರಸಿ ಪಂಪಾತೀರಕೈತಂದು |
ಹನುಮನಂ ನೋಡುತಾತನ ವಚನದಿಂದ ರವಿ |
ತನಯನಂ ಕಾಣುತ್ತ ವೃತ್ತಾಂತಮಂ ಪೇಳೆ ನಡೆತಂದನಾಗ ಬಳಿಕ ॥
ಘನಮುಹಿಮರಿವರೆನ್ನುತಗ್ನಿಸಾಕ್ಷಿಯೊಳಾಗ |
ವನಜಾಕ್ಷನೊಳು ಸಖ್ಯಮನ್ನೆಸಗಿ ತವಕದಿಂ |
ತನಗಡಸಿದತಿವೈರ ಸಂಗತಿಯನೆಲ್ಲಮಂ ವಿಸ್ತರದಿ ಬಿನ್ನವಿಸಿದಂ॥ (22)

ಪ್ರೀತಿಯಿಂ ಸುಗ್ರೀವನೊರೆದ ಮಧುರತೆವೆರೆದ |
ಮಾತನಾಲಿಸಿ ರಾಮು ಪ್ರಣಯದಿಂ ಪಾಕಾರಿ |
ಜಾತನಂ ಸಂಹರಿಪೆನೆನಲು ಸಂಶಯಗೊಂಡು ತದ್ವೀರ್ಯಜಿಜ್ಞಾಸೆಗೆ ॥
ಯಾತುಧಾನನ ಶವವ ತೋರೆ ಸನ್ಮನುವಂಶ |
ಕೇತು ಉಂಗುಟದಿಂದ ಮಿಾಂಟೆ ದಶಯೋಜನಕೆ |
ಖ್ಯಾತಮೆನಿಸುವ ತಾಳಸಪ್ತಕವನೊಂದಂಬಿನಿಂದ ಕತ್ತರಿಸಿ ಬಿಸುಟ ॥ (23)

ಹೇಮಪಿಂಗಳನೆನಿಪ ಸುಗ್ರೀವನಾಮ ಕಪಿ |
ಈ ಮಹಿಮೆಯಂ ಕಂಡು ಸಂತೋಷದಿಂದ ಶುಭ |
ನಾಮಕೀರ್ತನೆಗೈದು ಕಿಷ್ಕಿಂಧೆಗೈತಂದ ರಾಮಲಕ್ಷ್ಮಣರುಸಹಿತ ॥
ಗ್ರಾಮಸನ್ನಿಧಿಯೊಳಗೆ ಭೀಮನಾದಂ ಗೈಯ |
ಲಾ ಮಹಾಬಲಿ ವಾಲಿಯೈತರುವುದಂ ಕಂಡು |
ವಾಮೆ ನಾನಾವಿಧದಿ ಪೇಳಿದರೆ ಶಂಕಿಸದೆ ಬಂದ ರವಿತನಯನೆಡೆಗೆ ॥ (24)

ಹರಿತನಯನೈತರಲ್ ಹರಿಯಂ ನಿರೀಕ್ಷಿಸುತ |
ಶರಮೊಂದರಿಂದವನ ತರಿದು ರಘುರಾಜೇಂದ್ರ |
ಹರಿರಾಜ್ಯಭೋಗಮಂ ಹರುಷದಿಂ ಸುಗ್ರೀವಗೀಯಲವನತಿಪ್ರೀತಿಯಿಂ॥
ಧರಣಿಯೊಳಗುಳ್ಳಖಿಳಹರಿಗಳೆಲ್ಲರ ಕರೆಸಿ |
ಧರಣಿಜೆಯನರಸೆಂದು ದಶದಿಕ್ಕಿಗಂ ಕಳುಪೆ |
ಮರುತಜಂ ಸಂಪಾತಿಯೆನಿಪ ಸದ್ಗೃಧ್ರರಾಜನ ಮಾತಿನಿಂದೆ ಮುಂದೆ ॥ (25)

ಶತಯೋಜನಾಯತದ ಶರನಿಧಿಯನುಂ ದಾಂಟಿ |
ವಿತತಬಲರಾವಣನ ಪತ್ತನವನುಂ ಸಾರಿ |
ಪ್ರತಿಗೇಹಮನ್ನರಸಿ ಕಂಡಶೋಕಾವನದಿ ಜನಕಾತ್ಮಸಂಭವೆಯನು ‖
ಕತಿಪಯ ಸುವಾಣಿಯಿಂ ಕಾಂತೆಯುರುಶೋಕಮಂ |
ಹತಗೊಳಿಸಿ ಮುದ್ರೆಯಂ ಕೊಟ್ಟು ಸನ್ಮಾನದಿಂ |
ಕ್ಷಿತಿಜಾತೆಯಿತ್ತ ಚೂಡಾರತ್ನಮಂ ಕೊಂಡು ಮುರಿದನಾ ತೋರಣವನು ‖ (26)

ಸೇನಾಗ್ರಯಾಯಿಗಳನೈವರಂ ಸಂಹರಿಸಿ |
ಮಾನಗೈದಾಯುಷವ ಮಂತ್ರಿಸುತರೇಳ್ವರಿಗೆ |
ಕಾನನದೊಳಕ್ಷನನು ತರಿದು ಮಿಗೆ ನಾಲ್ಮೊಗನ ಬಾಣದಿಂ ಕಟ್ಟುವಡೆದು ‖
ವಾನರನ ಲೀಲೆಯಿಂದೈದಿ ಲಂಕಾಧಿಪದ |
ಶಾನನ ಸಮ್ಮುಖಕೆ ಧರ್ಮಾರ್ಥಕಲಿತವಹ | [ನಂಬ ‖ (27)
ಜ್ಞಾನಮಂ ತಿಳುಪಿ ತತ್ಪುರವ ನಿಮಿಷದೊಳುರುಹಿ ಕಳೆದು ಪೊಂಬೊಡೆಯ

ಮುಗುಳೆ ಶರಧಿಯ ದಾಂಟಿ ಮಾರುತಾತ್ಮಜ ಬೇಗ |
ರಘುವಂಶನಾಥನಂ ಕಂಡು ವಂದನೆಗೈದು |
ನಗಜಾತೆಗೆಣೆಯೆನಿಪ ನವ್ಯಚಾರಿತ್ರೆಯಂ ಸೀತೆಯಂ ಕಂಡ ಪರಿಯ ‖
ಮಿಗೆ ಪೇಳೆ ಶ್ರೀರಾಮ ಸುಗ್ರೀವನೊಡವೆರೆದು |
ನಗುತಮಂಬುಧಿಯೆಡೆಗೆ ನಡೆತಂದು ಪ್ರಾರ್ಥಿಸಲ್ |
ಬಗೆಗೊಳ್ಳದಿರಲೊಂದು ಕಣೆಯಿಂದ ಜಲಧಿಪನ ಸಂಕ್ಷೋಭಗೈದ ಬಳಿಕ ‖ (28)

ಶರನಿಧಿಯು ಶರಣೆನ್ನೆ ಕರುಣದಿಂ ರಕ್ಷಿಸುತ |
ವರವಿಶ್ವಕರ್ಮಸುತನಳನಿಂದ ಸೇತುವಂ |
ವಿರಚಿಸುತ ಲಂಕಾಭಿಧಾನಪುರಮಂ ಸಾರಿ ತರಿದು ರಾವಣನ ರಣದಿ ‖
ಧರಣಿಸುತೆಯಂ ಕಂಡು ಪರಮಲಜ್ಜೆಯನಾಂತು |
ಪರುಷಾಕ್ಷರಂಗಳಂ ಪರಿಜನರ ಮುಂಗಡೆಯೆ |
ಭರದೊಳಾಡಲ್ಕೇಳಿ ಪೊಕ್ಕು ಬರಲಗ್ನಿಯಿಂ ಪತಿಕರಿಸಿ ಪೂತಳೆನುತೆ ‖ (29)

ಪೂವೊನಲ್ಕರೆಯೆ ಲೇಖಾನಿವಹ ಮರೆಯೊಕ್ಕ |
ರಾವಣಾನುಜಗಿತ್ತು ರಾಜ್ಯಾಧಿಪತ್ಯಮಂ |
ದೇವತೆಗಳಿಂ ವರವ ಪಡೆದು ಪೊಡವಿಯೊಳಳಿದ ಶಾಖಾಮೃಗಂಗಳಸುವ ‖
ಭೂವಲಯ ಮೆಚ್ಚುವೋಲ್ ಪಡೆದಯೋಧ್ಯಾಪುರಕೆ |
ಶ್ರೀವರಂ ನಡೆಯಲೆಂದಡರಿ ಧನದನ ರಥವ |
ಪಾವನಭರದ್ವಾಜರಾಶ್ರಮಕ್ಕೈತಂದು ಪರಮಹಲ್ಲಾದದಿಂದೆ ‖ (30)

ಮರುತಸಂಭೂತನಂ ಭರತನಿಪ್ಪೆಡೆಗಟ್ಟಿ |
ಕರುಣದಿಂ ಸ್ತ್ರೀಯೊಡನೆ ಹರಸಖನ ರಥವೇರಿ |
ಭರದಿ ನಂದಿಗ್ರಾಮಕೈತಂದು ರಾಘವಂ ಸಹಜಾತರೊಂದುಗೂಡಿ ||
ವರಜಟಾವಲ್ಕಲಗಳುಳಿದು ಮಜ್ಜನ ಗೈದು |
ತರುಚರವ್ರಜದೊಡನೆ ನಿಜನಗರಕೈತಂದು |
ವಿರಚಿಸುತ ಪಟ್ಟಾಭಿಷೇಕರಚನೆಯ ಸರ್ವಸಂತೋಷಮಯನಾದನು || (31)

ಜನಕಜಾಪತಿ ರಾಜ್ಯಮಂ ಪಾಲನಂಗೈಯೆ |
ಘನತರದ ದುರ್ಭಿಕ್ಷರೋಗಬಾಧೆಗಳಿಲ್ಲ |
ವನಿತೆಯರ ವೈಧವ್ಯಮೆಂಬವಸ್ಥೆಗಳಿಲ್ಲ ಸುಚರಿತ್ರಮಳಿಯಲಿಲ್ಲ ||
ಜನರಿಗಿಲ್ಲಪಮೃತ್ಯು ಪುತ್ರಶೋಕಗಳಿಲ್ಲ |
ಮಿನುಗುವಗ್ನಿಯ ವಾತವಾರಿಗಳ ಸಂಕಟಂ |
ಧನಧಾನ್ಯಸಂಪದದಿ ಕ್ಷುದ್ಭಯಗಳಂ ನೀಗಿ ರಾಗದಿಂ ಲೋಕಮಿಹುದು || (32)

ಕೃತಯುಗದ ತೆರನಂತೆ ಕೃತಕೃತ್ಯರೆಂದೆನಿಸಿ |
ವಿತತ ಸಂಪದದಿಂದ ವಿಶ್ವಮತಿಶಯವೆತ್ತು |
ಸತತ ಶ್ರೀರಾಮನಂ ಪಾಡುತ್ತ ನೋಡುತ್ತ ಬೇಡುತ್ತ ಸೌಖ್ಯಪದವ ||
ಅತಿವಿಲಾಸದೊಳಿಪ್ಪನಬ್ಜನಾಭಂ ವಾಜಿ |
ಕ್ರತುಶತಗಳಂ ಮಾಡಿ ಶತಕೋಟಿ ಗೋಗಳಂ |
ಕ್ಷಿತಿಸುರರಿಗುಂ ಕೊಟ್ಟು ನಾಲ್ಕುವರ್ಣಂಗಳಂ ನಿಜಧರ್ಮನಿರತರೆನಿಸಿ || (33)

ರಾಘವಂ ಶತವರ್ಷಸಾಸಿರಶತಂಗಳಂ |
ರಾಗದಿಂ ರಾಜ್ಯಸುಖದನುಭವಂಗಳ ಮಾಡಿ |
ಯೋಗದಿಂ ನಾಲ್ಮೊಗನ ಲೋಕಕೈದುವ ಚರಿತೆ ಪಾವನಂ ಪಾಪಘ್ನವು ||
ಭೋಗಕರಮಾಯುಷ್ಯವರ್ಧನಂ ಶ್ರುತಿಹಿತಂ |
ರೋಗದಾರಿದ್ರ್ಯಹರ ಬರೆದೋದಿ ಕೇಳಿದರ |
ಸಾಗರಾತ್ಮಜೆಯರಸ ಸಂತುಷ್ಟನಾಗುತಂ ಸದ್ಗತಿಯ ಕರುಣಿಸುವನು || (34)

ದ್ವಿಜರು ಪಠಿಸಲು ದಿವ್ಯವಾಗ್ವಿಭವ ವೈಖರಿಯ |
ಭಜಿಸುವರು ಭೂಭುಜರು ಭಾಗ್ಯಭೋಗಂಗಳಂ |
ವಿಜಯಮುಂ ವಣಿಜರುಂ ವಸುರತ್ನರಾಜಿಗಳ ಪಾದಜರು ಪುಣ್ಯಂಗಳ ||
ಅಜನೆನಗೆ ಪೇಳ್ದರ್ಥಮಿದು ಸತ್ಯಮೆಂದರಿತು |
ದ್ವಿಜಕುಲೋತ್ತಮ ನಿತ್ಯಸುಖಿಯಪ್ಪುದೆನ್ನುತಂ |
ದ್ವಿಜರಾಜಕಾಂತಿಯುತನಾರದಂ ಕೃಪೆಯಿಂದಲೊರೆದನೀ ಶುಭಚರಿತೆಯ || (35)

ಇಂತೊರೆದು ಸುರಮೌನಿಯಾನಂದಭರದಿಂದ |
ಕಂತುಪಿತನಂ ಪೊಗಳುತೈದಲ್ಕೆ ವಾಲ್ಮೀಕಿ |
ಯಂತರಂಗದಿ ಜಾನಗೈವುತಿರೆ ನಿಮಿಷದೊಳ್ ಮಗುಳೊಂದ ನೆನೆದು ಮನದಿ ||
ಮುಂತೆಸೆವ ನಿಜಶಿಷ್ಯನಂ ಕರೆದು ಪೇಳಿದಂ |
ಸಂತಸದಿ ಸೂರ್ಯನಂಬರಮುಕುಟಕೈತಂದು |
ಕಾಂತಿಯಿಂ ಲೋಕತಾಪನೆಗೈವ ಮಧ್ಯಾಹ್ನಸಮಯಸತ್ಕೃತ್ಯಗಳಿಗೆ || (36)

ಚಾರುತರವಲ್ಕಲವ ತಹುದೆನೆ ಭರದ್ವಾಜ |
ಕಾರಣಿಕನೊಡನೈದೆ ಕಂಡ ರಮಣೀಯತರ |
ಸಾರಸದ ಸನ್ನಾದಸಾರಸಸುಸಾಮೋದಭಾರಮಾಂತೆಸೆದು ಸುಳಿವ ||
ಮಾರುತಾಂಕೂರಗಳ ಮಧುಲುಬ್ಧಭೃಂಗರ್ಘೀಂ |
ಕಾರಗಳ ಚಲಿಪೋರ್ಮಿಮಾಲೆಗಳ ಸುಳಿಯ ಶ್ರಂ |
ಗಾರದಿಂದೆಸೆವ ತಮಸಾಧುನಿಯ ಪಾವನೆಯ ಮೂಲೋಕಜೀವಿನಿಯನು || (37)

ನೋಡುತಾಪಗೆಯನುಂ ಛಾತ್ರನೊಡನಿಂತೆಂದ |
ನೋಡಿದನಕರ್ದಮವ ಸನ್ಮನುಷ್ಯನ ಮನದ |
ಬೀಡಿನಂತಿದೆ ಜಲಂ ತಿಳಿವಿನಿಂ ಮಜ್ಜನಂಗೈವೇಳ್ಕುಮೆನುತ ಮೌನಿ ||
ಕೂಡೆ ನದಿಯೊಳ್ ಮಿಂದು ಕುಳ್ಳಿರ್ದು ತತ್ತಟದಿ |
ಜಾಡಜಪ್ರಿಯಗರ್ಘ್ಯಮಿತ್ತು ಜಾನಿಸುತಿರಲ್ |
ಕೂಡುವಭ್ಯಾಸೆಯಲಿ ಕ್ರೌಂಚದ್ವಿಜಂಗಳುಂ ಮಿಥುನಪ್ರಯತ್ನಗೈಯೆ || (38)

ಅನಿತರೊಳ್ ಮತ್ತೋರ್ವ ಲುಬ್ಧಕಂ ಕ್ರೂರತರ |
ಮೆನಿಪ ಶರದಿಂದೆಚ್ಚು ಕೆಡಪಲ್ಪುಮಾಂಸನುಂ |
ವನಧಿಮೇಖಲೆಗೊರಗಿ ವಮನಗೈದಾ ಲೋಹಿತಾಂಗ ವೈಕಲ್ಯಧಿಂದೆ ||
ಘನಕಂಪನಂಗೊಳ್ಳುದಂ ನೋಡಿ ತತ್ಸತಿಯು |
ಘನಬಾಧದುಃಖದಿಂ ಗಕ್ಕನಳುತಿರೆ ಕಂಡು |
ಮುನಿಕುಲೋತ್ತಮ ಚಿತ್ತದನುತಾಪದಿಂ ಕರುಣಪುಟ್ಟಿ ಮಗುಳಿಂತೆಂದನು || (39)

* ಅನಿಮಿತ್ತದಿಂ ಪತಗಮಿಥುನದೊಳಗೊಂದನುಂ |
ವನಜಾಕ್ಷಸುತನಿಂದ ವಶವರ್ತಿಯಾಗಿರ್ದು |
ದನು ಪಾಪಿ ನೀನೆಚ್ಚೆ ಮಚ್ಚರದಿ ಪುರುಷನಂ ನಿಶಿತಾಸ್ತ್ರದಿಂ ನಿಮಿಷದಿ||
ನಿನಗೆ ಬಹುದಾಯುಷ್ಯಲಯಕಾಲವಶವರ್ತಿ |
ಯೆನಿಸಿದಂ ದುರ್ಬುದ್ಧಿವ್ಯಾಧ ಪೋಗೆಂದೆನುತ |
ಮುನಿವರಂ ಕ್ರೂರತರಶಾಪಮನ್ನೀಯುತ್ತ ಶಿಷ್ಯನೊಡನಿಂತೆಂದನು || (40)

---

* ಮಾನಿಷಾದ ಪ್ರತಿಷ್ಠಾಂತ್ವಮಗಮಶ್ಶಾಶ್ವತೀಸ್ಸಮಾಃ ||
ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಂ || ೧೫ ||
(ವಾ. ರಾ.—ದ್ವಿತೀಯಸ್ಸರ್ಗ)

ಈ ನಿಷಾದನ ಕಾಣುತೆನಗೆ ಛಂದೋಬದ್ಧ |
ನೂನವಿಲ್ಲದ ವರ್ಣಸಮುಗಾನಯೋಗ್ಯತೆಯು |
ನನ್ನಿರುವ ಶುಭವಾಣಿ ಸಂಘಟಿಸಿತೆಂತಕಟ ಮಜ್ಜಿಹ್ವೆಯಲ್ಲಿ ನಯದಿ ||
* "ಮಾನಿಷಾದ ಪ್ರತಿಷ್ಠಾಂತ್ವಮಗಮಃ" ಎಂಬ |
ಸಾನುರಾಗವನಾಂತು ಸರ್ವಲಕ್ಷಣ ಪದ್ಯ |
ಧ್ಯಾನಕೊದಗಿಪುದಿದುವೆ ದೈವಗತಿ ಪಕ್ಕಿಗಳ ಪಕ್ಕಗಳ ಸಿಕ್ಕುಗಳಲಿ || (41)

ಎಂದೊರೆದು ಶಿಷ್ಯನೊಳಗಂದು ತಾಪಸಮೌಳಿ |
ಛಂದದಿಂ ಮಾಧ್ಯಾಹ್ನಿಕಾದಿಕ್ರಿಯೆಗಳ ರಚಿಸಿ |
ಇಂದಿರಾವರ ನಂಘ್ರಿಸಾರಸವ ಧ್ಯಾನಿಸುತ ನಿಜ ತಪೋವಿಪಿನಕೈದಿ ||
ತಂದು ಸುಜ್ಞಾನತೆಯ ತವಕದಿಂ ಮೌನದಲಿ |
ಸಂದು ನಿಟ್ಟಸುತಿರ್ದ ನಿಖಿಲೇಶ ನಿರಘ ನಿ- |
ರ್ದ್ವಂದ್ವ ನಿತ್ಯಾನಂದ ನಿಜಬೋಧರೂಪ ರಘುಕುಲದೀಪ ಶ್ರೀರಾಮನಂ || (42)

ವಾಣೀವಿಲಾಸದಪರತ್ರಸಂಬಂಧಮಂ |
ಕಾಣುತ್ತ ಕಮಲಜಂ ಕಥನಗೈಯಲ್ಕೆಂದು |
ಕ್ಷೋಣಿಗೈತಂದಂತೆ ವಾಲ್ಮೀಕಿಯಾಶ್ರಮಕೆ ಬರಲು ತಂದೆಯು ತಂದೆಯ||
ಏಣಾಂಕಧರನ ಸಮನೆನಿಪ ಮುನಿತಿಲಕನುಂ |
ವಾಣೀಪತಿಯ ಕಂಡು ವಹಿಲದಿಂದಿದಿರೆದ್ದು |
ಕಾಣಿಕೆಯನಿತ್ತೆರಗುತಪಚಿತಿಯಗೈದೊಡನೆ ಕೈವಾರಿಸಿದ ಭಕ್ತಿಯಿಂ || (43)

ಪ್ರಾಚೇತಸಂ ಗೈದ ಪ್ರಬಲೋಪಚಾರಮಂ |
ವಾಚಾಧಿನಾಯಕಂ ಒಪ್ಪದಿಂದೊಡಬಟ್ಟು |
ಶ್ರೀಚಾಟುವಚನದಿಂದಮೃತ ತುಳ್ಕಾಡುವೊಲ್ ನಸುನಗೆಯೊಳಿಂತೆಂದನು |
ಈ ಚಾತುರಿಯ ಮಧುರವಾಣಿಗಾಲಯವಾದು |
ದೀ ಚಾಕಚಕ್ಯ ನಿಜವದನ ಮುನಿಕುಲತಿಲಕ |
ಗೋಚಾಪನಿಭತಪೋಧನನೊರೆದ ಮಾಳ್ಕೆಯೊಳ್ ವಿಸ್ತರಿಸು ರಾಮಕಥೆಯ|| (44)

ಮೃದುಶಬ್ದರಸಭಾವಮುದ್ದೆನಿಪಲಂಕಾರ |
ಬುಧಸೇವ್ಯಮೆನಿಪರ್ಥಭುಲ್ಲವಿಪ ಕಾವ್ಯಮಂ |
ಪದುಳದಿಂ ವಿರಚಿಪುದು ಪಾಪಘ್ನಸಾರ್ವಜನೀಮುಖ್ಯಲೋಕಂಗಳರಿತು |
ಸದಮಲಾನಂದಾಬ್ಧಿಯೊಳು ಮಜ್ಜನಂಗೈದು |
ಮಧುಸೂದನನ ಮಮತೆಯುಂ ತೊರೆದು ರಾವಣಂ |
ಸುಧೆಯು ಸೇವನೆಗೈದ ಸುರರನುಂ ಪಳಿಯುತಂ ಮುದದಿಂದಲಿರಲು ದಯದಿ || (45).

ದಿವಿಜರಕ್ಷಣೆಗೆಂದು ದಿವ್ಯಪುರುಷನು ದಯದಿ |
ರವಿವಂಶಸಂಭೂತದಶರಥಾತ್ಮಜನೆನಿಸಿ |
ಕುವಲಯದಿ ನರರಂತೆ ಕುಶಲದಿಂ ಬಗೆಬಗೆಯ ಚರ್ಯೆಗಳನನುಸರಿಸುತ ||
ನವಹಾಸ್ಯಶೋಕಕರುಣವುಕ್ರೋಧಮೊದಲಾದ |
ವಿವಿಧಕೃತ್ಯಂಗಳೆಲ್ಲವು ನಿನಗೆ ಪ್ರತ್ಯಕ್ಷ |
ಮವಗಾಹಮೆನಿಪುದೈ ಮಮತೆಯಿಂದೀ ಕೃತಿಯ ಮದ್ವಾಣಿಯಿಂದ ರಚಿಸು || (46)

ವರಮೌನಿ ನೀನೊರೆದ ಚರಿತೆಯಿದನಾವನುಂ |
ಬರೆದೋದಿ ಕೇಳಿದರೆ ಭವಬಂಧಹರಮಾಗಿ |
ಪರಿಪರಿಯ ಕಾಮಂಗಳೆಲ್ಲಮುಂ ಕೈಗೂಡಿ ಮೂಲೋಕವಾಸಿಯೆನಿಸಿ ||
ತರಣಿಶಶಿಯುಳ್ಳನಕ ತಾರಕಾಮನುಯೆನಿಸಿ |
ತಿರೆಯೊಳಗೆ ಶಾಶ್ವತಸ್ಥಾಯಿಯೆಂದೆನಿಸಿರಲಿ |
ಭರದಿ ನಿಜವದನದಿಂದೈತಂದ ವಾಣಿಯುಂ ಭಾಸಿಸಲಿ ಶ್ರುತಿಯಂದದಿ || (47)

ಎನುತೊರೆದು ಕಮಲಜಂ ಮನದ ಹರುಷದೊಳೈದೆ |
ಮುನಿವರಂ ಮಜ್ಜನಂಗೈದು ನಿರ್ಮಲನಾಗು |
ತನುವಿನಿಂದೊಲಿದು ಪ್ರಾಙ್ಮುಖನಾಗಿ ಕುಶೆಯಲ್ಲಿ ಕುಳ್ಳಿರ್ದು ಧ್ಯಾನಗೈಯೆ ||
ಮನುವಂಶಚರಿತೆಯೆಲ್ಲಂ ಕರತಲಾಮಲಕ |
ಮೆನಿಪಂತೆ ಪ್ರತ್ಯಕ್ಷಮಾಗುತಾಕ್ಷಣದಲ್ಲಿ |
ಮನಕೆ ನಂಬುಗೆಯಾಗೆ ಮತ್ತೆ ತಾಪಸವರ್ಯ ವಿರಚಿಸಿದ ಸತ್ಕಥೆಯನು || (48)

ಲಾಲಿತಾರ್ಥಂಗಳಂ ಶೀಲಿತಾರ್ಥಂಗಳಂ |
ಮೂಲೋಕಸಂಸೇವ್ಯಮಾದಿಕಾವ್ಯವ ರಚಿಸಿ |
ನೀಲಮೇಘಶ್ಯಾಮರಾಮನಂಕಿತಗೊಳಿಸಿ ತಾಪಸೋತ್ತಮಲೋಕಮಂ||
ಪಾಲಿಸಿದ ಚರಿತೆಯಿದು ಪಳೆವಾತು ಪರಬೊಮ್ಮ |
ಶ್ರೀಲತಾಂಗಿಯರಮಣ **ರಾಮಪುರಿವಲ್ಲಭಂ** |
ಶೀಲಮಾನಸೆತುಹಿನಗಿರಿಜಾತೆ ನೀನರಿತು ಸುಖಿಸು ನಿತ್ಯಾನಂದದಿಂ || (49)

ಸಂಧಿ 3ಕ್ಕಂ ಪದಂಗಳ್ 147

---

# ನಾಲ್ಕನೆಯ ಸಂಧಿ

ಸೂಚನೆ॥ * ರಾಜರಾಜನ ದಿವಿಜರಾಜನಗರೀ ವಿಭವ |
ರಾಜಿಗಳ ಪಳಿವಯೋಧ್ಯಾರಾಜಧಾನಿಯೊಳ್ |
ರಾಜೀವಸಖವಂಶಸಂಭೂತಪಂಕ್ತಿರಥ ರಾಜಿಸಿದನಿನತೇಜದಿ ॥

ವನಜಾತಜಾತಾಂಡದೊಳು ಕೋಟಿಪತ್ತೈದ |
ರನುವಾಂತ ಕಾಂತಶುಭಮೆನಿಪ ಜಂಬೂದ್ವೀಪ |
ಘನಭೂಷಣಾಯತದ ಸುರನಿಲಯುಮೊಪ್ಪಿದುದು ಧರೆಗೆ ನಾಭೀರೂಪದಿ |
ಕನಕಶೈಲಕೆ ತೆಂಕಮೆನಿಸಿ ರಾರಾಜಿಪುದು |
ದಿನಕರಾನ್ವಯಭೂಮಿಪಾಲಕರ ಸಂಪದಕೆ |
ಮನೆಯೆನಿಪಯೋಧ್ಯಾಭಿಧಾನಪಟ್ಟಣಮಗಜೆ ಲೋಕವಿಶ್ರುತ ಸೌಖ್ಯದಿ ॥ (1)

ವನರಾಜಿಯಂತರ್ಕ ವಂಶಕಾಲಯಮೆನಿಸಿ |
ವನಧಿಯೆಂಬಂತಖಿಳವಾಹಿನಿಗಳೆರಕದಿಂ |
ಧನರಾಜನಂತಧಿಕಸಾರ್ವಭೌಮುವು ಸ್ಫುರಣೆ ನವಕೋಶವಿಭವದಿಂದೆ॥
ಘನದಂತೆ ಬಹುಜೀವನಾಧಾರಮೆಂದೆನಿಸಿ |
ವನಜಾಕ್ಷನಂತೈದೆ ವನಮಾಲಿಯೆಂದೆನಿಸಿ |
ಜನಮನೋಲ್ಲಾಸದಿಂ ಸಾಕೇತಪುರವರಂ ಶೋಭಿಸುತ್ತಿರುತಿರ್ದುದು ॥ (2)

ಕ್ಷಣರುಚಿನಿರಾಲಂಬಮೆನಿಪ ಘನದಾಶ್ರಯದಿ |
ಕ್ಷಣರುಚಿಸಮಾಖ್ಯಾನಭಾಜನಂ ತಾನಾಗಿ |
ಕ್ಷಣದಾನುರೋಧಮುಂ ಉಳಿದಖಂಡಾತ್ಮತೆಯೊಳನುದಿನಂ ಪೊಳೆಯೆ ಜಗದಿ ॥
ಕ್ಷಣದಾನಶೌಂಡ ದಶರಥರಾಜಧಾನಿ ಲ-|
ಕ್ಷಣಮುಳ್ಳುದೆಂದು ಸೌದಾಮಿನೀ ನಿಚಯ ತತ್ | [ರಾಜಿಸಿದುದು॥ (3)
ಕ್ಷಣದಿ ಬಂದಾಶ್ರಯಂ ಗೈದುದೋಯೆನೆ ಪುರದ ಪೊಂಗೋಂಟೆ

---

* ಇಲ್ಲಿ ವಾಲ್ಮೀಕಿರಾಮಾಯಣದ ನಾಲ್ಕನೇ ಸರ್ಗದಲ್ಲಿ ಹೇಳಿರುವ ಕಥಾಭಾಗವನ್ನು ಕವಿಯು ಬಿಟ್ಟುಬಿಟ್ಟು ಐದನೇ ಸರ್ಗದಿಂದ ಕಥೆಯನ್ನು ಪ್ರಾರಂಭಿಸುವನು. ಕಥೆಯು ವಾಲ್ಮೀಕಿರಾಮಾಯಣವನ್ನೇ ಅನುಸರಿಸುತ್ತಿದ್ದರೂ ವರ್ಣನಾವಿಷಯಗಳು ಕವಿಯಿಂದ ಸ್ವಂತವಾಗಿ ರಚಿತವಾಗಿವೆ.

ಭೋಗಿಜನತಾಭೋಗಭೋಗ್ಯಮೀ ನೆಲವೆಂದು |
ಭೊ ಗೇಚ್ಛೆಯಿಂದಾನು ಬಹುಧಾಶ್ರಯುಂಗೈಯೆ |
ಬೀಗದಹಿಭಯವೆಂದು ಬಲಿಸದ್ಮವಂ ಉಳಿದು ಮಿಗೆ ಬಂದಜಾತ್ಮಭವನ॥
ಶ್ರೀಗೌರಪಟ್ಟಣವ ನಿಟ್ಟಪಭಿಲಾಷೆಯಿಂ |
ಭೋಗೀಶನ್ನೈತಂದು ನಿಜಪಣಾನಿಚಯಮಂ |
ವೇಗದಿಂ ನೆಗಪಿದನೊಯೆನೆ ತೆನೆಗಳಾಂತೆಸೆವ ಪೊಂಗೋಂಟೆ ಕರಮೆಸೆದುದು॥ (4)

ನಭದಂತನಂತಮಣಿವಿನ್ಯಾಸದತಿಶಯದಿ |
ವಿಬುಧಸಮುದಯದೊಲ್ಸನಾಸೀರವೈಭವದೊ |
ಳಭವನಂದದಿ ರಾಜಮೌಳಿಗಣಸೇವಿತದಿ ಹರಿಯಂತೆ ಶ್ರೀವತ್ಸದಿ ॥
ಉಭಯವತ್ಸರದಂತೆ ವಿಭವಸಂಕಲಿತದಿಂ |
ದಿಭರಾಜನೋಲ್ತಳಿದ ಶೃಂಗಾರದಿಂದೊಡನೆ |
ಸೊಬಗಿನಿಂ ಸಾಕೇತಪುರವರಂ ಕಾಣ್ಬಡಿಸಿತುತ್ಸವದೊಳಚ್ಚರಿಯೆನೆ॥ (5)

ಸುರರಾಜ ಸಾಸಿರಸುನೇತ್ರಮಂ ತನುವಿನೊಳ್ |
ಧರಿಸಿರ್ಪನೆಂದರಿತು ಸಾಕೇತಪುರಲಕ್ಷ್ಮಿ |
ಹುರುಡಿನಿಂ ತಾನಮಿತನೇತ್ರಮಂ ಮಿಗೆಪಡೆದು ತೋರ್ಪಳೆನೆ ನಾಲ್ದೆಸೆಯೊಳು ॥
ಸುರುಚಿರದ ಕೋಟೆಯ ಸುವಲಯದೊಳ್ ಭೀಕರದಿ |
ತೆರೆದಂಬುಗಂಡಿಗಳ್ ಬೆಳಗಿದವು ಪಜ್ಜಳಿಸಿ |
ವರಶತಘ್ನಿಸಮಿಶ್ರದಿಂ ಶಿವನ ಶಿಖಿನಯನಮೆಂಬಂತೆ ತವಗಂಗಳು॥ (6)

ದಿಗ್ಗಜಗಳಲ್ಲದಿವು ಕೊತ್ತಳಗಳಲ್ಲ ಕಡು |
ಹೆಗ್ಗಡಲದಲ್ಲದಿದು ಅಗಳಲ್ಲ ಮೃಗಧರನಿ |
ಗುಗ್ಗಡದಿ ಲಂಘಿಸುವ ಪುಲಿಯಲ್ಲದುರೆ ಮಹಾಪುಲಿಮೊಗಂ ಮುನ್ನಲ್ಲವು॥
ಸಗ್ಗ ಬಳಿಕಲ್ಲದಿದು ಪುರಮಲ್ಲ ಕನಕಾಬ್ಜ |
ಮೊಗ್ಗುಗಳಿವಲ್ಲದುರೆ ಸೌಧಾಗ್ರಮಲ್ಲೆನಿಸಿ |
ವಗ್ಗಿನಿಂ ಸಾಕೇತಸಂಪನ್ನಗರ ದೀಪ್ಯಮಾನದಿಂ ಶೋಭಿಸಿದುದು॥ (7)

ಭಂಗವಿರಹಿತವಾಹಿನೀಚಕ್ರಕಾಸ್ಪದಂ |
ಹಿಂಗದಂಬರಮಣೀನಿಚಯರುಚಿರಾಲಯಂ |
ತುಂಗಸದ್ಘನರಾಜನಿಂದ ಅನಿಮಿಷಸೇವ್ಯಮೆಂದಬ್ಧಿರಾಜ ನಯದಿ॥
ಸಿಂಗಭರಬಾಡಬೋಪದ್ರವಂಗಳನುಳಿದು |
ಶೃಂಗಾರಪದ್ಮಾಳಿಯುತನೆನಿಸಿ ಕಾಯ್ದಿರ್ಪ |
ಭಂಗಿಯಿಂದಾ ಪುರದ ಪರಿಖಾವಿಲಾಸಮಂ ಬಣ್ಣಿಪರೆ ಕವಿಗಳಳವೆ॥ (8)

ಖರಕಿರಣರಥವಾಹಖುರಚಂದ್ರಿಕಾನಿಚಯ |
ಭರದಿಂದಲಂತರಿತವಾದಂತೆ ಸಾಲತೆನೆ |
ಕರಮೆಸೆವುದತಿರುಚಿರರತ್ನನಮಯಮೆಂದೆನಿಸಿ ವಿಷ್ಣುಪದಚುಂಬಿಯಾಗಿ ॥
ಮೆರೆವ ಕೋಟಾಚಕ್ರಭವಕಾಂತಿ ಮುಂಬರಿದು |
ತರಣಿಶಶಿಸಪ್ತಾರ್ಚಿತೇಜಂಗಳಂ ದಿವದ |
ಲಿರಿಸಿರ್ಪ ದೀಪಗಳ ದೆಸೆಯನೀವುತಲಿರ್ದುದೇಂ ಪೇಳ್ವೆ ಪುರದ ಸಿರಿಯ ॥ (9)

ಸಾಲಸಾಲಶಿಖಾಳಿಯಿಂದುದಿತಶುಭಕಾಂತಿ |
ಮೇಲೆಮೇಲತಿಶಯವ ಬೀರುತ್ತ ಪೊಂಬಿಸಿಲ |
ಲೀಲೆಗಾಲಯಮೆನಿಸಿ ಸ್ವರ್ನದೀಚಕ್ರತತಿಗಮಿತಮುದ ಪಗಲೆನಿಸಿರೇ ॥
ಲೋಲಕಲ್ಲೋಲಸುವಿಲೋಲಸರಸೀರುಹದ |
ಜಾಲಜಾಲಕಗಳಲಿ ಕಲ್ಯಾಣರುಚಿ ತೋರೆ |
ಕೂಲಲೀಲಾಸಕ್ತನಿರ್ಜರನಿತಂಬಿನಿಯರೀಕ್ಷಿಪರು ಕುಚತಟಗಳ ॥ (10)

ಲಲನಾಜನಾಪಾಂಗವಲಮಾನಚಂದ್ರಿಕಾ |
ಲಲಿತದ್ಯುತೀಗಣೋತ್ಕಲಿತಮಾಗಿರೆ ತೊಟ್ಟ |
ಚೆಲುವಭೂಷಣಮಹಾಚೆಲುವು ಪೊಂಬಿಸಿಲಾಗಿ ಪರಪಿರಲ್ದೆಸೆದೆಸೆಯೊಳು ॥
ನಲವಿನಿಂ ನರರು ಚೆನ್ನಲವೆತ್ತು ನಿಟ್ಟಿಪರು |
ನಳಿನಾರಿನಳಿನಾಪ್ತದೀಧಿತಿಗಳೆಂದೆನುತ |
ಪಲವು ವಿಧದಚ್ಚರಿಗೆ ಫಲರೂಪಮೆಂದಾಗಲೇವೇಳ್ವೆನತಿಶಯಗಳ ॥ (11)

ಶ್ರುತಿವಿಚಾರಾಸಕ್ತರೆನಿಪ ದ್ವಿಜಗಣದಿಂದೆ |
ವಿತರಣಮಹಾಗುಣೋಜ್ವಲಿತಭೂಭುಜರಿಂದೆ |
ಅತಿಶಯದವಸುರನ್ನಯುತರೆನಿಸುತುಭಯರಂ ಭಜಿಪ ವಾಣಿಜ್ಯರಿಂದೆ ॥
ಸತತಪರಿಚರಣೆಯಲಿ ಸಾಧುಪಾದಜರಿಂದೆ |
ವಿತತಹರಿಗುರುಭಕ್ತಿಶೀಲರಹ ಜನರಿಂದೆ |
ಕ್ಷಿತಿಯೊಳಮರಾವತಿಸ್ಥಿತಿಯನಣಕಿಪ ವಿಭವದಿಂದಮಾ ಪುರಮೆಸೆದುದು ॥ (12)

ಶೂರಜನರಿಂ ಭವವಿದೂರನರರಿಂ ನಿಗಮ |
ಸಾರತರದರ್ಥಸಂಸಾರಯುತರಿಂ ವಿವಿಧ
ಚಾರುಸುಕುಮಾರವೌದಾರಜಿತಮಾರರಿಂ ದಹಿತಭಯರಹಿತಭಟರಿಂ ॥
ಭೂರಿಸಿಂಧುರಸೈಂಧವಾದಿಶಿಕ್ಷಾಸುಭಗ |
ವಾರಧೀರರುಗಳಿಂದಖಿಳಶಸ್ತ್ರಾಸ್ತ್ರದವಿ |
ಚಾರಪರರಿಂದಯೋಧ್ಯಾರಾಜಧಾನಿಯುಂ ರಾಜಿಪುದು ವೈಭವದೊಳು ॥ (13)

ಹರಿಯ ಪದಪದ್ಮಮಂ ಪಡೆದು ಪೂಜಿಸಿ ನಿರತ |
ಹರಿಕಥಾಶ್ರವಣದುತ್ಸವದಿ ಭುಲ್ಲವಿಸುತಂ |
ಹರಿಯ ಸಚ್ಚರಿತೆಗಳನರಿತರಿತು ಪೇಳುತ್ತ ಧ್ಯಾನಿಸುತ ಮಾನಸದೊಳು ||
ಹರಿಯ ಲೀಲಾಸ್ಪದದ ಕಜ್ಜಗಳ ವಿರಚಿಸುತ |
ಹರಿದು ಭವಭಯಗಳಂ ಹರುಷದಿಂ ಕರಮೆಸೆವ |
ಶರಣರಿಂದಾ ಪುರಂ ಶರಣಮೆಂದೆನಿಸಿರ್ಪುದೀಶಶರಣಾಕೃತಿಯೊಳು || (14)

ಕೀರಗಳ ಸವಿನುಡಿಯುದಾರವೀಣಾನಿನದ |
ಚಾರುಮುರಜಾಹತೋದ್ಧತದಿಕ್ಪಟಲದಿಂದ |
ಸಾರತರಶ್ರುತಿಮಧುರಯತಿಲಯಾನ್ವಿತಮಪ್ಪ ಗಾನಲೀಲಾವಿಭವದಿಂ ||
ಪಾರಿವಗಳಿಂಚರದ ಸನ್ನಾದಕೇಳಿಗಳ |
ತೋರಲಾಸ್ಯಗಳಿಂದ ಪ್ರತಿಶರಣಮಪ್ರತೀ |
ಕಾರಮೆನಿಸಿರ್ಪುದಾ ನಗರದತಿಶಯಗಳಂ ವರ್ಣಿಸುವೊಡಳವಪ್ಪುದೇ || (15)

ತಿರುಕನೊಳು ಸಖ್ಯಮೊಂದರೆಕಾಸನಾರಿಗುಂ |
ಭರದಿ ಕೈದೊರೆದೀಯದನವರತಮುರಗನಂ |
ತುರುನಿಧಾನಂಗಳಂ ಕಾಯ್ದಿರ್ಪ ಯಕ್ಷಪಂಗಭಿಧಾನ ಧನದನೆಂದು ||
ಬರಿದೆ ಸಂಭವಮಾದುದೆನುತಲಾ ಪುರವರದ |
ಲಿರುವ ವಾಣಿಜ್ಯರುಂ ಪರಿಹಾಸಗೈವುತಂ |
ನಿರತಧನದಾನದಿಂ ನಿಖಿಳಜೀವನದಾತರಾಗಿರ್ಪರಚ್ಚರಿಯೊಳು || (16)

ದಿವಿಜತರುವನವರತ ನವಕದಭ್ಯಾಸೆಯೊಳು |
ತವಕದಿಂದಿರುತಿರ್ದುದಭವಗೆ ದಿಗಂಬರವ |
ಪವಣಿಸಿತ್ತಲ್ಲದಿರೆ ಪುಲಿದೊವಲು ಗಜಚರ್ಮದುಡಿಗೆಯಿಂದಿರ್ಪನೇಕೆ ||
ವಿವಿಧಜನರಂಬರ ಪಟಚ್ಚರಗಳಾದೊಡಂ |
ನವನವಕಮೆನಲಿತ್ತು ಸವೆಯದತಿಶಯದಿಂದೆ |
ತವಕದಿಂದೊಪ್ಪಿರ್ದರಾ ಪುರದ ದೂಸಿಗರದೇವೇಳ್ವೆನತಿಶಯಗಳ || (17)

ಪತಿಗೆ ನಿದ್ರಾಸಕ್ತಿಯಾದುದಂ ಕಂಡು ನಿಜ |
ಪಿತ ಜಡಧಿಯಾಗಲದ ನೋಡುತ್ತಲನ್ನೆಗಂ |
ಸುತನನಂಗತೆಯಾಂತನನುಜನ್ಮನಿಗೆ[1](ಬಹುಳಪಕ್ಷಕ್ಷಯತೆ)ಯಾದುದು ||
ಕ್ಷಿತಿಯೊಳಾಶ್ರಯಮೆನಗೆ ಕೋಸಲಾಭಿದಪುರಂ |
ಸತತಸುಖಕರಮೆಂದು ಸಿರಿಲಕುಮಿ ತಾ ನೆಲಸಿ |
ದತಿಶಯುವ ಕಂಡಬ್ಧಿರಾಜ ಮಣಿಗಣಮಿತ್ತನೆನೆ ಪಸರರಾಜಿಸಿದುದು || (18)

---

1. ಬಹಳರಾಜಯಕ್ಷತೆಯಾದುದು.

ವಸುರಕ್ಷಸಂತತಿಯು ಬಸುರಿನಿಂ ತಾಂ ಪೆತ್ತು |
ಮುಸುಳದಾದುದು ಭೂರಿಪತಿತತ್ವಮುನ್ನಿದಂ |
ವಸುವಂಶರಾಜನ ಭುಜಾಶ್ರಯವ ಪಳಿದಪೆಂ ತಾನೆನ್ನುತಾಗ ಪೃಥ್ವಿ ||
ಪೊಸರನ್ನತಿಂತಿಣಿಯು ಪೊಸತೆನಲು ಕರಮಿತ್ತು |
ದೆಸಕದಿಂದೆಂಬಂತೆ ಸನ್ಮಣೀರಾಜಿಗಳ |
ಪಸರಂಗಳೆಸೆದವತಿರುಚಿಗಳಿಂದಾ ಪುರದ ಪತಿಯ ಶೌರ್ಯೋನ್ನತಿಯೊಲು || (19)

ಪ್ರಭವಾದಿಯಾದಖಿಳ ಪುಂಸಗಣ ವಿಭವದಿಂ |
ಶುಭಶೋಭನಕ್ರತುಗಳಾಗಿರಲದಾವಗಂ |
ಸೊಬಗಿನಿಂ ಬಹುಧಾನ್ಯಮೀವ ಘನಪಾರ್ಥಿವರ್ ವಿಕ್ರಮುರ್ವಿಜಯಯುಯುಶರು ||
ನಿಬಿಡದಿಂದೊದಗಿದರ್ನಂದನಸರ್ವಾಮ್ಯಯುತ |
ಲಭಿತೆನಿತ್ಯಾನಂದಮಣಿಸರ್ವಧಾರಿಗಳ್ |
ನಭದಂತೆ ದ್ವಿಜಗಣ್ಣೋಲ್ಲಾಸದಿಂದಿರುತಿಹರ್ ವತ್ಸರಗಳುಸುರ್ವಂದದಿ || (20)

ಇನಿದುಟಿಯ ಘನತೆಯನ್ನನುದಿನಂ ನೆರೆಬಯಸಿ |
ಮನಗೂಡದಿರೆ ಮನೋವ್ಯಥೆಯಾಳ್ದು ಚಿಂತೆಯಿಂ |
ತನುತಾಪದಿಂ ಶುಭ್ರಮಾದುವೋಯೆನೆ ತೋರ್ಪ ಬೆಳ್ಳಿಲೆಯ ವಸರಂಗಳು ? ||
ಇನನಿಲ್ಲದಿರೆ ವಿರಹ ಘನಮೆನಿಸಲಾಸ್ಯರುಚಿ |
ಯನುಸರಿಸಿ ಪಾಂಡುರಾಕೃತಿವೆತ್ತು ರಾಜಿಸುವ | [ದೊಳು || (21)
ವನಿತೆಯರ ಕದಪುಗಳು ಕನ್ನಡಿಯ ನೆನಹುಗಳ ಪುಟ್ಟಿಸುವುವತಿಶಯ

ಪಗಲಿರುಳ ಭೇದಮಂ ಬಗೆಯದಲೆ ಚಿತ್ತದೊಳ್ |
ಸೊಗಸಿಂದಲಿನನ ಪರಿರಂಭಸಂಭ್ರಮದಿರವು |
ಮಿಗೆ ದೊರಕದೆಮಗೆ ಸರಸೀರಾಶಿಮಧ್ಯದೊಳಗಿರ್ದು ಕಾನನದೊಳೆಂದು |
ಬಗೆದು ಮನದೊಳ್ಕೆಸರ್ಮಲ್ಲಿಗೆಯ ಗೊಂದಣಂ |
ನಗರದೊಳಗಿನ ಕರಗ್ರಾಹಿಯನುದಿನಮೆನಿಸಿ |
ಸೊಗಸಬೀರುವವೆನಲ್ಕಂಚುಗಾರರ ಪಸರವಿಸರಂಗಳೆಸೆದಿರ್ದುವು || (22)

ಲಲನೆಯರ ತನು(ಮೃದುಲ) ಸುಲಿಪಲ್ಲನಾಸಿಕದ |
ಚೆಲುವ ನೇತ್ರಂಗಳ ವಿಲಾಸಮನ್ನೆರೆ ತಾಳ್ದು |
ಲಲಿತಮಾಲತಿಕುಂದಕನಕಕುಂಜಂಗಳುಂ ಸತತವಿಟರಗಲದಂತೆ |
ವೊಲಿಸಿಕೊಳಲೀ ಪುರದ ಲಲನೆಯರ ಕರತಳದಿ |
ಕಲಿತಮಾಗುವ ಕಾಂತೆಯರ ನೆಲೆಯನನುದಿನಂ |
ಉಲಿವರೆಲೆ ಜ್ಞಾತಿಯಿರಲಗ್ನಿಯಿನ್ನೇಕೆಂಮು ನಲವಂದ ನೇಹಜನರು || (23)

---

1 ಮೃದನು.

ತರುಣಿಯುರ ಕಡೆಗಣ್ಣ ಬಿರಿಮುಗುಳ ಲೋಭದಿಂ |
ಬರುವ ಬಂಭರಸಂಭ್ರಮಂಗಳಾ ರವಮಧುರ |
ತರಗಾನಮೆಂಬಾಗ ಕಮನಜಂಗುಳಿ ಬಂದು ಬಂಧುರದಿ ಪರಿವೇಷ್ಟಿಸಿ |
ತರತರದಿ ನಿಂದಿರುವ ಪರಿಯಂ ನಿರೀಕ್ಷಿಸುತ |
ದರಹಾಸಮಂ ಬೀರೆ ಕ್ಷೀರಪ್ರವಾಹಮಂ |
ಮರುಭರದಿ ಕೆಲಸಾರ್ವರಲ್ಲಲ್ಲಿ ಪೂವಸರವಿಸರದೆಡೆಯೊಳ್ಮಾಘದಿ ॥ (24)

ಮುಖದಿ ಕೆಂದಾವರೆಯ ಕೈರವಗಳಕ್ಷಿಯೊಳ್ |
ನಖದಿ ಪೊಂಗೇದಗೆಯ ಚಂಪಕವ ಘ್ರಾಣದೊಳ್ |
ಮುಕುಳಿತಸುಕುಂದಗಳ ರದಗಳೊಳು ಬಿರುಮಲ್ಲಿಗೆಯ ಸೊಬಗ ದರಹಾಸದಿ ॥
ಪ್ರಕಟದಿಂದಳವಡಿಸಿಕೊಂಡುಳಿದ ಪುಷ್ಪಗಳ |
ನಕಳಂಕ ಸಲೆ ಮಾಲೆಗಾರ್ತಿಯರ್ವಿಕ್ರಯದ |
ಯುಕುತಿಯಿಂದುರೆ ನೋಡುತಿರುತಿರ್ದರಾ ಮಹಾಪುರಚಂದ್ರವೀಥಿಯಲ್ಲಿ ॥ (25)

ಹೇಳೀಕರಾವಮರ್ಶನಜಾತವ್ಯಾಕೋಚ |
ನಾಳೀಕಸುಮರೇಣುಸೌರಭ್ಯರಾಗಸುಮ |
ಧೂಳೀಪರಂಪರೆಯು ಪರಪಿರಲ್ ವೀಥಿಯೊಳ್ ಭ್ರಮರವತಿಹರ್ಷದಿಂದೆ ॥
ಕೇಳೀವಿಲಾಸಕರ ಪಟವಾಸಮೆಂದು ಪ್ರಮ |
ದಾಳೀಕರಂಗಳನು ಪಿಡಿದಲ್ಲಿ ಕ್ರೀಡಿಸೆ ಮ |
ದಾಳೀವಿರಾವಗಳ್ ಮಣಿತಗಳ ಬೆಡಗನುಂ ತೋರ್ಪವಚ್ಚರಿಗಳಿಂದೆ ॥ (26)

ಮುದಹಸ್ತಿಗಮನೆ ಮತ್ತೋರ್ವಳಾ ಪೂವಸರ |
ಸದನಕ್ಕೆ ಮುಂಗಡೆ[1](ಯೊಳಿಟ್ಟು) ಸಾಣೆಯನು ಮೃಗ |
ಮುದಕುಂಕುಮಂಗಳಂ ಧರಿಸಿ ಪೋಷಣೆಗೆಯ್ಯೆ ಶ್ರೀಖಂಡಖಂಡದಿಂದ ॥
ವದನಸರಸೀಜಾತದುದಯಮಂ ಸೈರಿಸದೆ |
ವಿಧುಬಿಂಬಮಂ ಪಿಡಿದು ವಧಿಸೆ ಪಾಂಡುರರಕ್ತ | [ಬೀರುತಿಹುದು ॥ (27)
ವಿದಿತನೀಲಾಕೃತಿಯ ವಿಕೃತಿಯಂ ತಾಳ್ದುದೋಯೆನೆ ಬೆಡಗ

ಕೊಂಕುತಿರೆ ತನುಲತೆಯು ಕುಣಿವ ಕುಂತಳ ಬೆಮರಿ |
ನಂಕುರಿತಮುಖಬಿಂಬ ಮೂಡುತಿಹ ನಿಟ್ಟುಸಿರ |
ಪಂಕೇಜಕುಟ್ಮಲದ ಕುಚತಟದಿ ನಟಿಸುತಿಹ ಹಾರಂಗಳತಿಶಯಗಳ ॥
ಕಂಕಣಝುಣತ್ಕಾರಕಿಂಕಿಣೀಕಲರವದ |
ಪೊಂಕಮೇರ್ಪಡಲು ಮೀನಾಂಕನೋಜೆಯ ಬೆಡಗ |
ಸೊಂಕಿಸುತ ವಿಟತತಿಗೆ ಬಾವನ್ನವನ್ನರೆವ ನಲವು ಚೆಲುವಾಗಿರ್ದುದು ॥ (28)

---

1 ಮುಂಗಡೆಯ ಸಾಣೆಯನ್ನಿಟ್ಟು.

ಮುಡಿದಿರ್ದ ಬಿರುಮುಗುಳ ಮಧುರಸವನುಂಡುಂಡು |
ಕಡೆಗೆ ಪಾರದೆ ಮತ್ತಮೆನಿಪ [1]ಷಟ್ಪದತತಿಯ |
ಬೆಡಗೆನಿಪ ಪಕ್ಷಸಂಭ್ರಮದಿಂದಲುದುರ್ವ ಮಧು ವೃಷ್ಟಿಯನ್ನನುಕರಿಸಲು ||
ಕಡಗನಿಕ್ವಣ ನಿನದವೆಂದೆನಿಸೆ ಗಂಧಮಂ |
ಬಿಡದೆ ತೀವುತ್ತಿರುವ ಮತ್ತೇಭಗಾಮಿನಿಯ | [ಮೋಹಿಸುವುದೊ || (29)
ಮುಡಿ ಸೋಗೆಯಂದದಿಂ ನಟಿಸುತಲಿ ನೋಟಕರ ಮನವನೇಂ

ವದನೇಂದುಬಿಂಬದಿಂದುದಯಿಸುವ ಚಂದ್ರಿಕೆಯು |
ಮುದದಿ ತಾರಾವಳಿಯನೊಡಗೊಂಡು ಕುಚಕೋಕ |
ಸದನದೆಡೆಗೈತರಲ್ ಕಂಡು ತಲ್ಲಣಗೊಳುವುವೆಂಬಂತೆ ಕೊಡಮೊಲೆಗಳು ||
ಅದುರುತಿರೆ ಕರಕಮಲ ಕುಟ್ಮಳಿತವಾಗಿರಲ್ |
ಮುದದಿಂದ ಚಂದನವನುರೆ ತೀವ ಕಾಮಿನಿಯ |
ಳಿದಿರಾಗಿ ವಿಟಚಕೋರಗಳು ಸಂತಸಗೊಂಡು ಸಂಭ್ರಮಿಸಲೆಡಬಲದಲಿ || (30)

ಧರಣೀಶನೋಲಗಕ್ಕೈತರ್ಪ ನೃಪತಿಗಳ |
ಸರಿಸದೊಳ್ಪೊಗಳುತಿಹ ಮಾಗಧರ ರವಗಳಿಂ |
ಕರಿಗಳುರುಘಂಟಾನಿನಾದಘೋಷಣೆಗಳಿಂ ವಾರಾಂಗನೆಯರ ಗೃಹದಿಂ ||
ಪೊರಟುಬಹ ಕಾಮಿಗಳ ತನುಗಂಪನುಂಬರೈ |
ತರುವ ಭೃಂಗೀರವದ ಮಾಧುರ್ಯ ರಚನೆಯಿಂ |
ಮೆರೆದುದಾ ಪುರರಾಜವೀಥಿಯಳಕಾನಗರದತಿಶಯಕ್ಕಿಮ್ಮಡಿಯೆನೆ || (31)

ತುಂಬುಜವ್ವನಮುಳ್ಳ ಬಿಂಬೋಷ್ಠಿಯರ ಕುಚದಿ |
ಸಂಭರಿತವಾದ ಕುಂಕುಮಪರಾಗಂಗಳುಂ |
ಬೆಂಬಿಡದ ಧಮ್ಮಿಲ್ಲ ಮಿಳಿತಮೃಗಮದರಜಃಪುಂಜ ಪರಪಿರೆ ವೀಥಿಯೊಳ್ ||
ಸಂಭ್ರಮಿಪ ದಾನಕುಂಭೀಂದ್ರಡೊಂಬಿಗಳೆಲ್ಲ |
ಮುಂಬರಿದು ನಿಜಕರಗಳಿಂದ ಲೀಡಾಡುತಿರ |
ಲಂಬರದ ಗಂಧಗಜಮೆನ್ನುತಿರಲಾ ಪುರದ ಸಿರಿಯನೇಂ ವರ್ಣಿಸುವೆನು || (32)

ಕೆಳದಿಯರ ಮೇಳದಿಂದಾ ಪುರದ ವೀಥಿಯೊಳ್ |
ನಳಿನಾಕ್ಷಿಯರು ಬರುತಲಿರೆ ಚಲಿಪ ಕುಂತಳಗ |
ಳೊಳು ಮಿಶ್ರಮೆಂದೆನಿಪ ಪರಿಮಳದ ಲೋಭದಿಂ ಬರುವ ರೋಲಂಬತತಿಯ ||
ಬಳಗದುರುಸಾಲುಗಳ ಪೊಳಪನಾಂತೊಪ್ಪಿದುವು |
ಕಳೆಯುಳ್ಳ ಬಲಭಿನ್ಮಣೀಸರಗಳಿಂ ವೀಥಿ |
ಗಳವಡಿಸಿ ತೋರಣಂಗಳಿಟ್ಟಿರ್ದರೊಯೆನಲ್ ನೋಟಕಾಂಬಕನಿಚಯಕೆ || (33)

1 ಸಿತ್ಪುಟತತಿಯ.

ಸುರಪರತ್ನದ ವೇದಿಕಾಸಾಲುಸಾಲ್ಗಳಿಂ |
ಸರಸಿಜಾರಿಯ ಕಾಂತಮಣಿಖಚಿತಸೆಜ್ಜೆಗಳ |
ಸುರುಚಿರದ ಬಜ್ಜರದ ಸೋಪಾನತಲಗಳಿಂದಾಣಿಮುತ್ತಿನ ಮಣಿಗಳಿಂ ||
ವಿರಚಿತದ ಸೌಧಗಳ ಸಾಲ್ಗಳಿಂ ಕನಕಮಣಿ |
ಭರಿತದುಯ್ಯಲೆಗಳಿಂ ಮರಕತದ ತೋರಣದ |
ಸಿರಿಮೆರೆವ ಸೂಳೆಗೇರಿಯೊಳೆಸೆವ ಸದನಗಳು ರಾಜಿಸುವುದಚ್ಚರಿಯೆನೆ ॥ (34)

ಶಂಬರಾರಿಯ ಶಾಸ್ತ್ರಮನ್ನೋದೆ ಗಿಳಿಯನಿಕು |
ರುಂಬಮುದರರ್ಥಮಂ ಪೇಳುತಿರೆ ಸಾರಿಕೆಗ |
ಳಂಬುಜಾರಿಯ ಪೊಗಳಿ ಪಾಂಚಾಲಿಕೆಗಳಿಂದ ಬಾಜಿಸಲು ವಲ್ಲಕಿಗಳ ॥
ತುಂಬುರೊಲು ಶ್ರುತಿಮಧುರರಸದಿ ಕಲಕಂಠದ ಕ |
ದಂಬ ಪಾಡುತಲಿರೆ ಮಯೂರನಟನೆಗಳಿಂ ನಿ |
ತಂಬಿನೀಜನರು ಸುರಕಾಂತೆಯರ ಸದನಮಂ ಪಳಿವುತಿಹರೇವೇಳ್ವೆನು ॥ (35)

ಅಲ್ಲಿ ಮಣಿಸೌಧದೊಳ್ ಸಲ್ಲಲಿತ ಕೇಳಿಯೊಳ್ |
ಫುಲ್ಲಶರಸಮರದೊಳ್ ಮಲ್ಲಿಗೆಯ ನನೆಗಳೊಳ್ |
ಸೊಲ್ಲಿಸುವ ನುಡಿಗಳೊಳ್ ಚಲ್ಲೆಸೆವ ಕಂಗಳೊಳಗಲ್ಲಲ್ಲಿ ವಲ್ಲಭರನು ॥
ಮೆಲ್ಲಮೆಲ್ಲನೆ ಮೆಚ್ಚಿ ಸಲ್ಲಾಪಕೆಳಸುತಂ |
ನಲ್ಲರನು ತೊರಸುತಂ ನಟನೆಗಳ ಬೆರಸುತಂ |
ಲಲ್ಲೆಯಲಿ ಸೆಳೆವುತಂ ಸರ್ವಸ್ವಮೆಲ್ಲಮಂ ವಾರನಾರಿಯರೆಸೆವರು ॥ (36)

ಪನ್ನೀರನುಂ ಮಿಂದು ಚೆನ್ನೆಸೆಯಲೈತಂದು |
ಸನ್ನಿಯಿಂದುಡನುಟ್ಟು ರನ್ನತೊಡವಂ ತೊಟ್ಟು |
ಮಿನ್ನೆನಿಪ ಸೀಮಂತದಲಿ ಸಿಂಧುರವನಿಟ್ಟು ಪಣೆಗೆ ಕತ್ತುರಿಯ ಬೊಟ್ಟ ||
ಮನ್ನಿಸುತಲರಗಿಳಿಯ ಮತ್ತೊರ್ವ ವಿಟನೆಡೆಯ |
ಸನ್ನುತಿಪ ಸವಿನುಡಿಯ ಸನ್ನೆಗಳ ಮೇಲ್ಬಗೆಯ |
ಕನ್ನಿಕೆಯರೆಸೆದರಂಗಜನ ಸಿಂಗಾಡಿಯಿಂದುಗಿದ ಪೂವಲಗೆಂಬೊಲು ॥ (37)

ಕುರುಳಿನಿಂದಲಿ ಶಿಲೀಮುಖಗಳಂ ಪುರ್ಬುಗಳ |
ಭರದಿಂದ ಚಾಪಗಳ ಕುಡಿನೋಟದಲಗುಗಳ |
ಮೆರೆವ ನುಡಿಗಿಳಿದೇರುಗಳ ರವದಿ ಕೋಗಿಲೆಯ ಮುಖದಿಂದ ವಿಧುಬಿಂಬವ ॥
ಧರಿಸಿ ಮನ್ಮಥನಾಧಿಪತ್ಯಮಂ ಕೈಕೊಂಡು |
ನಿರತ ವಾರಾಂಗನೆಯರಮಿತವಿಟತತಿಗಳಂ |
ಸೆರೆವಿಡಿದು ಸರ್ವಸ್ವಮಂ ಸೆಳೆವರನುದಿನದೊಳೇಂ ಪೇಳ್ವೆನಚ್ಚರಿಗಳ ॥ (38)

ವದನದೊಳ್ ಪಡೆದು ವಿಧುಪದವಂ ಕಚಂಗಳೊಳ್ |
ಮುದದಿ ಶಿವಪದ [1]ನಿತಂಬ(ದಲಿ) ಕಾಂಚೀಪದವ |
ಚದುರಧಮ್ಮಿಲ್ಲದೊಳ್ ಘನಪದವ ಮಧ್ಯದೊಳ್ ವಿಷ್ಣುಪದಮಂ ಧರಿಸುತ ॥
ವಿದಿತಶ್ರೀರಂಗಪುಣ್ಯಕ್ಷೇತ್ರಮೂರ್ತಿಯೊಲು |
ಮುದಗಜದ ಮನ್ನೆಯರ್ ಮನ್ನೆಯರ್ ನಿರ್ಜರರ |
ಚದುರರೆಂದೆನುತ ಪಲ್ಲವನಿಚಯ ಸೇವಿಸುವರನವರತ ಸರಸದಿಂದ । (39)

ನೆಲೆಯ ಕರುನಾಡಗಳ ನೆಲೆನೆಲೆಗಳಲಿ ತೋರ |
ನೆಲೆಮೊಲೆಯ ಕಾಂತೆಯರ್ ಕುಳ್ಳಿರ್ದು ಮುದದಿಂದ |
ಮೊಲೆಗಳಲಿ ವಲ್ಲಕಿಗಳಿಟ್ಟು ಬಾಜಿಸುತಿರ್ದರೊಡಗೂಡಿ ಪಾಡುತಿರ್ಪ ॥
ಲಲನೆಯರ ಗಳರವದ ಮಿಳಿತತಂತ್ರೀಸ್ವನದ |
ಕಲೆಗಳಂದಕೆ ಮೆಚ್ಚಿ[2](ಚಿತ್ರಭಿತ್ತಿಯ ತೆರದಿ) |
ನಲವೆತ್ತು ಘನರವಂಗಳ ಕೇಳ್ವ ಕೇಕಿಗಳ ಬಳಗದೋಲ್ ವಿಟರಿರ್ಪರು ॥ (40)

ಕಂಜಲೋಚನಗಳುಂ ಕರೆವುತಿವೆ ಶರಗಳಂ |
ಕಂಜಾತ ಚಂದ್ರಿಕೆಯ ಪರಪುತಿವೆ ದೆಸೆದೆಸೆಗೆ |
ಕಂಜಗಳ ತಾರಕಾಗಣದಿ ಕೆಳೆತನಮಾಂತುಮಿರುತುಮುವರಂಗಂಗಳು ॥
ಕಂಜಭವರಿರವೆನಿಸಿ ಪೊಗಳುತಿವೆ ಚಿತ್ರ ಕಡು |
ರಂಜನೆಯೊಳೆಂದೆನುತ ಕಾಮುಕರ ಗೊಂದಣಂ |
ಸಂಜನಿತದಚ್ಚರಿಯ ನಿಟ್ಟಿಪರು ಸೌಧಾಗ್ರದಲ್ಲಿರ್ಪ ಸುಂದರಿಯರ ॥ (41)

ಸುರಮಾರ್ಗದೊಲ್ ಚಂದ್ರಕಾಂತಾಮನೋಹರಂ |
ಸರಸಿಯುಂದದಿ ಪದ್ಮರಾಗಕೇಸರಯುತಂ |
ಸುರತಾಪಸರದೊಲ್ ಕಪೋತರುತಸಂಕಲಿತ (?) ರಜನೀಕರಸ್ವಾಂತದೊಲ್ ॥
ವರಪುಷ್ಪರಾಗಸಂಶ್ರಿತಸಕ್ತ ಲೋಕದೊಲ್ |
ಮೆರೆವ ಮುಕ್ತೌಘಸಂಕುಲದಿಂದಲಾ ಪುರದಿ |
ಸಿರಿಕರದ ಪ್ರಾಸಾದಸಂದೋಹ ರಮ್ಯಕದಿ ರಾಜವೀಥಿಯೊಳೆಸೆದವು ॥ (42)

ಇಂದ್ರಕರದಂತತುಲವಜ್ರಸಂಕಲಿತದಿಂ |
ಸಾಂದ್ರಸುರನಿಲಯದೊಲ್ ಕಲ್ಯಾಣಮಯವಾಗಿ |
ಚಂದ್ರಮಂಡಲಮೆಂಬೊಲಾದರ್ಶ ರೇಖಾನುವೃತ್ತಿಯಿಂ ಸಗ್ಗದಂತೆ ॥
ರುಂದ್ರರತ್ನಾಢ್ಯಗಮ ಸುಮನಸಾಕೀರ್ಣದೊಲು |
ಪೇಂದ್ರನಂದದಿ ಭೋಗಿಶಯನಾನುಸಕ್ತಿಯಿಂ |
ಚಂದ್ರಶಾಲೆಗಳೆಸೆದವಿರ್ತರದೊಳಾ ರಾಜಮಾರ್ಗದೊಳಗಚ್ಚರಿಯೆನೆ ॥ (43)

---

1. ಕಾಂಚೀ ನಿತಂಬಪದ. 2. ಮೆಚ್ಚಿದಭಿತ್ತಿಗಳನ್ನು ।

ನಂದನದೊಳಾ ಸ್ವರ್ಣಪಾರಿಜಾತವು ಹರೀ |
ಚಂದನಾಮೋದವಾಸಿತಮಾಗಿ ಗೋಪ್ಯದೊಳ್ |
ಬಂಧುರದ ಭದ್ರರಸಕಾಸ್ಪದಂ ವಾಸಂತಿಕಾವಿಪಿನಮೆಂಬಂದದಿ ||
ಪೊಂದಿಹ ಸಿತಾಭ್ರಸಮುಗುರುಹಂಸಮಂಡಿತದಿ |
ಮಂದೇಹರೆಂಬಂತನಂತಮಣಿಧಿಕ್ಕಾರ |
ದಿಂದೆಸೆದುವಾ ನಗರರಾಜವೀಥಿಯೊಳೆಸೆವ ಕರುಮಾಡ ರಾಜಿಸಿದವು || (44)

ಕೈಲಾಸದಂದದಿ ಸದಾಶಿವಾಶ್ರಿತಮಾಗಿ |
[1](ಯೇ)ಲಾ(ಸರಿ)ತ್ಪುಳಿನದಂತೆ ಹಿಮವಾಲುಕಾ |
ಲಾಲಿತ್ಯಮೆಂದೆನಿಸಿ ಬಾಧದರ್ಶನದಂತೆ ಸಾಧುಸಂದೂಷ್ಯಮಾಗಿ ||
ಮೇಲಾದ ನ್ಯಾಯನಯಮೆನೆ ಜಾತಿಮಾಲೆಯಿಂ |
ನೀಲಾಂಬುದೋಪಮದಿ ಚಪಲಾನುವೃತ್ತಿಯಿಂ |
ಬಾಲಾರ್ಕತೇಜಮೆಂದೆನಿಸಿರ್ಪುದಾ ಪುರದ ಸೌಧಂಗಳೇವೆಳ್ಳೆನು || (45)

ಆ ನಗರಸೌಧಾಗ್ರಜಾಗ್ರನ್ನಿತಂಬಿನೀ |
ಸಾನಂದದುತ್ತುಂಗಸಾರಂಗನಾಭೀರ |
ಸಾನುಲೇಪಿತದಿ ಕುಚಮೇಖಲಾಲೇಖ್ಯ ಮೇಣಾಖ್ಯ ಚಂದ್ರಮನೊಳೆಂದು ? ||
ಮಾನಿನೀವದನಾವಮಾನದೀನಜನ್ಯೈಕ |
ಭಾನಮೇಣೇಕರ್ಣಿಕಾಹ್ವಯದಿ ವರ್ಣಿಸಲ |
ದೇನೆಂಬೆನಚ್ಚರಿಯನಮಿತಮೋಹದ ಪರಿಯ ವಿಜಿತ ಸುರಪುರದ ಸಿರಿಯ || (46)

ಪೊಂಬಳ್ಳಿಮೆಯ್ಯ ಪೂದೊಂಬೆಯಂತಿರುವ ಮೊಲೆ |
ಯಂಬುಜಾನನದ ಮರಿದುಂಬಿಕುರುಳಿನ ಚೆಲುವ |
ಬಿಂಬೋಷ್ಟಿಯರು ಸೌಧಮಧ್ಯದಲಿ ಚರಿಸುತಿರಲೀಕ್ಷಿಸುತ ಜಾಲಕದೊಳು ||
ಅಂಬುದಂಗಳ ತುಂಬಿಯಾಗ ತಸ್ಕರಗೆಯ್ಯೆ |
ಚೆಂಬೊನ್ನತನುರುಚಿಯ ಕ್ಷಣರುಚಿಯ ವ್ಯಾಜದಿಂ |
ದಂಬರದಿ ತೋರುತಡಗಿಸುತಿರ್ದರೆಲೆ ಕನಕಮಂ ಕಂಡ ದೀನನಂತೆ || (47)

ಸುರಭಿಳಿತನಾಸಿಕದ ಗಂಧಪರಿಯಂ ಕಂಡು |
ಪೆರಸಾರಿ ರೋಲಂಬತತಿಗಳಿತ್ತರಗಳಲಿ |
ಮರುಗುತ್ತಲಿಹವೆಂಬ ತೆರದಿ ಕುಂತಲರಾಜಿ ರಾಜಿಸುತ್ತಿರೆ ತಾರಕಾ||
ಭರವನೀಕ್ಷಿಸಿ ವದನವಿಧು ಮನೋಹರವೆತ್ತು |
ಭರದಿ ನವಸಂಖ್ಯೆಯಂ ಗ್ರೈವನೋಯೆಸೆ ಪರಲ್ |
ಭರಿತಕುಂಡಲಕಲಿತಶ್ರುತಿಗಳಲಿ ಶ್ರೀಕರಂಬೆತ್ತಿರ್ದವತಿಶಯಮೆನೆ || (48)

1. ಲೈಲಾಶರತ್ಪುಳಿನ.

ವಾರಿಜಾಕ್ಷಿಯರು ನಲವೇರಿ ಪುರವೀಥಿಯಂ |
ಸಾರಿ ದೇವಾಯತನಕೈದುತಿರೆ ತನುಗಂಪ |
ಚಾರುತರಮಂ ಕಂಡು ಭರದಿಂ ಮಿಳಿಂದಗಳು ತೊಳಪ ಮಂಜುಳರಾವವ ||
ತೋರೆ ವಿಟನಿಚಯ ಬಾಯಾರಿ ಬೆಂಬತ್ತಿ ಬರೆ |
ನೀರೆಯರ್ ಪಿಂತಿರುಗುತೀಕ್ಷಿಸಲ್ ದೃಗ್ದ್ಧಾಳ |
ಮಾರಶರದಂತಿರಲ್ ಪೆರದೆಗೆಯರೇನೆಂಬೆನತಿಶಯದ ಬಿನ್ನಣಗಳ || (49)

ಆ ರವಿಹಯಂಗಳಾಧಾರವಿಲ್ಲದೆ ಪೋಗಿ |
ನೀರೊಳಗೆ ಕೆಡೆದಪುದೆನುತ್ತಲೀ ಗಾದೆಯ ಕು |
ಬೇರನ ತುರಂಗಮವು ಕೇಳಿಪಾಕ್ಷಣ ಧಾರೆವಿಾರಿ ಜವವಾರಿತೆನುತೆ ||
ಆ ರಟ್ಟಸಿಂಧಗಾಂಧಾರಭವ ಸಂಪೂರ್ಣ |
ಧಾರಾಸಮೃದ್ಧಿಯಿಂ ಶ್ರೀದೃಕ್ಷಿಕೀನಾಮ |
ಚಾರುಘೋಟಕನಿಚಯರಮಣೀಯಮಂದಿರಂ ಬಂಧುರದಿ ರಾಜಿಸುವುದು || (50)

ಸುರಪನಗ್ನಿಯುಯಮಂ ತರಣಿಸುತಶಿಖಿಹರಿಯು |
ನಿರುತಿವರುಣಶ್ವಸನ ಮರುತಪಾಶಿಯುದೈತ್ಯ |
ವರಧನದನೀಶಾನ ಹರಕುಬೇರಾದಿಗಳು ಹರಿದಿಭಂಗಳನೀಕ್ಷಿಸಿ ||
ಗುರುಭರದ ಪೊರೆಗರ್ಹವಲ್ಲದಿವು ಸಂಖ್ಯೆಯೊಳು |
ಚರಿಸಲಮ್ಮವೆನುತ್ತ ಬಳಿಕಲೀ ಪುರವರದ |
ಕರಿಗಳಂ ಗಂಭೀರವೇದಿಲಕ್ಷಣಲಕ್ಷಿತಂಗಳಂ ನಿಟ್ಟಿಸುವರು || (51)

ತರುಣಿಯರ ಲಾವಣ್ಯರಸಭರಿತವಾಗುತಂ |
ಸಿರಿಗಿರವು ಮುಖಕಮಲ ಸುಯ್ಗಂಪಿನಿಂ ಭರಿತ |
ತರಳದೃಗ್ಧಾಳಗಳ ಪರಮೆಗಳ ಸಾಲ್ಗಳಿಂ ಪೊರೆವ ಕಾಸಾರದಂತೆ ||
ಪುರದ ಮಧ್ಯದೊಳೆಸೆವುದರಮನೆಯ ವೈಭವಂ |
ನಿರತದೊಳ್ ರಾಜಹಂಸಾಶ್ರಯಂ ತಾನೆನಿಸಿ |
ಪರಮಹರುಷವನೀವವೇನೆಂಬೆ ಸುಮನಸಸ್ಸಂದೋಹಕತಿಶಯಮೆನೆ || (52)

ಅರವಿಂದದಳಖಚಿತದಂಗಳವನೀಕ್ಷಿಸುತ |
ಸರಸಿಯೆಂಬಾಸೆಯಿಂ ಕ್ರೀಡಿಪ ಮರಾಳಗಳ |
ನೆರವಿಗಂ ನೆರೆಮುಗಿಲ ಭೀತಿಯಂ ತೋರುತಿಹ ಸುರಪಮಣಿಖಚಿತಗೃಹದ ||
ಉರುಕಾಂತಿಯುಂ ಕಂಡು ಕಳ್ತಲೆಯ ಮೊತ್ತಮಂ |
ದಿರದೆ ಪಾರುತಮಿರ್ಪವಾ ಗೃಹದ ಶತಕೋಟಿ | [ತಿರ್ದುದು || (53)
ಕರುಮಾಡಸುಪ್ರಭೆಯು ಕೌಮುದಿಚಕೋರಿಗಳ ನಲಿಸುತ್ತಲಿರು

ಕಾಂತಾಕಟಾಕ್ಷಗಳ ಕೆನ್ನೈದಿಲೆಂದೆಂಬ |
ಭ್ರಾಂತಿಯಿಂದೈತಪ್ಪ ಮಧುಲಿಹಸಮೂಹಮು |
ಶ್ರಾಂತಕೈಶಿಕದಿರವ ಕಾಣುತ್ತ ಘನಬುದ್ಧಿಯಿಂ ನಲಿವ ಸೋಗೆಯಿಂದ ||
ಕಾಂತಾರಭವದಾಡಿಮೀಬೀಜ ರದನಮೆಂ |
ದಾಂತು ಬಹ ತಾಮ್ರತುಂಡಂಗಳಿಗೆ ಭೀತಿಯಂ | [ಸೆಯೆ || (54)
ಮುಂತೆಸಗುತಿರುವ ಗೋಮೇಧಿಕದ ಕಂಕಣದ ಝಣಝಣತ್ಕಾರಮೆ

ಮಾನಿನೀಜನ ಪಜ್ಜೆಯಿಟ್ಟರಾ ಚರಣವಾ |
ಮ್ರಾನಪಲ್ಲವನಿಚಯಮೆಂದು ಕಲಕಂಠಗಳ್ |
ಮಾನಿನಿಯರೊಡವೆರದು ಮತ್ತೆ ಗಾನಾಸಕ್ತವೆಂದೆನಿಪವನುದಿನದೊಳು ||
ಸೂನಾಸ್ತ್ರಮಾತುಳಂಗಿರವೆನ್ನುತಾಗ ಸ್ವ-|
ರ್ಭಾನು ನೆಲೆಗೊಂಡಂತೆ ವೇಣೀವಿಲಾಸಮಿ |
ನ್ನೇನೆಂಬೆನತಿಶಯುವನತುಲಿತಜಗನ್ಮೋಹದಾಕಾರನಿಲಯದಿರವ || (55)

ನಳನಳಿಸುತಂಬರಕೆ ಬೆಳೆಬೆಳೆದ ಗೋಪುರದ |
ತಳತಳಿಪ ಶಶಿಕಾಂತಶಿಲೆಶಿಲೆಗಳಿಂ ಪರಿದು |
ಹೊಳೆಹೊಳೆವ ಬಿಸಿಲಿನುಪಟಳಕಳ್ಕಿ ವಿಶ್ರಾಮ್ಯಮೆನಿಸೆ ಸಪ್ತಾಶ್ವ ನಯದಿ ||
ತಳತಳದೆ ಪೋಪುದನ್ನುಳಿದುಳಿದು ಮಂದಗತಿ |
ಯಳಸಳಸಿ ಗ್ರೀಷ್ಮದೊಳ್ ದಿನದೀರ್ಘಭಾವದಿಂ |
ಕಳಕಳಿಪ ಚಿಹ್ನೆಯಾಂತಿಳೆಗೆ ತೋರುವುದೆಂದು ಪೇಳ್ವರಾ ಗಣಕಜನರು || (56)

ಕರುಮಾಡದಗ್ರದೊಳ್ ವಿರಚಿಸಿದ ಶಶಿಕಾಂತ |
ತರುಣಿಯರ ಮೊಗಮೆಂಬ ಇರುಳೆರೆಯನಿಂ ಹರ್ಷ |
ವೆರಸುತಭ್ರದಿ ಪರಿಯೆ ಸಗ್ಗಿಗರ ಸುಂದರಿಯರೇವೇಳ್ವೆನತಿಶಯುವನು ||
ಭರದಿ ನಿಟ್ಟಿಸಿ ಮಿಂದು ಕುರುಳುಗಳ ಗೊಂದಣವ |
ಪರಪಲೆಳೆನೇಸರಿಗೆ ಕಾಣುತ್ತ ಮುಗ್ಧೆಯರ |
ದರಹಾಸ ವಿಚಕಿಲದ ಮಳೆಗರೆಯೆ ಷಟ್ಪದಗಳೆರಗುತಿಹವೇನೆಂಬೆನು || (57)

ಏಣಾಕ್ಷಿಯರು ಮುದದಿ ವೀಣಾವಿಲಾಸಮಂ |
ಜಾಣತನದಿಂ ಗೆಯ್ಯೆ ಬಜ್ಜರವು ಪಾಕಾರಿ |
ಮಾಣಿಕಗಳುಂ ಕರಗಿ ಪರಿಯಲಾಗಸದಲ್ಲಿ ಚರಿಪ ಮೌನಿಗಳ ನಿಚಯು ||
ಕಾಣುತಸಿತಾಸಿತಾಸರಿತೆಂದು ಬಂದು ಬಿ |
ನ್ನಾಣದಿಂದವಗಾಹನೆಯ ಮಾಳ್ಪರತಿಶಯುಮೆ | [ತರುಣತತಿಗೆ || (58)
ಕ್ಷೋಣಿಯೊಳ್ ಪುರುಷರಿಗೆ ಶೀಲವೆಂಬುದನರಿಪೆ ಪಿರಿಯರುಂ

ಇಂತಪ್ಪ ವಿಭವದಿಂದಮರಾವತೀಪುರದ |
ನಂತಭೋಗಂಗಳಿಂದಳಕಾವತಿಯ ಸಿರಿದಿ |
ಗಂತವಿಶ್ರಾಂತ ಶತಮಡಿಗಳಿಂ ಸಾಕೇತಸನ್ನಗರ ದೇದೀಪ್ಯದಿಂ ||
ಸಂತಸದೊಳಿರುತಿರ್ಪುದಾ ಪುರಕೆ ದಶರಥ ವ |
ಸಂತನಂತೆಯ್ದೆ ಪರಿವೃಢನಾಗಿ ಬೆಳಗುತಿಹ |
ನೆಂತೊರೆವುದಾತನುರುಶೀಲಧರ್ಮಂಗಳಂ ಫಣಿಪಗುಂ ಪ್ರಾಗಳಲಳವೇ || (59)

ವರಹರಿಶ್ಚಂದ್ರನಂ ಮರೆಸಿದಂ ಸತ್ಯದೊಳ್ |
ಧರಣಿಪತಿನಳಚಕ್ರವರ್ತಿಯಂ ಧರ್ಮದೊಳ್ |
ನೆರೆ ಮಿಗಿಲುಮೆನಿಸಿಯುರೆ ಬೆಳಗಿದಂ ಸಾಹಸದಿ ಕ್ರತುವೀರ್ಯಸಂಜಾತಗೆ |
ಗುರುವೆನಿಪ ಪಂಕ್ತಿರಥನಾಳುತ್ತಲಿರುತಿರ್ದ |
ಬೆರಗೆನ್ನಿಸೇನೆಂಬೆ **ರಾಮಪುರಿ** ಶ್ರೀಹರಿಯ |
ಸ್ಮರಿಸುತ್ತಲನವರತ ಪಾಲಿಸಿದನವನಿಯಂ ಸಾಕೇತಸನ್ನಗರದ || (60)

ಸಂಧಿ 4ಕ್ಕಂ ಪದಂಗಳ್ 207

---

## ಐದನೆಯ ಸಂಧಿ

ಸೂಚನೆ || ಸುತ್ರಾಮಮಿತ್ರದಶರಥಮಹಾರಾಜನುಂ |
ಪುತ್ರರಿಲ್ಲದೆ ದೂಯಮಾನಮಾನಸನಾಗಿ |
ಪತ್ರಕಾಮೇಷ್ಟಿಯಂ ಮಾಡಲುಜ್ಜುಗಗೊಂಡ ಗುರುವಸಿಷ್ಠರ ನೇಮದಿ ||

ಅಮಿತವಿಭವಾಸ್ಪದದಯೋಧ್ಯಾಭಿಧಾನಪುರ |
ರಮಣೀಯದಿಂದೆಸೆಯಲಾ ನಗರಬಾಹ್ಯದೊಳ್ |
ವಿಮಲತರಪುಣ್ಯಮಂದಿರಮೆನಿಸಿ ಮಾನಸದ ಸರಸಿಯಿಂ ಜನ್ಯಮೆನಿಸಿ ||
ಕ್ರಮದಿಂದೆ ಸುರರುಭೂಸುರರಿಗಾಶ್ರಯಮೆನಿಸಿ |
ಯಮಿತಜನತಾತಮಸ್ಸಂಗಗಳನಪಹರಿಸಿ |
ಸುಮನಸೋಪಮುಗ್ಯವ ಸುರನದೀನಾಯಿಕಾಮಣಿಸರಯು ರಾಜಸಿದುದು || (1)

ಅರವಿಂದಯೋಗಿ ಸರಸತಿಯ ಧಿಕ್ಕಾರಿಯುಂ |
ಹರಿಗೆ ಪ್ರಿಯಮಾಗಿ ನಿಂದಿತಕೃಷ್ಣೆಯನುದಿನಂ |
ವರಶಿವಾತ್ಮತೆಯೆನಿಸಿ ನೆರೆಚಂದ್ರಭೋಗಾಪಹೃತೆಯ ಗೈದಾಘದಂತೆ (?) ||
ಪುರತಮ ಹಿಮಕರದುನ್ಮೇಷ ಜೃಂಭಣದಿಂದೆ |
ಸರಸಪ್ರಗಲ್ಭೆಯಂತಮಿತರಸಿಕಿತೆವೆರಸಿ |
ನಿರತ ಶಿವಯೋಗಿನಿಯ ತೆರದಿ ಶೈವಾಲಾಪೆಯಾಗುತಾ ನದಿ ಮೆರೆದುದು || (2)

ಬಸಲೆಕಡೆಗಣ್ಣಿಂದ ಪುಲಿನಜಘನೋನ್ನತದೊ |
ಳೆಸೆವ ಕೋಕಸ್ತನದಿ ವಲ್ಗುವೀಚೀಭುಜಂ |
ಪೊಸತೆನಿಪ ವರ್ತುಲಾವರ್ತನಾಭೀ ಪದ್ಮವದನ ಶಫರಾಕ್ಷಿಯುಗದಿ ||
ಹಸನಾದ ಹಂಸಯಾನದಿ ದಿವ್ಯನಾರಿಯಂ |
ತೆಸೆವ ಸರಯೂನದಿಯು ತತ್ಪುರಪ್ರಾಂತ್ಯದಲಿ |
ರಸಭರಿತಮಾಗಿ ರಾರಾಜಿಸುವುದೇನೆಂಬೆನಚ್ಚರಿಯ ಪೆರ್ಚುಗೆಯನು || (3)

ಪೌರಪೌರಂಧ್ರಿಯರ್ ಪದುಳದಿಂದೈತಂದು |
ಸ್ವೈರದಿಂದವಗಾಹಮೆಸಗೆ ಕುಚಕುಂಭ ಸಂ |
ಭಾರಘನಸಾರಮೃಗಸಾರಪರಿಪೂರದಿಂದಾ ನದಿಯು ರವಿತನುಜೆಯ ||
ಚಾರುಲಾವಣ್ಯ ತುಹಿನಾದ್ರಿಯ ಕುಮಾರಿಯ ಉ |
ದಾರತೆಯನಾಲಿಂಗಿಸಿರ್ಪಳೋಯೆನುತ ಪ್ರ |
ಚಾರಣಂಗೈವ ಚಾರಣಸಿದ್ಧಮೌನಿಗಳ ಮನುತೆ ಸಂರಾಜಿಸುವುದು || (4)

ಹರಿಯೋರ್ವ ಶಿವನೋರ್ವರೆಂಬರಜ್ಞಾನಿಗಳ್ |
ಹರಿಮಯಂ ಶಿವಮಯಂ ಭಾಸಿಸುತ್ತಿಹವಿಲ್ಲಿ |
ಪರಿಕಿಸಲ್ಕನಿಮಿಷರುಸಗ್ಗದಲ್ಲಿಹರೆಂಬರೆನ್ನಲ್ಲಿ ಶತಕೋಟಿಯು ||
ಚರಿಸ್ಯಾಡುತಿರುತಿರ್ಪವನನವರತ ಭಂಗಸಂ |
ಕರದಿ ಸಂಭ್ರಮುಮುಂಟಿ ಬಳಿಕೆಂಬರೆನ್ನೊಳಿದೆ | [ಕಣ್ಗೆಸೆದುದು || (5)
ಗುರುತರದೊಳೆಂದೆನುತ್ತಾ ನದಿಯು ನಾದದಿಂ ಮುಂಗಡೆಯ

ನೃಪಕೀರಕಲಕಂಠಮೃದುರವಗಳಿಂಪಿನಿಂ |
ಚಪಲಗತಿತಂಬೆಲರ ಪರಿಮಳದ ಸೊಂಪಿನಿಂ |
ನಿಪುಣತ್ವದಿಂ ಪಾಡುತಿರುತಿರ್ಪ ಮರಿದುಂಬಿಗಳ ಪೆಂಪುಸೊಂಪಿನಿಂದೆ ||
ಕೃಪವೆತ್ತು ಕ್ರೀಡಿಸುವ ಚಕ್ರಿಗಳ ನುಣ್ಪಿನಿಂ |
ದಪರಿಮಿತ ಬರ್ಹಿಗಳ ನರ್ತನದ ಗುಂಪಿನಿಂ |
ವಿಪುಳವನರಾಜಿ ರಾಜಿಸಿದುದಾ ಪಟ್ಟಣದ ಸಮೀಪ್ಯದೊಳು ಸೌಖ್ಯದಿ || (6)

ಸುರಕದಂಬಶ್ರೇಣಿಗಮಿತೋಪಕಾರಮುಂ |
ವಿರಚಿಸಿದ ಮದ್ಭಾಗ್ಯದೇಳಿಗೆಯ ಪೆರ್ಚಿಸಿದ |
ನರಸಿಂಹನತಿಸುಖಾಸ್ಪದಮೆನಿಪುದೀಪುರಂ ವಿಪ್ರೋತ್ತಮರಿಗೆನುತಲಿ ||
ಸುರನಾಥ ಕರುಣದಿಂ ಮರಕತದ ಹಾರಮುಂ |
ಭರದಿಂದ ನಗರರಮೆಗಿತ್ತನೋಯೆನೆ ಪರಿತ |
ಕರಮೆಸೆದು ನಂದನಂ ರಾಜಿಪುದು ನಂದನಕೆ ನಂದನಂ ತಾನೆಂಬೊಲು || (7)

ಮಾರುತವಿಹಾರದಿಂ ಚರಿಪ ಪಲ್ಲವಕರದ |
ಚಾರುತರಸನ್ನೆಯಿಂ ಮಾಕಂದ ನಿಜಮನೋ |
ಸಾರಕರನಂ ಕರೆಯೆ ಲಾಲಿಸುತಲತಿಪಕ್ಷಪಾತವೆಗ್ಗಳದಿಂದಲಿ ||
ಪಾರುವೊಲ್ ಪಾಂಥರೆದೆಗಳು ಕುಂಕುಹೂರೆನೆ ಗ |
ಭೀರಮಾಧುರ್ಯಕಲನಾದವರ್ಯಗಳಿಂದೆ |
ತೋರುತಿಹ ಕೆಂಗಣ್ಣವಕ್ಕಿಗಳ ಬೆಡಗಿನಿಂದಾ ವನಂ ಕರಮೆಸೆದುದು || (8)

ಅಳಿಕುಲಧ್ವಾನದಿಂ ಕಲಕಂಠಗಾನದಿಂ |
ಕಲಹಂಸಯಾನದಿಂ ಕುಸುಮರಸಸಾರದಿಂ |
ಕಲಿತಶುಕನಾದದಿಂದೆಸೆವ ಪ್ರತಾನಸನ್ಮಂಟಪಸ್ಥಾನದಿಂದೆ ||
ಲಲಿತಸುಮುಗಂಪಿನಿಂ ಫಲರಸದ ಬಿಣ್ಪಿನಿಂ |
ಬಲುನೆಳಲ ತಣ್ಪಿನಿಂ ಬಣ್ಣಗಿಳಿಯಿಣ್ಪಿನಿಂ |
ಮಲಯಪವಮಾನಂಗೆ ನಿಲಯದಂತಾವಗಂ ಘನಮನೋಹರಮಾದುದು || (9)

ಬಸವಂತನಿಲಯಮುರು ಬಿಸಜಾಸ್ತ್ರನಾಲಯಂ |
ಶಶಿಯ ಮಂದಿರ ಮಲಯಶಿಶುಮರುತ್ತನ ಗೇಹ |
ಪೊಸತೆನಿಪ ಪುಷ್ಪನಿಚಯಂಗಳಾಗಾರಮುಂ ಪರಭೃತಂಗಳ ಸದ್ಮವು ||
ಕುಸುಮೇಷುಘೋಟಕದ ಮಂದಿರಂ ಬಂಧುರದ |
ರಸೆಯ ಸಂತಾನಗಳ ಸಂತಾನಕಾವಾಸ |
ಮೆಸೆದುದತಿಶಯಮೆನಲ್ಕಾರಾಮ ರತಿಕಾಮರಿಂಗೆ ಕಾಮಿತಮಿಾವುತ || (10)

ಅಳಿಗಳುದ್ಭವ ಮರುಚ್ಚಳದಾರವಿಂದಸ |
ಮ್ಮಿಳಿತಸುಮನೋರಜಃ ಪುಂಜಪಿಂಜರಿತಮಂ |
ಜುಳಲತಾಕುಂಜಗುಂಜತ್ಪಿಕಸಮೂಹಮುಂ ನೋಡೆ ಶುಕತತಿಗಳೆಂಬ ||
ಬಲುಭ್ರಾಂತಿಯುಲಿ ಶಾರಿಕೆಗಳೈದಿ ವಿವಿಧರತಿ |
ಕಲನೆಯುಲಿ ಕಲಕಲಾರಾವಮೆಸಗಲ್ದೀವ |
ಲಲನಾಮಣಿಗಳಲ್ಲಿ ಸಲ್ಲಲಿತದರಹಾಸಮೆಸಗುವರನೇಕವಿಧದಿ || (11)

ನಳನಳಿಪ ಕೇಸರತಮಾಲದಿಂದಾಲದಿಂ |
ತೊಳಪ ಕುಟಜಾರ್ಜುನರಸಾಲದಿಂ ಸಾಲದಿಂ |
ಹೊಳೆಹೊಳೆವ ಕುರವಕದ ಜಾಲದಿಂ ಜಾಲದಿಂ ನಿಂಬೆಯುಂಬಟೆಗಳಿಂದೆ ||
ಕಳಕಳಿಪ ಕಾಂಚನದ ಪೂಗದಿಂ ಪೂಗದಿಂ |
ದೆಳಲತೆಗಳಾಂತ ಪುನ್ನಾಗದಿಂ ನಾಗದಿಂ |
ಬೆಳೆಬೆಳೆದ ಮಾಕಂದಕಂದದಿಂ ಕುಂದದಿಂ ಗಂಧದಿಂದಂದದಿಂದ || (12)

ಸುರಪನಾಸ್ಥಾನದೊಲ್ ರಂಭಾವಿಡಂಬನಂ |
ಪರಿಶೋಭಿಸುತ್ತಿರ್ಪುದಾವಗಂ ಕೈಲಾಸ |
ಗಿರಿಯಂತೆ ವರವಿಶಾಖಾಹ್ವಯದ ಪೂಗನಾಗಂಗಳಿಂ ಶಿವಗಣಗಳ ||
ಎರಕದಿಂದೆನಲಾಸೆಯೋಲ್ಪುಂಡರೀಕವಿ |
ಸ್ಫುರಣೆಯಿಂ ರವಿಯಂತೆ ಛಾಯಾವಿಲಾಸದಿಂ |
ಮೆರೆದುದೊಡನಾರಾಮ ಸಾಕೇತಸನ್ನಗರಭಾಮಿನಿಯ ಪರಿವೇಷ್ಟಿಸಿ || (13)

ತಂಬೆಲರ ಮೊಗಸಿರಿಯ ತಂದಲಿನ ಮೈದೊಡವು |
ತುಂಬಿಗಳ ವರನಿಲಯುವಂಬುಜಾರಿಯ ಕೆಳೆಯ |
ನಿಂಬೆನಿಪ ಶಂಬರಾರಿಯ ಯಶೋರಾಶಿಯನ್ನಿಂಬಿಟ್ಟುಕೊಂಬ ಬಗೆಯ ||
ಅಂಬುಜಾನನೆಯರಗಲಿದ ಪಾಂಥರಿಗೆ ಚುಚ್ಚಿ |
ದೆಂಬಂತೆ ಬನಲಕುಮಿ ದರಹಾಸಮೆಸಗೆ ರತ |
ಡೊಂಬಿ ಕಂಗೊಳಿಪಂತೆ ಮಲ್ಲಿಗೆಗಳಲಲ್ಲಿ ರಾಜಿಸುವವತಿಶಯದೊಳು || (14)

ಕೋಕಾಂಗನಾವಳಿಯ ಶೋಕಮನ್ನೀಗಿಸುತ |
ಶೋಕತನುಸಂಭರಿತಕಳ್ತಲೆಯ ಬೀಗಿಸುತ |
ನೇಕವಿಧದಿಂ ಮಧುಪಕುಲವ ತಲ್ಲಣಗೊಳಿಪ ಪೊಂಗೈಗಳಂ ಜವದಲಿ ||
ಏಕಮೆಂದೆನಿಸಿ ನೇಹವ ಬೆಳಸಿ ಕನಕದೊಳ್ |
ಭೀಕರಂಗೊಳಿಸಿ ಕಾದಲರ ಬೇಕಾದಲರ |
ನೀಕಕ್ಕೆಗಳಮೆನಿಸಿದನೊ (?) ರವಿಯದೆಂಬಂತೆ ಚಂಪಕಗಳೆಸೆದಿರ್ದುವು|| (15)

ಕುಂದಹರಿಚಂದನಾರ್ಜುನಮುರುಗಕುರವಕಂ |
ಚಂದನವು ಮಂದಾರಚೂತಕೇತಕಿಗಳುಂ |
ಚಂದಮಂಜುಳಗುಂಜಸರ್ಜಖರ್ಜೂರಾಮ್ರನಿಂಬಜಂಬೂಪಟೀರ ||
ಬಂಧುರದ ಕುಟಜಪಾಟಲಪಾರಿಜಾತಮುಚು |
ಕುಂದವಿದ್ರುಮಮಾಧವೀಜಾತಿಕಂಕೋಲ |
ಸುಂದರದಲುಂಗವು ಲವಂಗನಾರಂಗದಿಂದಾವನಂ ಕರಮೆಸೆದುದು || (16)

ಶರಚಾಪತೂಣೀರಗಳ ನೋಡೆ ಪೂವಿಕ್ಷು |
ವರಕಲಹ ಸಿಂಜಿನಿಯು ತನುವಿಲ್ಲದಲೆ ಜಗದಿ |
ಹರಿಬ್ರಹ್ಮರುದ್ರರಂ ಗೆಲಿದಾತನಾತನವಗಂ ಬಾಗಿ ಭೋಗಿಕುಲವ ||
ಪುರಿಗೊಳಿಪೆವೆಂದಾಗ ಬೇಗ ರಕ್ತಾಶೋಕ |
ತರುಗಳಂ ಪೊಸಸಾಣೆವಿಡಿದು ಕಷ್ಟಂ ಗೈದ |
ಗರಿಯ ಕಣೆಗಳ ಪಸರವೆನಿಸಿದವೊ ಹರಿಕೃಪೆಯೊಳೆಂಬಂತೆ ರಾಜಿಸುವುವು|| (17)

ಕಾಂತಾಪದಾಹತದಿ ಕಾಂತಮೆನಿಪಾಶೋಕ |
ಮುಂತೆ ಸ್ಮರಶರದ ಗರಡಿಯನೀಕ್ಷಿಸುತ ಶಪಥ |
ವಾಂತಾ ಮುದಾಳಿಯುಂ ಧೂಸರದ ಕೇಸರದಿ ಮನಸಿಜನ ಭಜಿಸಿ ಭರದಿ ||
ತಾಂ ತಾಪಮನ್ನೀಗಿ ಕುಂತಳಭ್ರಮರಕುಲ |
ಸಂತಾನದಾಶ್ರಯದ ಮುಖಕಮಲದಾಸವದ |
ಸ್ವಾಂತಾನುರಾಗದಿಂ ಪೆರ್ಚಿ ಕಾಮುಕರೆದೆಯ ಥಟ್ಟುಗಿವೊಲೆಸೆದಿರ್ದುವು || (18)

ನೆಲೆನೊಲೆಯು ಕೊನೆ ಸೋಂಕೆ ನಲವೆತ್ತು ಭುಲ್ಲವಿಸಿ |
ಲಲನೆಯರನಾವಗಂ ಅಗಲದತಿಭೋಗಮುಂ |
ಸುಲಭಮೆಂದೆಣಿಸಿರ್ಪ ಮಾನವರ್ಪಶುಸಮಾನಂಗಳೆಂದವರ ನಗುತ ||
ಕಲೆಯಾಂತ ಕಾಮಿನೀಜನವು ಪರಿರಂಭದಿಂ |
ಬಲವಂದು ಪಲ್ಲವಿತ ರೋಮಾಂಚಯೆಂದೆನಿಸಿ |
ಸುಲಲಿತದಿ ಕಮನರಿಗೆ ಕಾಣ್ಬಡಿಸುವಂದದಿಂ ಕುರವಕಂ ಕಂಗೊಳಿಪುದು || (19)

ನಾರಿಯರ ಕಡೆಗಣ್ಣ ನೋಟಕ್ಷೀರೋದಧಿಯ |
ಚಾರುತರವೀಚೀಪರಂಪರೆಯನೀಂಟಿದರ |
ಮಾರಶರತಾಗದೆನ್ಮಂತೆ ಸುಮಹಾಸದಿಂದಿರ್ಪರೆಂಬುದನು ಜಗಕೆ ||
ತೋರುವಂದದಿ ತಿಲಕಕುಸುಮ ತಿಲಕಗಳಾಂತು |
ದಾರಮುಂದಸ್ಮೇರದಾಮೋದರಾಗದಿಂ |
ದಾ ರಾಮಮುಧ್ಯದೊಳ್ಕಂಗೊಳಿಪವೇನೆಂಬೆ ರತಿಪತಿಯ ಜೀವನದೊಲು || (20)

ಪ್ರಬಲಕರಕಂಟಕದ ಗೊಂದಣದಿನಿಂದು ತ-|
ನ್ನುಭಯಕರಶಾಖೆಗಳನೂರ್ಧ್ವಭಾಗಕೆ ನೆಗಪಿ |
ಶುಭಕರೋತ್ತಮಮೆಸಗಿ ಕಾಂತಾಕುಚೋಪಮಿತಮಾಗಲಾ ಲಿಕುಚಂಗಳು ||
ಅಭಯಮುಂ ಗಳಿಸಿಕೊಳಲನುದಿನ ಭುಜಂಗಮರ |
ಸಭೆಯ ಸನ್ಮುಷ್ಟಿಗಳ ತಾಡನಗಳಾಂತವೆನ |
ಲಬಲಾಶೆಯಂಗೈದರಿಗೆ ವಿಭವ ಕೈಸಾರ್ವುದೆಂತು ಕೋಟಲೆಗಳಳಿದು || (21)

ಮಲ್ಲಿಕಾಮಾಲತೀಜಾತೀಲವಂಗಿಸು |
ಚೆಲ್ಲೆಗಣ್ಣರು ರಜೋಭರದಿಂದಲಿರುತಿರ್ದ |
ಡಲ್ಲಿಗೈದುತಲವರ ನಗಿಸುತಂ ನಲಿಸುತಂ ಕಲೆಯುತ್ತ ಚಲಿಸೆ ಕಂಡು ||
ಎಲ್ಲಿಯದು ಮಧುಪಾಯಿಗಳ ತತಿಗೆ ಶುಚಿಭಾವ |
ಮುಲ್ಲೋಕದೊಳಗೆಂದಪಾಂಸುಲಾದಾಡಿಮಿಯು |
ಮೆಲ್ಲನೆಳನಗೆಯೆಸಗೆ ರದನರುಚಿಯಾಂತೆಸೆವ ಫಲಗಳೇಂ ಕಂಗೊಳಿಪವೊ || (22)

ಇದು ಚೈತ್ರನಿಗೆ ನಿಲಯಮಿದು ರತೀಶನ ಸದನ |
ಮಿದು ಕೋಕಿಲಾಲಯಂ ಇದು ಮರಂದದ ಬೀಡು |
ಮಿದುವೆ ಆಡುಂಬೊಲಂ ಬಂಭರದ ಸಂಕುಲಕೆ ಕೌತುಕಂ ನೋಟಕರಿಗೆ ||
ಇದುವೆ ಮಧುಪಾಶ್ರಯಂ ಗಿಳಿಗಿಕ್ಕೆ ಪರಿಮಳ-|
ಕ್ಕಿದೆ ತವರ್ಮನೆಯೆನಿಸಿ ಮಾಕಂದ ದಿವ್ಯಸಂ |
ಪದದಿಂದ ರಾಜಿಪುದು ನಂದನದ ಸಿರಿ ಪೆರ್ಚಿದಂತದೇಂ ವರ್ಣಿಸುವೆನು || (23)

ಪರಿಮಳಕ್ಕೆಳಸಿ ಬಹ ಪರಮೆಗಳ ಗೊಂದಣಂ |
ಗಿರಿಮುಗಿಲ ಬಳಗದಂತಿರೆ ಪಲ್ಲವಂಗಳುಂ |
ಮಿರುಪ ಸೌದಾಮಿನಿಯ ಪೊಳಪನಂಗೀಕರಿಸೆ ಸುರಿವ ಮಾರಂದಝುರಿಯ ||
ಕರೆವುತಲಿ ವಿಪ್ರಲಬ್ಧಾಂಗನೆಯರಿಂಗೆ ಭೀ |
ಕರತರದ ವರಸಾಲತರು ಮನೋಜನ್ಮನಿಂ |
ಗಿರವಾಗಿ ಮಳೆಗಾಲದಂತೆ ರಾರಾಜಿಸುವದೇನೆಂಬೆನತಿಶಯಗಳ || (24)

ಸುಳಿಗಾಳಿಯಿಂ ಶಾಖಿ ಬಳುಬಳುಕಿ ಕೆಲಸಾರ |
ಲಳಿಗಳ ಸಮೂಹಂಗಳಲೆಯುತಿರೆ ಕೋಗಿಲೆಗ |
ಳುಲಿವುತಂ ಮತ್ತೊಂದು ಕೊನೆಯಲಿಹ ಪಲ್ಲವನ ನಿಲುಕುತಿರೆ ಕರಮೆಸೆದುದು ||
ನಳಿನಾಕ್ಷಿ ಪ್ರಣಯಕೋಪದಿ ಮುನಿಯೆ ಸ್ಮರಶರ-|
ಕ್ಕಳುಕಿ ಸಂತೈಸುತ ಪ್ರವಾಳಾಧರವ ಸವಿವ | [ಗಚ್ಚರಿಯೆನೆ || (25)
ಕಳೆಯರಿತ ಕ್ರಮವೆಂಬತೆರದೊಳೇಂ ಮೋಹಿಪುದೊ ನೋಟಕರಿ

ರಮಣೀಯಮಮೃತಮಯಮಾಗಿ ವಿಧುಬಿಂಬದಂ |
ತಮಿತಹಂಸಾಶ್ರಯದೊಳರವಿಂದಭವನಂತೆ |
ಸುಮನಸಾನಂದಕರಮಾಗಿ ಹರಿಯೆಂಬತೆ ಹರಿಶೋಭಿ ಹರನೆಂಬೊಲು ||
ಭ್ರಮಿತಾನಿಮಿಷಸೇವ್ಯಮಾಗಿ ಪಾಕಾರಿಯೊಲು |
ಕಮನೀಯ ಪುಂಡರೀಕಾಶ್ರಯದೊಳಗ್ನಿಯೆನೆ |
ವಿಮಲಕಾಸಾರಮೊಪ್ಪಿರುತಿರ್ದುದಾ ಬನದ ಮಧ್ಯದೊಳಗಚ್ಚರಿಯೆನೆ || (26)

ಸುಳಿಸುಳಿದು ನಟಿಸುತಿರುವಂಚೆಯಿಂ ಕೊಂಚೆಯಿಂ |
ದಳದಳದೊಳುಲಿವ ಭೃಂಗಾಳಿಯಿಂ ಗಾಳಿಯಿಂ |
ಕಳಕಳಿಪ ಚಕ್ರಗಳ ಕೂರ್ಮೆಯಿಂ ಪೆರ್ಮೆಯಿಂ ಕಾರಂಡಮಂಡಲಗಳ ||
ಹೊಳೆಹೊಳೆವ ಶಫರಿಗಳ ಪರ್ಬಿನಿಂ ಕೊರ್ಬಿನಿಂ |
ತೊಳತೊಳಪ ಸಾರಸಗಳುರ್ಬಿನಿಂ ಮುರ್ಬಿನಿಂ |
ನಳನಳಿಪ ಕಲ್ಹಾರಸಾರದಿಂ ತೀರದಿಂದಾ ಕೊಳಂ ಕಣ್ಗೆಸೆದುದು || (27)

ಅಂಗಜನ ಶರಗಳಿರುವಂಗಡಿಯೊ ಭ್ರಮರ ಬಳ |
ಗಂಗಳಿಗೆ ಸಂಗೀತಶಾಲೆಯೋ ತಂಬೆಲರ |
ಸಿಂಗರಿಪ ಮೈಗಂಪಿನಂಗನೆಯ ಸಿರಿಮೊಗವೊ ಎಣೆವಕ್ಕಿಗಳ ಕೂಟವ ‖
ಸಂಗಡಿಪ ರತಿಗೃಹವೊ ಸರಸಿಜಾಂಬಕನರಸಿ |
ಯಂಗಳವೊ ಕಾದಂಬಸಂಭ್ರಮದ ಗರಡಿಯು ಬೆ |
ಡಂಗಿದಹುದೆಂಬಂತೆ ಜನಮನೋಲ್ಲಾಸದಿಂದಾ ಕೊಳಂ ಭಾಸಿಸಿದುದು ‖ (28)

ಶರಭಂಗಯುತವಾಗಿ ಧೂಮಯೋಗಿಯ ತೆರದಿ |
ಗುರುಕವಿ ಕುಜಾತರಿಂ ಹರಿಪದವಿದೆಂಬಂತೆ |
ವರಶೀಲೀಮುಖ ಭರಿತವಾಗಿ ತೂಣೀರದೋಲ್ ಚಕ್ರದಿಂ ಸ್ಯಂದನದೊಲು ‖
ತರಣಿಶಶಿಧಾಮ ನಿರ್ಹಣದಿಂದಲಿ (?) ಮೇರು |
ಗಿರಿಯಂತೆ ಸುಳಿಗಳಿಂ ಸೈಂಧವೋಪಮವಾಗಿ |
ಸರಸಿ ರಾರಾಜಿಸಿದುದೇನೆಂಬೆನತಿಶಯುವ ಬಹುದಾವನೋನ್ನತಿಯನು ‖ (29)

ಚಂಚರೀಕಗಳ ಪಕ್ಷಾಹತದಿ ನೀರೊಳಗು |
ದಂಚಿತಪರಾಗರಾಗವು ಪರಿದು ಪೊಂಬಣ್ಣ |
ಮಿಂಚಾಂತ ಕಾಸಾರ ಕರಮೆಸೆದುದೆನೆ ಲತಾಗೃಹದೊಳಾನಂದದಿಂದ‖
ಪಂಚಶರನೊಡನೆ ರತಿಗೆಳಸಿರಲು ತನುತಾಪ |
ಸಂಚಲಿಸಲಾ ಕೊಳದಿ ಮೈದೊಳೆದರನುರಾಗ |
ಮುಂಚಲಿಸದರಸಿನದ ಬೆಡಗ ಬೀರುತಲದೇಂ ಮೋಹಿಪುದೊ ನೋಳ್ಪಜನರ‖ (30)

ಬಳಸಿ ಕೆತ್ತಿಹ ಪದ್ಮರಾಗಕಲಶಂಗಳಿಂ |
ತೊಳಪರಕ್ತಿಮ ಪರಿದು ಭರಿತವಾಗಿರ್ದೊಡಂ |
ಘಳಿಲನಾ ಪದ್ಮಿನಿಯು ನಿಜಪತಿಯನೀಕ್ಷಿಸಲ್ ಮಮತೆ ವೆಗ್ಗಳಿಸಿ ತುಂಬಿ ‖
ತುಳುಕಿ ಪೊರಸೂಸಿದುದೊ ರವಿಯು ರಾಗಾಂಬರವ |
ನಳಿನೀನಿತಂಬಿನಿಗೆ ನವ್ಯವೆನಲಿತ್ತನೆನೆ |
ಪೊಳೆಪಾಂತ ಕಾಸಾರ ಕಂಗೊಳಿಪುದಾ ರತಿಯು ವ್ಯಕ್ತಾನುರಾಗದಂತೆ ‖ (31)

ಆಡುತಿರುವಂಚೆಯಿಂ ಪಾಡುತಿಹ ಕೊಂಚೆಯಿಂ |
ಕೂಡುತಿಹ ಮರಿಗಳಿಂ ನೋಡುತಿಹ ಹರಿಗಳಿಂ |
ಮೂಡುವೆಳೆಸಿಂಪಿನಿಂ ಸುಳಿವೆಲರ ತಂಪಿನಿಂ ಸವಿಸವಿಯ ಸನ್ನುಡಿಗಳ ‖
ನ್ನಾಡುತಿಹ ಗಿಳಿಗಳಿಂ ನಲಿವುತಿರುವಳಿಗಳಿಂ |
ಬೀಡೆನಿಸಿ ಮನ್ಮಥಗೆ ಚೇಟಿಗಳ ಸನ್ಮತಕೆ |
ನೋಡುವರಿಗಚ್ಚರಿಯ ಕ್ರೀಡಿಪರ ಪೆರ್ಚುಗೆಯ ತಂಗೊಳಂ ಕಂಗೊಳಿಪುದು‖ (32)

ರಾಣಿಗೆ ಸಿತಾಭ್ರಗುಚ್ಛದ ಮುದ್ರೆಯನ್ನಾಂತು |
ಜಾಣತನದಿಂದುರಂತಾಂಬುಧಿಯ ಲಂಘಿಸುತ |
ಕ್ಷೋಣಿಜಾಹೃತ್ಕುವಲಯವ ನಗಿಸಿ ಸಾಲಕರಕಂಪನಂಗೈದು ನಯದಿ ||
ಕೇಣಮಿಲ್ಲದ ಪಲಾಶಾಳಿಗಳನದುರಿಸುತ |
ಬಾಣವೇಗದೊಳೈದೆ ಮರಳಿ ಬಹ ಪವಮಾನ |
ಮಾಣವಕನೇಂ ಮನಂಗೊಳಿಸುವನೊ ನಂದನದಿ ಸುಮನಸಾನಂದಕರದಿ || (33)

ಒಂದೆಸೆಯ ಮಾಮರದಿ ಮಂದಮಾರುತನಲೆಯೆ |
ಛಂದದಿಂ ಪೂಗೊಂಚಲರಳಿನ ಪರಾಗತತಿ |
ಗಂಧವಿಡಿದಂದದಿಂ ಬಂಧುರದಿ ಪರಪಿರಲ್ ಶುಕತುಂಡದಿಂದಲೊಸರ್ವ ||
ಬಂದ ಮಾಕಂದಫಲದಮೃತರಸ ಬೀಳಲ್ಕೆ |
ಗೊಂದಣದಿ ಕೆಸರಡಸಿ ರಾಜಿಸೆ ಮರಾಳಗಳ್ |
ಸಂದಣಿಸುತೆಡೆಯಾಡುತುಡಿಯೆ ನಕ್ಕಂದದಿಂ ಪಾಡಿ ಮುಂಬರಿದಿರ್ದವು || (34)

ರಾಗದತಿಶಯದೊಳ್ಪರಾಗಿಣಿಯರೆಮ್ಮೊಳತಿ |
ಭೋಗೇಚ್ಛೆಯಂ ಬಯಸಿ ಬಾಹುಳ್ಯದೊಲುಮೆಯಿಂ |
ದಾಗಲಗಲದೊಲಿರ್ಪಲರನರ್ಪಿಸುತ್ತ ತನುಸಿರಿಯ ಮಮಕಾರದಿಂದೆ ||
ಆಗದಿರೆ ಕಾಂಚನದೊಳಾಧಿಕ್ಯವೆಮ್ಮೊಡನೆ |
ಪೋಗದುಳಿವರೆ ಸುಂದರಿಯರಿದಂ ನಿಜಪತಿಗೆ |
ಬೇಗದಿಂದರಿಪುವೆವೆನುತ್ತ ಬಂಭರಗಳುಂ ಮೊರೆದವೆಣ್ದೆಸೆಯ ರಸೆಯ || (35)

ಮಾಕಂದರಸಪೂರದೋರಣೆಯ ನೀಕ್ಷಿಸುತ |
ಪಾರಲಾರದೆ ನಿಂದು ಮರು[1](ಗುವ ಮರಾಳಗಳ) |
ದೂರದೊಳ್ ಕಾಣುತ್ತ ರಾಜಹಂಸಿಗಳೈದಿ ಪಕ್ಕಗಳ ಕೆದರಿ ಪರಪಿ ||
ಚಾರುಸೇತುವೆಗಟ್ಟಿ ಕರೆದಪ್ಪಿ ಚುಂಬಿಸುತ |
ಲಾರೈದು ಬಾಯ್ಗೂಡಿ ಗುಟುಕನಿಕ್ಕುತ ಸಾಲ | [ಯನು || (36)
ಭೂರುಹದ ನೆಳಲಿನೊಳ್ ನಲಿವುತಿಹವೊಂದೆಸೆಯಲೇನೆಂಬೆನಚ್ಚರಿ

ವೀರುಧಂಗಳು ರಜೋಭರಮಾಂತು ಸಂತತಂ |
ತೋರುವದು ಮಧುಪಾಯಿಗಳ ಬೆರೆತು ರಾಗದಿಂ |
ಸೇರಲ್ಕೆ ಯೋಗ್ಯಮೀ ಬನಮೆನಲಹಸ್ಕರಂ ಕರವ ಪೊಗಲೀಯದಿರಲು ||
ನೀರದಂಗಳ ತೆರದಿ ನೆಳಲೆಸೆಯೆ ಕುಸುಮರಸ |
ತೋರಪನಿಯಂತಿರೆ ಮಯೂರಂಗಳತುಲನಲ | [ನುತಿಗೈಯಲಳವೆ || (37)
ವೇರಿ ಕುಣಿಯುತಮಿರ್ಪವೊಂದೆಸೆಯಲಾ ಬನದ ಸಿರಿಯ

1 ಮರುಗುತಿಹೆ ಮಗಳುಂ |

ಬಾಲನೋಲ್ ಕೃತಧಾತ್ರಿಯನುಲಾಪ ಶ್ರೀಶೈಲ |
ಲೀಲೆಯುಂದದಿ ಮಲ್ಲಿಕಾರ್ಜುನಾಲಯಮೆನಿಸಿ |
ಮೇಲೆಸೆವ ಪಾತಾಳದಂತೆ ಪುನ್ನಾಗಸದ್ಪಂಕ್ತಿಯಿಂ ಚೈತ್ರನಂತೆ ||
ಮೇಲೆನಿಪ ಸುಪ್ರವಾಳಾನುರಾಗದಿ ಕಲಹ |
ಶೀಲನಂದದಿ ಚಲಿಪ ಸುರಗಿ ಕರವೀರಗಳ |
ಜಾಲದಿಂದಾ ವನಂ ಕರೆವುತಂ ಕಾನನಂ ಕಂಗೊಳಿಸಿತಚ್ಚರಿಯೊಳು || (38)

ತನ್ನ ಬಳಗಂಗಳಂ ಚೆನ್ನಾಗಿ ಪೆರ್ಚಿಸುತ |
ಮೆನ್ನ ಕಂಗಳಿಗನುದಿನಾನಂದಕರ ಮೆನಿಪ |
ಉನ್ನತದೊಳನುಜಾತೆಯನುದಿನಂ ಕ್ರೀಡಿಪ ನಿಶಾಂತಕ್ಕೆ ತವುರೆನಿಪಳು ||
ನನ್ನಿಯಿಂ ಭೂಕಾಂತೆಯೆನುತಲೋಷಧಿಯರಸ |
ಮನ್ನಿಸುತ ಪಸುರುಡಿಗೆಗೊಟ್ಟನೋಯೆನೆ ಕಳಮ |
ಬನ್ನಣೆಯೊಳಾ ಪುರವನೇನೆಂಬೆ ಸಂಭ್ರಮವಿಜೃಂಭಣೆಯನು || (39)

ಮೊಳೆಯುತ್ತ ಕರವಾಗಿ ಮತ್ತೆ ನೀರೇರುತಂ |
ಬಳಗಂಗಳಗಲುತಂ ನಳನಳಿಸಿ ಬೆಳೆವುತಂ |
ಒಳಗೊಳಗೆ ಪೊಡೆಯಾಂತು ಪೊರಪೊಣ್ಮಿ ಪಾಲ್ದುಂಬಿ ಸಾಲ್ದುಂಬಿಗಳ ಕರೆವುತ ||
ಗಿಳಿಗಳೊಕ್ಕೆಳೆಯಾಗಿ ಬೆಳದೇನು ವಾರ್ಧಕ್ಯ |
ಮುಳಿಯದಾದುದೆನುತ್ತ ಬಳುಕಿ ಶಾಲೀವನಂ |
ತಲೆವಾಗಿತೆಂಬಂತೆ ಪಣ್ದೆನೆಗಳಾಂತೆಸೆವವಲ್ಲಲ್ಲಿ ಸಲ್ಲಲಿತದಿ || (40)

ಕ್ರೂರಚಂಚೂಪುಟದಿ ಕೊರೆದಪುವು ಗಿಳಿಗಳಿ |
ನ್ನಾರಡಿಗಳಾರಡಿಗರಾರು ಪರಿಹರಿಸುವರ್ |
ದೂರಪಾರುತಲಿ ಶುಕ ಚಲ್ಲಾಟದಿಂದೆಲ್ಲಿ ಚೆಲ್ಲುವದೊ ಬಲ್ಲ ಸಲ್ಲ ||
ಊರರಸಿಗಾರೊರೆವರಿಲ್ಲೆನುತಲಾಗ ಬಾ |
ಯಾರಿ ಶಾಳೀವನಂ ನಡುಗುತ್ತೆ ಭಯದಿಂದೆ |
ಸೀರಪೊಕ್ಕಲ್ಲಿ ತಲೆವಾಗಿರ್ಪುದೋಯೆನಲ್ ಬೆಡಗಿದಚ್ಚರಿಯೆನಿಪುದು || (41)

ಪಾಲ ಸವಿವರೆ ಬರ್ಪ ರೋಲಂಬತತಿಗಳಂ |
ಲೀಲೆಯಿಂ ಸೋವಲ್ಕೆತಂದ ಪಾಮರಿಯರ ನಿ |
ರಾಳತನುಸೌರಭ್ಯಕೆಳಸಿ ಬರೆ ಪರಮೆಗಳ ಬರವಿಗಂಜುತ ಪಾರಲು ||
ಕಾಲೇಳದತಿಮಂದಗತಿ ಪೊಂದೆ ಜಘನದ ವಿ |
ಶಾಲತೆಯ ಮೇಲಿರ್ಪ ನಡು ಬಳುಕೆ ಕುಚಕುಂಭ |
ಸೋಲುದರ ನಟಿಸುತಿರಲಲ್ಲಲ್ಲಿ ದಟ್ಟಡಿಗಳಿಟ್ಟು ಬೊಬ್ಬಿಡುತಿರ್ದರು || (42)

ನಡು ಬಳುಕೆ ಬಟ್ಟಮೊಲೆ ತೊಡವನೆತ್ತೆ ನಿತಂಬ |
ಪೊಡರೆ ನರ್ತಿಸೆ ಗಂಡಮಂಡಲದಿ ತಾಟಂಕ |
ಮುಡಿಯಲುಗೆ ನಡೆ ಮಂದಮಾಗೆ ಗಿಳಿಗಳ ಬಳಗಮಂ ಸೋವಳೊರ್ವೆಯಲ್ಲಿ ||
ನುಡಿಗೆ ಶುಕಸಂತತಿಯು ಮುಡಿಗೆ ಸೋಗೆಗಳೈದಿ |
ಕಡುಮುಮತೆಯಿಂ ಕವಿಯೆ ಕೈಪರೆಗಳಿಕ್ಕುತಂ |
ಕಡೆಗಣ್ಣ ಶರಗಳಿಂದಿಟ್ಟು ಕೆಲಕೈದಿಸುವ ಪಾಮರಿಯರೆಸೆದಿರ್ದರು || (43)

ಮುಂದುವರಿದೈತರ್ಪ ಮುದ್ದಿನರಗಿಳಿಗಳಂ |
ಮಂದಯಾನೆಯದೊರ್ವಳತಿಮುಚ್ಚರಂಬೆತ್ತು |
ಪಿಂದಿರುಗಲೆಸೆಯಲ್ಕಟಾಕ್ಷಬಾಣಗಳಿಂದೆ ಬಂಧುರದಿ ಪಿಂದಟ್ಟುತ ||
ಛಂದದಿಂ ಬೆಳ್ಪರಗಳ ಬೀಸಿ ಬೇಗ ತ |
ದ್ವೃಂದಮಂ ಕೆಡಪಲೆಳಸಿಹಳೆಂದು ಪಾಂಥಜನ |
ಸಂದೋಹವಿಕ್ಷಿಸುವುದಚ್ಚರಿಯನೇನೆಂಬೆ ಪೊಲಗಾವ ಪಾಮರಿಯರ || (44)

ನುಡಿನಡೆಯ ಮುಡಿಗಳತಿಬೆಡಗ ನಿಟ್ಟಿಸಿ ಬರ್ಪ |
ವಡಿಗಡಿಗೆ ಶುಕಹಂಸಿಸೋಗೆಗಳ ಬಳಗಮಂ |
ದೊಡನೊಡನೆ ಕಡುಗೋಪ ಪೆರ್ಚಿ ಪಾಮರಿಯೊರ್ವೆ ಪೊಡೆಯೆಕರಕಲಿತಮಾದ ||
ಕಡಗದಂಬರಬೆಡಗ ನಿಡುಗುರುಳ್ಗಳ ಕಂಡು |
ಕಡುಭಯದಿ ಪಾರುತಿರೆ ಬೆಂಬಳಿಯಲೈದುತಿಹ |
ಕಡೆಗಣ್ಣ ಪಾಶವೇಂ ಮೋಹಿಪ್ಪದೊ ಪಾಂಥರನು ಮನಸಿಜನ ಸರಳೆಂಬೊಲು ||

ನಳಿನೀವನಂಗಳಂ ಪೊಳೆವಾ ಪ್ರವಾಳಮಂ |
ಸುಳಿವ ನೀರದಗಳಂ ಬೆಳೆವ ಶಶಿಲೇಖೆಯಂ |
ತೊಳಪ ದೃಕ್ಕರಕೇಶಮುಖಮೆಂದು ತುಂಬಿಪಿಕಸೋಗೆಜೀವಂಜೀವದ ||
ಬಳಗವಿಕ್ಷಿಸಿ ಸೊಕ್ಕು ಬಲಿದಂತೆ ಕವಿದಿರಲ್ |
ಲಲನೆ ಮಂದಸ್ಮೇರಮೆಸಗೆ ಕುಂದದ ಕುಂದ | [ಪಾರುವಂತೆ || (46)
ಮಳೆಗರೆಯೆ ಭೀತಿಯಿಂ ಪಾ[1](ಡುವವು) ದೆಸೆದೆಸೆಗೆ ಪಾಂಥರೆದೆ

ಇಂತನಂತವಿನೋದಮಾಂತ ಶಾಲೀವನದ |
ಮುಂತೆ ಕಂಗೊಳಿಪುದತಿಶಯಮೆನಲ್ ಚೂತಮಾ |
ಕಾಂತೆ ಸಿಂಗರಗೈದ ಸೀಮಂತಮೆಂಬಂತೆ ತೋರ್ಪ ಘಂಟಾಪಥದೊಳು ||
ಕಾಂತ ಶಾವಂತಿಕಾಕುಸುಮಗಳ ಪದಪಿನಿಂ |
ದಂತರಾಳದಿ ಮೆರೆವ ಕದಳಿಗಳ ಸ್ತಂಭದಿಂ |
ಕಂತುಹರನಾಡುವಾಡುಂಬೊಲಮೊಯೆನೆ ಪ್ರಪಾಮಂಟಪಗಳೆಸೆದಿರ್ದುವು || (47)

---

1 ಪಾರುತಿಹ.

ಪರಿಮಳದ ಪನ್ನೀರ್ಗಳುರೆ ತೀವಿ ತಮತಮಗೆ |
ಸುರುಚಿರದ ಪೊಂಗಲಶಗಳೊಳ್ಪಿದೆ ಬಹ ಪಾಂಥ |
ನೆರವಿಗಂ ನೀಡುತ್ತ ನೋಡುತ್ತ ಬೆಡಗಿನಿಂದಾಡುತ್ತ ಸವಿನುಡಿಗಳ ॥
ತರತರದೊಳೊಪ್ಪಿರ್ದರೇನೆಂಬೆ ಮನ್ಮಥನ |
ಕರಿಗಳಂದದಿ ನೋಟಕರಿಗೆ ಭಯರಸವನುಂ |
ಕರೆವುತ್ತಲರಳಂಬ ಜಯಸಿರಿಯ ಬೆರೆವುತ್ತ ಮೆರೆವರಾ ಶಾಲೆಗಳಲಿ ॥ (48)

ನೀರಡಸಿ ಬಂದೊರ್ವ ನೀರ ನೀರಂ ಪೀರ್ವ |
ತೋರಕಾಂಕ್ಷೆಯೊಳಂಜಳಿಯ ಪಿಡಿದು ಜಲವಿಾಂಟ |
ಬೋರಂತೆ ಕಾಂತಾನನವ ನೋಡುವಾಸೆಯಿಂ ವಿರಳಮೆಂದೆನಿಸಿ ಬೆರಳ ॥
ಜಾರಿಸುತ್ತಿರೆ ಕಂಡು ನೀರೆ ಧಾರೆಯ ನಡುವ |
ಸಾರಿಸಲ್ಕುಭಯಕಾಂಕ್ಷೆಯು ಫಲಿತಮಪ್ಪಂತೆ |
ನಾರಸಹಕಾರಮೆಂದೆನಿಸಿದನೊಯೆನೆ ಬೆಡಗ ಬೀರುವರು ಗೌರವದೊಳು ॥ (49)

ಏಲಾನುಕಾರಿಹಿಮವಾಲುಕಾಮಿಶ್ರಿತವಿ |
ಶಾಲವಿಚಕಿಲಪಾಟಲೀಕುಸುಮನಿಚಯದಿಂ |
ಲಾಲಿತ್ಯಮೆಂದೆನಿಪ ನೀರೆರೆಯಲ್ಲೊರ್ವ ಹೃದಯ ತಣ್ಪೆನಿಸದಿರಲು ॥
ಮೇಲಕಂಬಕಗಳಂ ಮೇಲೆನಿಸಿ ಸೌರಭ್ಯ |
ಶೀಲಮೆಂದೆನಿಪ ಮುಖರಸಪೂರಮನ್ನೀಂಟಿ | [ವೆತ್ತು ॥ (50)
ಸೋಲದಲೆ ಮುಗುಳೆ ಮುಗುಳೀಕ್ಷಿಸುವ ಮಸ್ತಕವನೊಲೆದೊಲಿದು ಮಮತೆ

ಖರಕಿರಣನುರುಬೆಯಿಂದಲ್ಲೊರ್ವ ಬಾಯಾರಿ |
ಬರುತಲರವಟ್ಟಗೆಯ ಮುಂದೆಸೆಯೆ ತುಹಿನಕರ |
ಕಿರಣಸರಸಿಜಕುಂದಕುವಲಯಂಗಳ ವನಂ ರಾಜಿಸಲು ತಣ್ಪಾಗುತೆ ॥
ಇರುಳಿದೇನತಿಶಯಂ ಬೆರಸಿತೆಂದೀಕ್ಷಿಸಲು |
ತರುಣಿಯರು ಕೈತಟ್ಟ ದರಹಾಸದಿಂ ನೋಡೆ |
ನೊರೆವ ಮರಿದುಂಬಿಗಳ ಬಳಗ ಬಹುದೆಂತೆನುತ ಬೆಚ್ಚುತಿಹರೇನೇಳ್ವೆನು ॥ (51)

ಅಂಗನಾಲಿಂಗನಾಭಂಗ ಮಂಗಳವಿಭವ |
ರಂಗದುತ್ತುಂಗಿತಾನಂಗರಸನೀರಧೀ |
ಸಂಗಭಂಗತರಂಗಿತಾಮೋದಭಂಗಿಯಂ ತಾಳ್ದು ಬಾಹಾಲತೆಗಳ ॥
ತುಂಗತರಮೆನೆ ನೆಗಪಿ ಪಾಳಿಯನ್ನೊಲಿದೊಲಿದು |
ಹಿಂಗದೀಂಟುವ ಪಥಿಕನಂ ನೋಡಿ ನಗಲಾ ಬೆ |
ಡಂಗಿನಿಂ ಕ್ಷೀರಮೆನೆ ಮುಗುಳೆ ಗುಟುಕಿಸುತಿರುವ ವಾರಿಯಂ ತಾ ನಿಲಿಸದೆ॥ (52)

ಸುರುಚಿರದಪಾಂಗರುಚಿ ಪರಿಯೆ ವೇಣಿಯ ತೆರದಿ |
ಬರುತ ನೀರಡಿಕೆಯಿಂದೊರ್ವ ಕರವೆರಡರಿಂ |
ತೆರೆಗಳಂ ಪರಿಹರಿಸಿ ಜಲವನೀಂಟುವೆನೆಂಬ ಭರದಿಂದಮೊಗೆಯುತಿರಲು ||
ತರಳೆಯಳ ಬಿಂಬೋಷ್ಠದುರುರಾಗ ಪರಿಕಲಿಸಿ |
ಬರೆ ವಸಂತಮುದೆಂದು ಎಡಬಲವ ನೋಡುತಿರೆ |
ದರಹಾಸಮುಂಕುರಿಸಿ ನೀರೆರೆಯೆ ಪೀರುತಿಹರಾ ಪ್ರಪಾಶಾಲೆಯಲ್ಲಿ || (53)

ತುಂಬುಜವ್ವನೆಯೊರ್ವೆಯುಂಬುಜಕರಂಗಳಿಂ |
ಸಂಭ್ರಮುದಿ ವಿಧುಬಿಂಬನಿಭಕಲಶಮುಂ ಪಿಡಿದು |
ತುಂಬಿ ನೀರೆರೆಯುತಿರಲೀಂಟುತಿಹ ಪಥಿಕನಂ ನೋಡುತಾಶೆಯಲಿ ಮುಗುಳೆ ||
ತುಂಬದಿರೆ ಮುಖಕಿರಣಸೋಂಕಿನಿಂದಲಿ ಜಾರು |
ವಂಬುಧಾರೆಯ ಸವಿಯುನೊಲ್ಲದವನಾ ಸತಿಯ |
ಬಿಂಬೋಷ್ಠರುಚಿ ಲಹರಿಯೆಂದು ಕೈನೀಡುತಿಹನೇನೆಂಬೆನಚ್ಚರಿಯನು || (54)

ಪಸಿದು ರಸವೀಂಟುತಿಹ ಪೊಸಜವ್ವನಿಗನೊರ್ವ |
ಶಶಿಮುಖಿಯ ವದನ ಕರತಳದಿ ಪ್ರತಿಬಿಂಬಿಸಲ್ |
ಕುಸುಮುದಲಿ ಕುಸುಮುಂಗಳುದಿತಮುಂ ಕೇಳ್ದರಿಯೆನೀಕ್ಷಿಸಿದೆನತಿಶಯವನು ||
ರಸೆಯೊಳಿದು ಚಿತ್ರಮೆಂಬನುಮಾನದಿಂ ನೀರ |
ನೊಸೆದೀಂಟದಿರಲಬಲೆ ನಸುನಗಲ್ಕೊನುದೀ |
ವಿಸರ ಪರಪಿದೊಲಾಗಲಚ್ಚರಿಯೊಳವನ ತನುಲತೆ ಬಳ್ಕಿತೇನೆಂಬೆನು || (55)

ಸುರಭಿಲಿತಸುಯ್ಗಿಂಪಿನಧರರೋಚಿಯುತಣ್ಪ |
ಬೆರೆದ ನೀರೀಂಟಲೆದೆಯಾರಿಬರಲಾ ಪಥಿಕ |
ಬೆರಗಿಂದ ದಿಟ್ಟಿಸಿದನಿದು ಚಿತ್ರ ನೀರಿಂದ ನೀರಡಿಕೆ ತೀರದಿಹುದು ||
ತಿರೆಗೆ ಚೇತೋಜಾತನಿರದೆ ನಿಜಮಾಯೆಯುಂ |
ಪರಪಿದನುಯೆಂದು ತನುವೊಲೆದೊಲೆದು ನೋಡುತಿರೆ |
ತರಳಸಾರಂಗನೇತ್ರದಿ ನೋಡಲಾ ತರಳೆ ಮುರುಗುತಿಹರೇವೇಳ್ವೆನು || (56)

ಪರಿಮಳದ ನಿಶ್ವಾಸತನಿಗಂಪನುಂಡುಂಡು |
ಪೆರಸಾರಲಮ್ಮದಿಹ ತುಂಬಿಗಳ ಡೊಂಬಿಗಳ |
ನೆರವಿಕಾಣುತಲಳ್ಕಿ ಬಳ್ಕಿ ತಲ್ಲಣಗೊಳ್ಳುವಾ ಪಾಟಲಾಧರೆಯರ ||
ಕುರುಳ ನೀರದಮೆಂದು ಕರೆವುತ್ತಲುಲಿವುತ್ತ |
ಬರುವ ಶಿಖಿಗಳ ದಿವ್ಯಹಾಸದಿಂ ಭಾಸದಿಂ |
ಮೆರೆವುದನುದಿನ ಪ್ರಪಾಶಾಲೆಯುದು ಲೀಲೆಯಿಂದೇನೆಂಬೆನಚ್ಚರಿಯನು || (57)

ಕೋಗಿಲೆಯ ನುಣ್ದನಿಗಳಿಲ್ಲದ ಬನಂಗಳುಂ |
ರಾಗದ ಮರಾಳಂಗಳಾಡದ ಕೊಳಂಗಳುಂ |
ಪೂಗಳಿಂ ಷಟ್ಪದಗಳತಿಮಧುರಗಾನದಿಂ ರಹಿತಪ್ರತಾನಂಗಳುಂ ||
ಸೋಗೆಗಳ ನಟನೆಯಂ ಕಾಣದಚಳಂಗಳುಂ |
ಭೋಗಿಭೋಗದ ಫಲಗಳೀಯದ ಮರಂಗಳುಂ |
ಪೂಗಣೆಯಗೆಣೆಯೆನಿಸಿ ಚಲಿಸದ ಜನಂಗಳಿಲ್ಲಾ ನಾಡಸಿರಿಯದೆಂತೋ || (58)

ಜಲವೆಲ್ಲ ಸಿದ್ಧರಸ ಶಿಲೆಯೆಲ್ಲ ಮಣಿಗಣಂ |
ಪೊಳೆಯೆಲ್ಲ ಸುರನದಿಗಳೆಳೆವಳ್ಳಿ ಕಲ್ಪಲತೆ |
ಇಳೆಯ ತರು ಹರಿಚಂದನಮ್ಮೆಸೆವ ಧೇನುಗಳ್ ಸುರಧೇನು ಪೌರಜನರು ||
ನಳಜಯಂತಾದಿಗಳ್ ನಾರಿಯರ್ ಭಾರತೀ |
ಚೆಲುವರತಿಶಚಿಯಂತೆ ಬೆಳಗುತಿಹರಾ ನಾಡ |
ಲಲನೆಯಧಿನಾಯಕಂ ವಿಬುಧನಾಯಕನಲ್ಲದಿಳೆಯೊಳಿಂತುಲಿವರುಂಟೆ || (59)

ಕೋಶಸಂಕುಚಿತಗಳು ಕಮಲಾಕರಂಗಳಲಿ |
ವಾಸಿ ಜಾತಿವಿಹೀನ ದುಷ್ಕುಲಸಮೂಹದಲಿ |
ಲೇಸೆನಿಪ ಶೃಂಗಾರಹಾನಿ ವಾರ್ಧಕಮೆನಿಪ ಗಜಕಪೋಲಂಗಳಲ್ಲಿ ||
ಬೇಸರಿಪ ದುರ್ವರ್ಣಯೋಗತಡಿತಾದಿಗಳು |
ಸೀಸಗಳೊಳಲ್ಲದಿವು ಪುರಮಾಲೆಜನವನಿತೆ |
ಯಾ ಸರಿಸದಲ್ಲಿಲ್ಲ ದಶರಥಮಹೀಪಾಲ ಭೂಶಾಸನಂಗೈಯಲು || (60)

ಲಕ್ಷದಾನಾಚ್ಯುತಿಗಳಿಷುನಿಚಯಗಳಲಂಟ |
ದೀಕ್ಷಿಸಲ್ಕಾಕ್ಷೇಪಲಂಕಾರನಿಚಯದಲಿ |
ಸಾಕ್ಷಾತಸತ್ಯವಿರಹತೆ ಕ್ಲೀಬಜನರಲ್ಲಿ ಶರಭೇದವುದಧಿಗಳಲಿ ||
ದಕ್ಷಿಣಾಭಿಧ ದಿಕ್ಸಮೂಹದಲಿ ಶೃಂಖಲದು |
ಪೇಕ್ಷೆ ಬಂಧನೆ ವರ್ಣನಿಚಯದೊಳಗಲ್ಲದಿವು |
ಲಕ್ಷಮಾಗವು ಪಂಕ್ತಿರಥನಾಳ್ವ ನಾಡೊಳಿನ್ನೇನೆಂಬೆನತಿಶಯಗಳ || (61)

ತಾರಾಗ್ರಹಂಗಳಿರಲಾ ಶಶಿಯ ಸತ್ಕಾಂತಿ |
ಬೇರೆ ಜ್ಯೋತಿಷ್ಮತೀಪೆಸರ ನಿಶೆಯಾಂತಂತೆ |
ಭೂರಿನರನಾಥರನ್ನುಳಿದು ಧಾರಿಣಿ ಮಹಾರಾಜನಜಪುತ್ರನಿಂದೆ ||
ಚಾರುರಾಜನ್ವತೀಯೆಂಬಪೆಸರಾಂತಿಲ್ಲಿ |
ರಾರಾಜಿಸುತ್ತಿಹುದು ನಾಕಲೋಕದ ತೆರದಿ |
ತೋರದಹಿಭಯಗಳಂ ಸಕಲ ಸಾಮ್ರಾಜ್ಯದಿಂ ಸಜ್ಜನರ್ಪೆರ್ಚುವಂತೆ || (62)

ನೀತಿಜ್ಞರತಿನಿಪುಣರಕಲಂಕರನಘರುಂ |
ಚಾತುರ್ಯ ಪತಿಕಾರ್ಯ ಪರರಖಿಲವೇತ್ತರುಂ |
ಜಾತಿಭಾಷಾವಿಶಾರದರಮತ್ಸರರಖಿಳಶಾಸ್ತ್ರಾಗಮಜ್ಞರೆನಿಪ ||
* ಖ್ಯಾತಿಯುತ[1](ದೃಷ್ಟಿ)ರ್ಜಯಂತ ವಿ[2](ಜಯಂ) ಚದುರ |
ಮಾತುಳ್ಳ ಸಿದ್ಧಾರ್ಥನರ್ಥಸಾಧಕ ಸಕಲ |
ರೀತಿಯರಿದಾಶೋಕ ಮಂತ್ರಪಾಲ ಸುಮಂತ್ರರಿಹರಷ್ಟಮಂತ್ರಿಜನರು || (63)

ವಾಸಿಷ್ಠವಾಮದೇವಾಖ್ಯಋತ್ವಿಜಮುಖ್ಯ |
ರೀಶಸರಸಿಜಯೋನಿಯಂತರಸನಂ ಸತತ |
ಪೋಷಿಸುತ ಸಕಲಸಂಪದಬೀಜವೆಂದೆನಿಸುತಾ ನಗರವಸತಿಯೊಳಗೆ ||
ಭೂಸುರೋತ್ತಮರಿರಲು ತನ್ನಗರದಧಿನಾಥ |
ವಾಸವೋಪಮನೆನಿಸಿ ಸುರನರರ ಪೊರೆವುತಂ |
ಭಾಸಿಸುತ್ತಿರುತಿರ್ದ ಕೃತಯುಗದ ರಾಯರಿಂಗೈಮಡಿಯೆನಲ್ ವಿಭವದಿ || (64)

ರಘುಮಹಾರಾಯನಿಂ ಅಂಕುರಿಸಿ ಸಗರನಿಂ |
ದೊಗುಮಿಗೆಯೊಳುಜ್ವಲದಿ ದಳವಾಂತು ಪಲ್ಲವಿಸಿ |
ನಿಗುರಿ ಶಾಖೆಗಳೊಡೆದುದಾ ದಿಲೀಪಾಖ್ಯನಿಂದಜಮಹಾರಾಯನಿಂದೆ ||
ಮಿಗೆ ಪೂತು ಪರಿಮಳಿಸಿ ಬೆಳಗಿತ್ತು ದಶರಥನ |
ಲಘುಸುಲಭದಾಳ್ಕೆಯೊಳ್ ಫಲವಾಂತು ಕಂಪಿಂಪು |
ಸೊಗಸಬೀರಿದುದಮಮ ಸತ್ಕೀರ್ತಿಯೆಂದೆಂಬ ಬನ ಪೂತು ಭೂತಳದೊಳು|| (65)

ಸುರನರರು ಪೊಗಳುತಿಹ ಪ್ರಕ್ರಮವ ವಿಕ್ರಮವ |
ನರಿಗಳಂ ತರಿದಿಡುವ ಹೇತಿಗಳ ಖ್ಯಾತಿಗಳ |
ಪರಮಋಷಿಗಳ ಪೋಲ್ವ ರೀತಿಗಳ ನೀತಿಗಳನಾಂತು ಮೌಳಿಯಲಿ ಬಳಿಕ||
ಶರಧಿಮೇಖಲೆಯ ಪರಿರಕ್ಷಿಸುತ ಶಿಕ್ಷಿಸುತ |
ದುರಿತಕೃತ್ರಿಮಗಳಂ ಗೆಲವೆತ್ತು ನಲವೆತ್ತು |
ಸಿರಿಕರದೊಳೊಪ್ಪಿದಂ ದಶರಥಮಹಾರಥಂ ಜಗತಿಗೆ ಬಿಡೌಜನಂತೆ|| (66)

---

* ದೃಷ್ಟಿರ್ಜಯಂತೋ ವಿಜಯ ಸಿದ್ಧಾರ್ಥೋಽಹ್ಯರ್ಥಸಾಧಕಃ ||
ಅಶೋಕೋ ಮಂತ್ರಪಾಲಶ್ಚ ಸುಮಂತ್ರಶ್ಚಾಷ್ಟಮೋಽಭವತ್ ||೩||
(ವಾ. ರಾ. ಬಾಲಕಾಂಡ - ಸಪ್ತಮಸ್ಸರ್ಗ)

1. ರ್ದುಷ್ಟ 2. ವಿಥರುಂ

ನುಡಿಯನನೃತವನೊಮ್ಮೆ ಪರಿಹಾಸವಲ್ಲಿಯುಂ |
ಪಿಡಿಯ ಪರಕಾಂತೆಯರ ಕಥೆಯನುಂ ಕನಸಿನಿಂ |
ದೊಡನೆ ವೈರಿಸಮೂಹದಲ್ಲಿ ದುರ್ಗುಣಗಳನ್ನರಸ ಶರಣಾಗತರನು ||
ಬಿಡನು ಮದನಾರಿಗುಂ ಪೊಡವಿಪತಿ ದಶರಥಂ |
ಗಿಡಲಳವೆ ಪ್ರತಿಭೂಪ ಪಾಸಟಿಯ ಪದಿನಾಲ್ಕು | [ಸಾಧ್ಯಮೇ || (67)
ಪೊಡವಿಯೊಳಗೇನೆಂಬೆನತಿಶಯನ ಪೊಗಳುವಡೆ ಪಣಿರಾಜಗುಂ

ರಾಜಿಪೈಶ್ವರ್ಯದಿಂ ರಾಜರಾಜನ ಕೋಶ |
ರಾಜಿಗಳ ಧಿಕ್ಕರಿಸುತಮಿತವೈಭವದಿಂದ |
ರಾಜರನು ಸತ್ಕೀರ್ತಿಗುಣವಂತದಶರಥಮಹೀಪಾಲ ಸೌಖ್ಯದಿಂದ ||
ರಾಜಿಸಲು ಕೌಸಲೆಸುಮಿತ್ರೆಕೇಕಯಸುತೆಯ |
ರೋಜೆಯಿಂ ಶ್ರೀಸರಸ್ವತಿಗೌರಿಯರ ಬೆಡಗು |
ತೇಜದಿಂದಣೆವುತೊಪ್ಪಿರಲಮಿತ ಸೌಂದರ್ಯಗಾಂಭೀರ್ಯಸದ್ಧೈರ್ಯದಿ || (68)

ನರನಾಥನೀ ಪರಿಯ ಸಿರಿವಂತನೆಂದೆನಿಸಿ |
ಧರೆಯ ಪಾಲಿಸುತಿರ್ದನನಿತರೊಳಗೊಂದು ದಿನ |
ಮೆರೆವ ಸನ್ಮಣಿಖಚಿತಮುಕುರಮಂದಿರಕೈದಲಲ್ಲಿ ನಿಜಬಿಂಬ ಪೊಳೆಯೆ ||
ನರೆನಿರೀಕ್ಷಿಸೆ ಮುಖವು ತಣ್ಗದಿರಕರದ ಸಂ |
ಸ್ಪರುಶನದ ಸರಸಿಜದ ತೆರನಂತೆ ಕಣ್ಗೆಸೆಯೆ |
ಪರಿಹರಿಸೆ ಶಕ್ಯಮಲ್ಲದ ಜರೆಯ ನರೆಗಳಿಂ ಕುಗ್ಗಿ ಮಾನಸಚಕೋರಿ || (69)

ಅರುವತ್ತುಸಾಸಿರದ ವರ್ಷಮೀ ರಾಜ್ಯಮಂ |
ಪರಿಪಾಲನಂಗೈದು ಪರುಠವದೊಳಾರ್ಜಿಸಿದ |
ಸಿರಿಗೆ ಸಿರಿಕರರಪ್ಪ ತರಳರಾನನಗಳಂ ವೀಕ್ಷಿಸದೆ ಸುಖಪಡೆಯದೆ ||
ಪೊರೆದೆನಕಟಾ! ತನುವ ಬರಿದೆ ಬಯಲಾಶೆಯಿಂ |
ಪರಕೆ ಬಾಹಿರನಾದೆ ಪಿತೃಋಣಂಗಳ ತಾಳ್ದೆ |
ನರರೆ ಸುತಹೀನರಿಂಗುಂಟೆ ಸದ್ಗತಿಗಳಿನ್ನೇನೆಂಬೆ ದುಷ್ಕೃತಗಳ|| (70)

ಕೀರಂಗಳಾಡದಿಹ ಪಂಜರಂ ಬಂಜರಂ |
ಸಾರಸಗಳಿಲ್ಲದಿಹ ಕಾಸಾರ ನಿಸ್ಸಾರ |
ಚಾರುಪಿಕರವಮಿಲ್ಲದಿಹ ವನಂ ಕಾನನಂ ಶಶಿಯಿಲ್ಲದಿರುಳು ಮರುಳು ||
ನಾರಿಯಿಲ್ಲದ ಭೋಗಮದು ರೋಗ ಮುಖರುಚಿಯು |
ತೋರದೂಟವು ಕಾಲಕೂಟ ಡಿಂಬಕರಾಟ |
ತೋರದಿರುವಂಗಳವಮಂಗಳಂ ಜಗತಿಯೊಳ್ಬಾಳ್ದರಿಂಗೇವೇಳ್ವೆನು || (71)

ಲೀಲೆಯಿಂದ ಮರಾಳ ಚುಂಬಿಸದ ಪಂಕಜಂ |
ಮೇಲೆ ಕೋಗಿಲೆ ಮೆಲ್ಲದಿಹ ರಸಾಲದ ಸಿರಿಯು |
ರೋಲಂಬಭೋಗ್ಯಮಲ್ಲದ ಮಲ್ಲಿಗೆಯ ಸೊಬಗು ಪತಿಯೊಲ್ಲದವಳ ಬೆಡಗು ||
ಲಾಲಿಸುವ ಹಿಮಕರನನೀಕ್ಷಿಸದ ಕುವಲಯದ |
ಜಾಲ ಬಾಲಕರಿಲ್ಲದವನ ಸಾಮ್ರಾಜ್ಯಮುಂ |
ಭೂಲೋಕದೊಳಗದೇಂ ಭೂಷಣವೆ ಶೋಷಣದ ಕಾರಣಮದಲ್ತೆ ಜಗಕೆ || (72)

ಎಂದು ಬಿಸುಸುಯ್ದುಳಲಿ ಬಳಲಿ ತೊಳಲುವ ಪತಿಯ |
ಛಂದಮಂ ನಿಟ್ಟಿಸುತಲೈತಂದು ಕೌಸಲ್ಯೆ |
ಪೊಂದಿ ನಾನಾವಿಧದ ನಯನುಡಿಗಳಿಂದವನನುಪಚರಿಸಿ ಬೆಸಗೊಳಲ್ಕೆ ||
ಕಂದಿದಾನನದಿಂದೆ ಕಾಂತೆಯೊಡನಿಂತೆಂದ |
ನಿಂದಿರಾವರನನುಗ್ರಹದೂರನಾದೆ ನಾಂ |
ಕಂದರನು ಪಡೆದುದಿಲ್ಲಕಟಕಟ ಪೂರ್ವಕೃತಕರ್ಮಮಿನ್ನೆಂತೆಂಬೆನು || (73)

ಸುತರನೆತ್ತದ ತೋಳ್ಗಳವು ಮರದ ಕೀಲ್ಗಳುಂ |
ಸುತರ ಮುದ್ದಾಡದಿಹ ವದನ ಬಂಧನಸದನ |
ಸುತರ ನೋಡದ ಕಣ್ಗಳವು ಪೀಲಿಯಾ ಕಣ್ಗಳಲ್ಲದತಿಶಯಮಲ್ಲಲೇ ||
ಸತರನುಡಿಗೇಳದಿಹ ಕರ್ಣಕುಹರಂಗಳುಂ |
ಕ್ಷಿತಿಗೆ ಗಹ್ವರಗಳೆನ್ನರಸಿ ಬಾಳುವ ಮನುಜ |
ರತಿಶಯಕೆ ಬಾಲಕಂ ರನ್ನಮೆಂದೊರೆದಪರು ಮುನ್ನಿನಕಲಂಕಜನರು || (74)

ವಿಕಚಕುಲಸಂತತಿಯ ನಿಟ್ಟಿಸದ ಧೂರ್ಜಟಿಯ |
ಮಕುಟಮಣಿಯತಿಶಯಂ ವ್ಯಾಕೋಚಪಂಕಜದ |
ಚಕಚಕವ ನೋಡದಂಬರಮಣಿಯ ಸಂಭ್ರಮಂ ಕೇಕಿಗಳ ಸನ್ನಾದದ ||
ರಕುತಿಯಂ ಕಾಣದಿಹ ಜೀಮೂತಸಂಘಾತ |
ವಖಿಲಸಂಪದಮಿರ್ದೊಡೇನು ಸುತರಿಲ್ಲದಿರೆ | [ತೆಂದನು || (75)
ಪ್ರಕಟಪುದೆ ಕಾಂತೆಯದರಿಂ ಚಿಂತೆಯೆಡೆಗೊಂಡುದೆಂದು ಮಗುಳಿಂ

ಷೋಡಶಮಹಾದಾನಗಳ ಮಾಡಿ ಕ್ರತುಗಳಂ |
ನೋಡಿ ಮೆಚ್ಚುವೊಲೆಸಗಿ ಋಜುಬುದ್ಧಿಯಿಂದಾನು |
ಮಾಡದಾದೆನದೇತಕಶ್ವಮೇಧಾಧ್ವರವ ಸಂತಾನಕಾಂಕ್ಷೆಯಿಂದೆ ||
ಕೂಡದಾದುದು ಮನೋರಥಮೆಂದು ತೊಳಲಿದಂ |
ನಾಡೊಡೆಯನನಿತರೊಳು ಧೈರ್ಯರಸಮಂ ಮನದೊ |
ಳೂಡಿಸುತಲೆರಗಿದಂ ಪ್ರಕೃತಿಪುರುಷಸುಮಂತನೆಂಬ ಧೀಮಂತವರನು || (76)

ದೇವ ಜೀಯ ಪರಾಕು ಭವದೀಯ ಪಾದಾಬ್ಜ |
ಸೇವಕಂ ತಾನ್ನೈಸೆ ಬೆಸಸಿ ಕರಸಿದ ಕಜ್ಜ |
ವಾವುದದ ಪುಕುಟದಲ್ಲಾಂತು ನಿಜಶಕ್ತಿಯುಳ್ಳಿನಿತನೊಪ್ಪಂಬಡೆವೆನು ||
ಸಾವಧಾನದೊಳೆಂದು ಕರಗಳಂ ಮುಗಿದಂದು |
ಏಾ ವಿಧದಿ ಬಿನ್ನವಿಸಲರಸ ಸಂತಸಗೊಂಡು | [ಮೆಂದೆಣಿಪುದು || (77)
ಕೋವಿದನೆ ಮನ್ಮನೋರಥವನೊರೆದಪೆನಿದುವೆ ಗೋಪ್ಯತಮ

ರವಿಯನ್ವಯಂ ಮುಂದೆ ರಾಜಿಸಲ್ಕಾನೊರ್ವ |
ಕುವರನಂ ಪಡೆವೆನೆಂದೆನುತಶ್ವಮೇಧವರ |
ಸವನಮಂ ಮಾಡಲಾಲೋಚಿಸಿದೆ ಗುರುವಸಿಷ್ಠಾದಿದ್ವಿಜನಿಕರಂಗಳ ||
ತವಕದಿಂ ಕರೆತರಲ್ವೇಳ್ಕೆನೆ ಸುಮಂತ್ರನುಂ |
ಭುವಿಯರಸನಿಂಗೆರಗಿ ನುತಿಗೈದು ಬೀಳ್ಕೊಂಡು |
ಜವದಿಂದಲೈತಂದನಂದು ವೈತ್ರಾವರುಣಿಯುರುತಪೋನಂದನಕ್ಕೆ || (78)

ಪತಿಯ ನೇಮದಿ ತಪೋವನಕ್ಕೈದುತಾಮಾತ್ಯ |
ಕತಿಪಯ ಸುಮಂಗಳಂ ಕರವಿಡಿದರುಂಧತೀ |
ಪತಿಗೆ ಕಾಣಿಕೆಗೊಟ್ಟು ಪೊಡಮಟ್ಟು ಭೂನಾಥ ಪೇಳ್ದನಿತ ಬಿನ್ನೈಸಲು ||
ಅತಿಹರುಷದಿಂ ಕೇಳುತಾ ತಪೋಧನ ಮನೋ |
ಗತಿಯೊಳೈತಂದಯೋಧ್ಯಾರಾಜಧಾನಿಯೊಳ |
ಗತಿಶಯದೊಳೆಸೆವ ದಶರಥನೃಪನ ಮಂದಿರವ ಕಾಣುತೊಳಪೊಕ್ಕ ಮುದದಿ || (79)

ಮುನಿಯ ಬರವಂ ಕೇಳಿ ಜನನಾಥ ಹರುಷದಿಂ |
ವನಿತೆ ಕೌಸಲ್ಯೆ ಸಹಿತೊಪ್ಪದಿಂದೈತಂದು |
ಬಿನದದಿಂ ಸಾಷ್ಟಾಂಗವೆರಗಿ ಪೂಜಿಸುತರ್ಘ್ಯಪಾದ್ಯಾಸನಂಗಳಿತ್ತು ||
ಅನುನಯದಿ ಬೆಸಗೊಂಡನಾಮೋದಸಂತತಿಯ |
ಮಿನುಗಿಸುತ್ತೆಳನಗೆಯ ಮುನಿವರನ ಪ್ರೇಮದಿಂ |
ದೆನಗೆ ಕೃತಕೃತ್ಯತೆಯು ದೊರಕಿತಿಂದಿನ ದಿನದಿ ತದ್ಗುರುಶನೋತ್ಸವದೊಳು || (80)

ಅನ್ನೆಗಂ ಜಾಬಾಲಿ ಕಾಶ್ಯಪಂ ಕಣ್ವಋಷಿ |
ರನ್ನಭೃಗುವಾಮದೇವಾದಿಭೂಸುರರೆಲ್ಲ |
ನನ್ನಿಯಿಂದೈತರಲ್ಕಂಡು ನೃಪಸತ್ತಮಂ ದ್ವಿಜೋತ್ತಮರಿಗೆ ನಮಿಸುತ ||
ಬಿನ್ನಣದೊಳರ್ಘ್ಯಪಾದ್ಯಾಸನಂಗಳನಿತ್ತು |
ಸನ್ನುತಿಸಿ ಪರಕೆಯಂ ಕೈಕೊಂಡು ವಿಪ್ರಕುಲ |
ರನ್ನರಂ ಕುಸ್ತರಿಸಿ ತನ್ನಯ ಮನೋಗತದ ಕಾರ್ಯಮಂ ಬಿನ್ನವಿಸಿದಂ || (81)

ಅತಿಶಯುದ ಸಾಮ್ರಾಜ್ಯ ಸುತರಿಲ್ಲದಿಹ ಕತದಿ |
ಕ್ಷಿತಿಯೊಳಗೆ ಖಿನ್ನತೆಯನಾಂತಿರ್ಪುದದರಿಂದೆ |
ಮತಿಯೊಳಾಂ ತಿಳಿದಶ್ವಮೇಧಮಂ ರಚಿಸುತಂ ಸಂತತಿಯ ಪಡೆವೆನೆಂದು ||
ಯತಿಗಳಿರ ಚಿತ್ತದಭಿರತಿಯಿಂದ ಸೂಚಿಸಿದೆ |
ಗತಿ ನೀವೆಯಲ್ಲದಿನ್ನಾರು ಲೋಕದೊಳನ್ಯ |
ರತಿಶಯರು ಸುತಲಾಭಮಪ್ಪಂತೆ ದಯೆಗೈಯವೇಳ್ಕೆಂದು ನೃಪನುಸುರಲು || (82)

ನೆರೆದ ಭೂಸುರರೆಲ್ಲ ಧೊರೆಯ ನುಡಿಯಂ ಕೇಳಿ |
ಹರುಷತುಳ್ಕಾಡುತಿಹ ಪವಣಿನಿಂದಿಂತೆಂದ |
ರೆರೆಯ ನೀನೆನೆದರ್ಥ ಸಾರ್ಥಮುಹುದೈ ತುರಗಮೇಧಾಧ್ವರವನೆಸಗಲು ||
ಸರಯುನದಿಯುತ್ತರದಿ ಯಜ್ಞಭೂಮಿಯ ರಚಿಸಿ |
ಮೆರೆವ ಸಂಭಾರಗಳ ತರಿಸಿಟ್ಟು ಸಂಭ್ರಮದಿ |
ಭರಿತಮೆಂದೆನಿಪ ಹಯಮಂ ಬಿಡುವರಾಜ್ಞಾಪಿಸೆಂದೊಡಿಂತೆಂದ ನೃಪತಿ || (83)

* ಯಾಗಾರ್ಥಕೆಂದು ಸಂಪಾದಿತ ಪದಾರ್ಥಮಂ |
ನೀಗದಿರೆ ತತ್ಕರ್ತನಳಿವ ಬೇಕಾದುದಂ |
ಲೋಗರಂತುಸುರದಿರೆ ವಿದ್ವಾಂಸರಾದ ಪರಬ್ರಹ್ಮಕುಲಭೂತರ್ಕಳ ||
ಹಾಗೆ ಶ್ರುತಿಮತಮಿರ್ಪುದನುಸರಿಸಿ ಯಜ್ಞಮಂ |
ಬೇಗ ಮಾಳ್ಪಂತೆಸಗೆ ಬಲ್ಲಿದರ್ ನೀವೆಲ್ಲೈ |
ಯೋಗಿಜನಮಸ್ತಕದ ಮಣಿಗಳಿರ ನಾಂ ಪೇಳ್ವುದೇನು ಸರ್ವಜ್ಞತತಿಗೆ || (84)

ಅರಸನಾಡಿದ ನುಡಿಯ ಕೇಳಿ ಭೂಸುರರೆಲ್ಲ |
ಪರಮಹರುಷಾನಂದದಿಂದಲೆಲೆ ಭೂಪಾಲ |
ರರಸ ಸದ್ಧರ್ಮಮೂರ್ತ್ಯುದ್ಭವಿಸಿದಂತೆ ನೀ ದೊರೆಯೆನಿಸಿ ತೋರ್ಪೆಯೈಸೆ ||
ವಿರಚಿಸುವ ಕ್ರತುವಿಗುಂ ಲೋಪಂಗಳುಂಟೆ ಬಂ |
ಧುರದ ಬಯಕೆಗೆ ಕಿಂಚಿತೂಣೆಯುಂ ಪುಟ್ಟುವುದೆ |
ಸುರಪಸಖಗುರುವಸಿಷ್ಠರ ನೇಮಮಂ ಮೀರದೆಸಗು ಸುಖಿಯಪ್ಪೆಯೆನುತ || (85)

---

* ಶಕ್ಯಂ ಪ್ರಾಪ್ತುಮಯಂ ಯಜ್ಞಃ ಸರ್ವೇಣಾಪಿ ಮಹೀಕ್ಷಿತಾ ||
ನಾಪರಾಧೋ ಭವೇತ್ಕಷ್ಟೋ ಯದ್ಯಸ್ಮಿನ್ ಕ್ರತುಸತ್ತಮೇ || ೧೬ ||

ಛಿದ್ರಂಹಿ ಮೃಗಯಂತೇತ್ರ ವಿದ್ವಾಂಸೋ ಬ್ರಹ್ಮರಾಕ್ಷಸಾಃ ||
ನಿಹತಸ್ಯಚ ಯಜ್ಞಸ್ಯ ಸದ್ಯಃ ಕರ್ತಾ ವಿನಶ್ಯತಿ || ೧೭ ||

(ವಾ. ರಾ.—ಅಷ್ಟಮಸ್ಸರ್ಗ.)

ಪೇಳಿ ದ್ವಿಜಗಣಮೆಲ್ಲ ಭೂಪತಿಯ ನೇಮಮಂ |
ತಾಳುತಲಿ ನಿಜನಿಲಯಕೈದಲಾ ಭೂಸುರರ |
ಮೌಳಿಯೆನಿಪ ವಸಿಷ್ಠವಾಮದೇವರು ಪೇಳ್ದರಾ ಮಂತ್ರಿಸತ್ತಮರೊಳು ||
ಮೇಳವಿಸಲಖಿಳವಸ್ತುಗಳ ಸಂದೋಹಮಿ |
ನ್ನಾಳಿದನ ನೇಮದಿಂದೀಗ ಸರಯೂತಟದಿ |
ಪಾಳಯಂ ಬಿಡಿಸೆನ್ನುತೊರೆದು ನೃಪನಾಜ್ಞೆಯಿಂದೈದಿದರ್ ಸಿಲಯುಗಳಿಗೆ || (86)

ಮುನಿತಿಲಕನೈದಲ್ಕೆ ಜನನಾಥನುಂ ಮಂತ್ರಿ |
ಜನರೊಳಿಂತೆಂದ ಋತ್ವಿಜರು ನೇಮಿಸಿದಂತೆ |
ಅನಿತೆಲ್ಲ ವಸ್ತುಗಳ ಸಂಪಾದನಂಗೈವುದೆಂದುಸುರುತವರ ಕಳುಪಿ ||
ಮನೆಗೆ ಬಂದಾಕ್ಷಣದಿ ವನಿತೆಯರನೀಕ್ಷಿಸುತೆ |
ಮನದ ಹರುಷದೊಳೆಂದ ನೀವಿಂದು ದೀಕ್ಷೆಯನು |
ಮನುಕರಿಸೆ ಸುತಲಾಭಕೆನುತಶ್ವಮೇಧಮಂ ಮಾಳ್ಪೆ ಗುರುವರರ ಮತದಿ || (87)

ಘನದ ರವಮಂ ಕೇಳಿ ನಲಿವ ಕೇಕಿನಿಯಂತೆ |
ಅನುನಯದಿ ಜನಪತಿಯ ನುಡಿಗೇಳಿದನ್ನೆಗಂ |
ತನತನಗೆ ಕೌಸಲ್ಯೆಕೈಕಾಸುಮಿತ್ರೆಯರು ಸಂತೋಷವನಧಿಯಲ್ಲಿ ||
ಸನುಮತದಿ ಮಜ್ಜನಂಗೈವುತಲಿ **ರಾಮಪುರ** |
ವನಜಾಕ್ಷನಂಘ್ರಿಯಂ ಮನದೊಳಗೆ ಧ್ಯಾನಿಸುತ |
ಘನತರಾನಂದ ಸಂದೋಹನಿರ್ಭರಸುಖದೊಳಿರ್ದರಾ ನೃಪತಿವೆರಸಿ || (88)

ಸಂಧಿ 5 ಕ್ಕಂ ಪದಂಗಳ್ 295

---

# ಆರನೆಯ ಸಂಧಿ

ಸೂಚನೆ ॥ ಶಾಂತಾಪತಿಯ ದಿವ್ಯಚಾರಿತ್ರೆಯನ್ನು ಭೂ।
ಕಾಂತಾಶಿರೋಮಣಿಗೆ ವಿಸ್ತರಿಸಿ ರಿಸಿಯ ನುಡಿ।
ಯಾಂತಾ ಸುಮಂತ ಸಂತಸಗೊಳುವೊಲುಸುರಿದಂ ಮುಂತಣಿನ
[ಶುಭದ ಬಗೆಯ ॥

ಹಿಮವಂತನಣುಗಿ ಕೇಳ್ವಿಮಲಚಾರಿತ್ರೆಯಂ।
ಕಮಲಾಯತಾಕ್ಷಿಯರೊಳೊರೆದು ದಶರಥರಾಜ।
ನಮಿತಹರುಷೋದ್ರೇಕದಿಂದಿರೆ ಸುಮಂತನಿಂತೆಂದನೇಕಾಂತದಲ್ಲಿ ॥
[1]ಕಮಲಜನ್ಮನ ಸುತಸನತ್ಕುಮಾರಂ ನಿನಗೆ।
ಮಮತೆಯಿಂದಂ ತನಯರಪ್ಪರತಿಹಿತದಿಂದ।
ರಮಣೀಯತರಮುಪ್ಪಾಯಮಂ ಸೂಚಿಸಿದನೆನ್ನೊಡನೆ ಋಷಿನಿವಹದಿ ॥ (1)

[2]ಲೋಕವಿಶ್ರುತಕಶ್ಯಪಾತ್ಮಜವಿಭಾಂಡಮುನಿ।
ಯಾ ಕರುಣನಿಧಿಗೆ ಸಂಭವನಾದನೊರ್ವ ಸುತ।
ಲೋಕೈಕಮಿತ್ರಸಮತೇಜ ಋಷ್ಯಶೃಂಗನೆಂಬ ಶುಭನಾಮದಿಂದೆ ॥
ಆಕಾಂಕ್ಷಿಸದೆ ಲೋಕದಾಟಗಳ ವಿಪ್ರೇಂದ್ರ।
ಸೋಕದಿಂದ್ರಿಯಗಳುಪಟಳವ ಶಮೆದಮೆಯಿಂದ।
ಬೇಕೆಂದು ಜನಕಶುಶ್ರೂಷೆ ಕ್ರತುವಿನ ಸೇವೆಯಲ್ಲದೊಂದೆಣಿಸನನಘ ॥ (2)

ತಾತನ ವಿಶಾಸನದೊಳಾಶ್ರಮವನುಳಿಯದಲೆ।
ಮಾತನಾಲಿಸದನ್ಯಜನರನನುದಿನ ಜಗ।
ನ್ನೇತಾಂಘ್ರಿಪಂಕಜದಿ ಪೊದ್ದಿಸುತ ಮಾನಸವ ಮಾನಸರ ರೀತಿಯುಳಿದು ॥
ಖ್ಯಾತನೊಪ್ಪಿರಲಂಗರಾಜ್ಯದಧಿನಾಯಕಂ।
ದಾತರಗ್ರೇಸರಂ ರೋಮಪಾದಾಖ್ಯಭೂ।
ನಾಥನೆಸೆದಿರಲವನ ರಾಷ್ಟ್ರದೊಳು ದುರ್ಭಿಕ್ಷಮಾಯ್ತನಾವೃಷ್ಟಿಯಿಂದೆ ॥ (3)

---

1 ಸನತ್ಕುಮಾರೋ ಭಗವಾನ್ ಪೂರ್ವಂ ಕಥಿತವಾನ್ ಕಥಾಂ ॥
ಋಷೀಣಾಂ ಸನ್ನಿಧೌ ರಾಜನ್ ತವಪುತ್ರಾಗಮಂ ಪ್ರತಿ ॥ ೨ ॥

2 ಕಾಶ್ಯಪಸ್ಯತು ಪುತ್ರೋಽಸ್ತಿ ವಿಭಂಡಕ ಇತಿ ಶ್ರುತಃ ॥
ಋಷ್ಯಶೃಂಗ ಇತಿ ಖ್ಯಾತ ಸ್ತಸ್ಯ ಪುತ್ರೋ ಭವಿಷ್ಯತಿ ॥ ೩ ॥
ತಸ್ಯೈವಂ ವರ್ತಮಾನಸ್ಯ ಕಾಲಸ್ಸಮಭಿವರ್ತತ ॥
ಅಗ್ನಿಂ ಶುಶ್ರೂಷಮಾಣಸ್ಯ ಪಿತರಂಚ ಯಶಸ್ವಿನಂ ॥ ೬ ॥
ವಾ. ರಾ.—ನವಮಸ್ಸರ್ಗ.

ದಾರುಣದ ದುರ್ಭಿಕ್ಷ ತೋರಲಂಗೇಶನುಂ |
ಧಾರುಣೀಸುರಜನರ ಕರೆದು ವಿಜ್ಞಾಪಿಸಿದ |
ನೋರಂತನಾವೃಷ್ಟಿದೋಷಕಂ ಶಾಂತಿಯಂ ಧರ್ಮಶಾಸ್ತ್ರೋಕ್ತಮಾಗಿ ||
ಕಾರುಣ್ಯದಿಂದೆಸಗಿ ಕಾಯವೇಳ್ಕೆಂದೆನೆ ವಿ |
ಚಾರಿಸುತಲಾ ದ್ವಿಜೋತ್ತಮರು ನೃಪನೊಡನೆಂದ |
ರಾರಿಂದ ತೀರದೀ ದುರ್ಭಿಕ್ಷಮಿನ್ನಿದಕುಪಾಯಮೊಂದಿಹುದೆನುತ್ತ || (4)

ಮುನಿವಿಭಾಂಡಕನಾತ್ಮಭವಋಷ್ಯಶೃಂಗನಂ |
ಜನಪ ಬಹುಧೋಪಾಯದಿಂದಲನುಸರಗೈದು |
ಮನೆಗೆ ಕರೆತಂದಿತ್ತು ನಿಜಪುತ್ರಿಯಂ ಬಳಿಕ ಪೂಜಿಸಲು ಸುರರೆಲ್ಲರು ||
ಮನವೊಲಿದು ಮಳೆಗರೆವರೆಂದೆನಲ್ಕಾ ಭೂಪ |
ಮನದ ಚಿಂತೆಯೊಳಮಾತ್ಯರ ಕರೆಸಿ ಪೇಳಲ್ಕೆ |
ಮನಗೂಡದೆನುತಧೋಮುಖರಾಗಿ ಖಿನ್ನತೆಯೊಳುಸುರಿದರು ಭೂಭುಜಂಗೆ|| (5)

ಎಂದೊರೆಯೆ ಬಹುಚಿಂತೆಯಾಂತರಸನೊಪ್ಪಿರಲ್ |
ಬಂದು ಗಣಿಕಾಜನಂ ಬಿನ್ನಪಂ ಗೈದರಾವ್ |
ತಂದಪೆವು ಮುನಿತಿಲಕನಂ ನಗರಕೆಂದೆನುತಲಪ್ಪಣೆಯ ಪಡೆದು ಬಳಿಕ ||
ಚಂದಚಂದದೊಳುಪಾಯಾಂತರಂಗಳನೆಸಗಿ |
ಗಂದೇಭಗಮನೆಯರ್ ಗಮಕದೊಳ್ ಕರೆತರ- |
ಲ್ಕಂದು ನಿಜಸುತೆಯಿತ್ತು ಪೂಜಿಸುತಲಿಷ್ಟಮುಂ ಪಡೆದನಂಗೇಶ ನಯದಿ || (6)

ವರಮಹಾಮೌನಿಯಂ ಕರೆತರಲ್ ಕುವರರುಂ |
ಭರದಿಂದಲಪ್ಪರೆಲೆ ಜೀಯ ಸನ್ಮುನಿರಾಯ |
ನೊರೆದಿರ್ಪನೀ ರಹಸ್ಯವನೆಂದು ಸೂತನುಂ ಬಿನ್ನವಿಸಲತಿಹರ್ಷದಿ ||
ಧರಣೀಶ ಸಂತಸಂಗೊಳುತುಬ್ಬಿ ಸನ್ಮುನಿಯ |
ಚರಿತೆಯಂ ವಿಸ್ತರಿಸಿ ಪೇಳ್ವುದವನೆಂತಿರ್ದ |
ಬರಲಾದುದೆಂತಕಟ ಪೇಳೆನೆ ಸುಮಂತನಿಂತೆಂದನಾನಂದದಿಂದೆ || (7)

ಹರಿಕರಿಗಳೊಂದಾಗಿ ಬೆರೆದು ಬಭ್ರೂರಗವ |
ನೆರಳೆಪುಲಿಯೊಂದೆನಿಸಿ ಮರೆದು ನಿಜವೈರಗಳ |
ವರಮುನಿಯ ದಿವ್ಯಪ್ರಭಾವದಿಂದೊಪ್ಪಿರ್ಪವಾ ತಪೋಧನನೆಡೆಯೊಳು ||
ಪರಿಪರಿಯ ಫಲಗಳಿಂ ಭರಿತಮಾಗಿಹ ಕುಸುಮ |
ದೆರಕದಿಂ ತರುಗಳೆಸೆದಿಹವು ಷಡೃತುಗಳುಂ |
ಬೆರದೊಂದೆ ಕಾಲದಲಿ ಚೈತ್ರರಥಕಿಮ್ಮಡಿಸಿ ವನಮಿಹುದು ಸನ್ಮುನಿಪನ || (8)

ಯೋಗಯೋಗಾಂಗಗಳಲಾಗುಹೋಗುಗಳರಿತು |
ಸೀಗಿ ಕರಣಗಳಾಟ ಕೋಟಲೆಯ ಬ್ರಹ್ಮೈಕ್ಯ |
ನಾಗಿರ್ಪ ಮಾನಸದೊಳೇಕಮೇವಾದ್ವಿತಿಯನೆನಿಸಿರ್ಪ ಯತಿವರ್ಯನು ||
ಭಾಗೀರಥೀತೀರದಲ್ಲಿರ್ಪುದಾಶ್ರಮಂ |
ಸಾಗರಾತ್ಮಜೆಯರಸನಿಕ್ಕೆಯೆಂದೆನಿಪುದಾ | [ತೊರೆಯಲಕಟಾ || (9)
ಭೋಗಮಂ ಪೇಳ್ವರತಿಶಯ ಭೂಸುರೋತ್ತಮನ ಮಹಿಮೆಯೆಂ

ಅಪಹೃತಹೃಷೀಕನಹ ಕಾಶ್ಯಪಿಯದೊಂದು ದಿನ |
ಜಪಸಮಾಧಿಧ್ಯಾನಕೆಂದು ಜಾಹ್ನವಿಯೆಡೆಗೆ |
ವಿಪುಳಮತಿಯಿಂದೈದಿ ಮಜ್ಜನಂಗೈವುತಿರಲಾ ಸಮಯಕಂಬರದೊಳು ||
ಅಪರಿಮಿತಮೇಘದೊಡ್ಡುಗಳೊಡನೆ ಉಚ್ಚಳಿಸಿ |
ಚಪಲಾತ್ಮರೂಪು ಕಂಗೆಸೆದಂತೆ ತೋರ್ದಳಾ |
ಚಪಲಾಯತಾಕ್ಷಿ ಯೂರ್ವಶಿಯಂದವೇನೆಂಬೆನಂಗಜನ ಮೋಹನಮೆನೆ || (10)

ಪರಿಮಳಿಸಿತೆಣ್ದಿಶಾಚಕ್ರ ಸುರಸುಂದರಿಯ |
ಳುರುತರಾಮೋದತನುಸೌರಭ್ಯ ಧಮ್ಮಿಲ್ಲ |
ಕುರುಳಕಾಳಿಮ ಹೊರಳಿ ಹೊಡಕರಿಸಿ ಕವಿಯೆ ಕಣ್ಗದಿರು ಚಂದ್ರಿಕೆಯೆಂಬೊಲು ||
ಹರಹಿ ಬೆಳಗುತ್ತಿರ್ಪುದಡಿಗಡಿಗೆ ಮಂದಗತಿ |
ಗರುವಿಕೆಗೆ ಕಡುನಾಣ್ಚಿ ಹಂಸಗಳ್ಕಾರಂಡ |
ದಿರವ ಕೈಕೊಂಡೆಸೆದವಲ್ಲಲ್ಲಿಗಾಗ್ಯೆದೆ ಕಣ್ಮುಚ್ಚಿ ಧ್ಯಾನದಿಂದೆ || (11)

ಮೃಗನೇತ್ರಯುಗಮಬ್ಜಕೋಶಮಂ ಕೋಶಮಂ |
ಭೃಕುಟಿತದ ಸ್ಮರಚಾಪವಲ್ಲಿಯುಂ ವಲ್ಲಿಯುಂ |
ಪ್ರಕಟಾಧರಂ ಗಂಡವಾರಂಡಮಣಿಯಿಂದ ರಚಿತಸನ್ಮುಕುರಮೆನಲು ||
ಸುಕುಮಾರತನುನಾಸಕಾಂಚನಂ ಕಾಂಚನಂ |
ಚಕಿತನಳಿತೋಳ್ಕಂಠಮಾಲೆಗಳ ಲೀಲೆಯಿಂ |
ನಖಮುಧ್ಯಗಳು ಪೋಲೆ ಚಂದ್ರನ ಹರೀಂದ್ರನಂತಾ ತನ್ವಿ ರಾಜಿಸಿದಳು || (12)

ಗಳರವಕೆ ಕಲಕಂಠಗಳು ಸೋಲ್ತು ಬರುತಿರಲ್ |
ತೊಳವ ಸವಿನುಡಿಗಳ್ಗೆ ಗಿಳಿ ಮುಂದುಗೆಡುತಿರಲು |
ಬಳುಕುವ ನಿತಂಬಗಳ ನಿಟ್ಟಿಸುತ ಚಕ್ರಿಗಳ್ ಭ್ರಮಣೆಯಾಂತೈದುತಿರಲು ||
ಅಳುಕುತ್ತೈತರೆ ನುಡಿಗೆ ಸೋಗೆಗಳ ಜಂಗುಳಿಯು |
ತೊಳಲೆ ನಡೆಗಂಡ ಹಂಸೆಗಳ ಥಟ್ಟನುಸರಿಸಿ |
ಬಲುಸರದ ಮೋಹದಿಂ ಪಕ್ಕಿಗಳಕೂಟ ಬರಲೇನೆಂಬೆ ಮಾನವರನು || (13)

ಕಡಗಕಂಕಣಝಣತ್ಕಾರಮನ್ನನುವಹಿಸಿ |
ಬೆಡಗೆನಿಪ ಸಿಂಜಾನಮಂಜೀರ ಮಂಜುಳದ |
ನುಡಿ ಶಂಬರಾಹಿತನ ಪಿಕನಿಕರಗಳ ಕಲಾರಾವಮೆಂಬಂತೆ ಜನರ ‖
ಅಡಿಗಡಿಗೆ ಮೋಹನಂ ಭಯರಸಗಳಂ ಕೊಡ |
ಲ್ಕಡಿದರಾಕ್ಷಣ ಕಕ್ಷಮಾಲೆಗಳು ಯತಿತತಿಯ | [ರೋಮಸಿಚಯ(?) ‖ (14)
ನುಡಿವೆನಿನ್ನೇನ ತಂದಲು ಸುರಿಯೆ ವನ ಚೂತದೋಲಾಯ್ತು

ಇದು ರತೀಶನ ಹೇತಿ ಇದು ಕುಸುಮಶರನಲಗು |
ಇದು ಮನೋಭವನೋಜೆಯಿದು ಕಾಮನಲರಂಬು |
ಮಿದು ಶಂಬರಾಂತಕನ ಭಲ್ಲಿಹಂ ಮನಸಿಜನ ಮದದಾನೆ ಸ್ಮರನ ಬೆಡಗು ‖
ಇದು ಮಕರಕೇತನಂಗಿರವು ಮನ್ಮಥನಿಗ-|
ಭ್ಯುದಯಮನ್ನೀವ ಜೈವಾತೃಕಂ ತಾನೆಂಬೊ | [ಮೋಹನನೆನೆ ‖ (15)
ಲದುಭುತವ ತೋರುತೂರ್ವಶಿಯಾಕೃತಿಯು ನೆಲವ ಬೆಳಗಿದುದು

ಹರಿಪದಕ್ಕಡರಿ ಮತ್ತಿರದೆ ತಿರೆಗಿಳಿದೊಡಂ |
ಸರಿಯಾಗಲಾರೆವೆಂಬಕಗಳಲಿ ಸಾದೃಶ್ಯ |
ಕರರೆಯೆನುತಂಜಿ ಜೀವನನ ಪೊಕ್ಕವು ಭೋಗರಾಜೀವಸಂತತಿಗಳು ‖
ಕರಿಗಮನಮಂ ಕಂಡು ಕಡು ಖಿನ್ನತೆಯನಾಂತು |
ಚರಿಸಲೊಲ್ಲದೆ ಪದಂಗಳಲಿ ಹಂಸೆಗಳು ಛೀ |
ಚರಕೆ ಪಾರಿದವಲ್ಲಿ ಜಪಸಮಾಧಿಗಳಿರುವ ಯತಿಗಳೆದೆ ಪಾರುವಂತೆ ‖ (16)

ಮದನಮೋಹನದ ಕಣಿಯುದಯಮನ್ನೀಕ್ಷಿಸುತ |
ಕದಲೆ ವಲ್ಕಲಗಳುಂ ಕಂಪಿಸುತ ಯಮಿಜನಗ |
ಳದುರಿ ಬೆಂಬತ್ತಿ ಭ್ರಾಂತರ ತೆರದೊಳೈದುತಿರಲಾ ಸಮಯದೊಳಗನ್ನೆಗಂ ‖
ಮದನಹರಸನ್ನಿಭವಿಭಾಂಡಕನು ಜಾಹ್ನವೀ |
ಯುದರದಲ್ಲಿರ್ದು ನೋಡಿದನಪ್ಸರಾಂಗನೆಯ |
ಚೆದರಿದಂತಃಕರಣ ತನ್ಮಯಾವಸ್ಥೆಯಂ ಪಾರವಶ್ಯತೆಯಾಂತನು ‖ (17)

* ನನೆಗಣೆಯನಾಗಲಪ್ಸರೆಯ ನಿಡುಪುರ್ಬುಗಳ |
ಘನಚಾಪಮಂ ಮಾಡಿ ಕೊನೆಗಣ್ಣ ಬಾಣದಿಂ |
ಮುನಿಯನಿಸಲಾಗ ಥಟ್ಟುಗಿಯಲ್ಕೆ ಗರಿಯುಂಬಿನುಪಟಳಕೆ ಜರ್ಝರಿಸುತ |
ಮನ ಕಂದೆ ಕ್ಷಣದಿ ರೇತಃಸ್ಖಲನೆಯಾದಡಂ |
ತನಿತರೊಳಗೆಚ್ಚತ್ತು ಮುನಿತಿಲಕ ತೊಳಲುತತಿ |
ವಿನಮಿತಾನನನಾಗಿ ತತ್ತಟಕೆ ನಡೆತಂದು ಬ್ರುಸಿಯಲ್ಲಿ ಮಂಡಿಸಿದನು ‖ (18)

* ಇಲ್ಲಿ ಹೇಳುವ ಋಷ್ಯಶೃಂಗನ ಉತ್ಪತ್ತಿಯ ವಿಚಾರ ವಾಲ್ಮೀಕಿರಾಮಾಯಣ ದಲ್ಲಿ ಹೇಳಿಲ್ಲ.

ಅನ್ನೆಗಂ ಬಂದುದೊಂದೆರಳೆ ನೀರಡಿಕೆಯಿಂ |
ತನ್ನಿಚ್ಛೆಯೊಳ್ ಜಲವನೀಂಟುವೆಡೆಯೊಳ್ ಕಾಲ |
ದೌನ್ನತ್ಯದಿಂ ಮುನಿಯುಮೋಘತೇಜಸ್ಪದಂ ಗರ್ಭಪ್ರವೇಶಮಾಗೆ ||
ಮುನ್ನಿನಂದದಲಿ ನಿಜವಾಸಕೈದಲು ಹರಿಣಿ |
ಯನ್ನಿರೀಕ್ಷಿಸುತಿರ್ದ ಯಮಿಶಿಖಾಮಣಿ ನುಡಿದ |
ಪನ್ನಗಾರಿಧ್ವಜನ ಕಟ್ಟಳೆಯ ಕಾಣ್ಬರಾರೀ ಜಗದೊಳೆಂದೆನುತಲಿ || (19)

ಎಲ್ಲಿಂದ ಬಂದಳೂರ್ವಶಿಯುವಳ ನೋಡಲ್ಕೆ |
ಕಲ್ಲಂತೆ ತಪದಿಂದಲೊಣಗಿರ್ದ ಮನ್ಮನ |
ಕ್ಕೆಲ್ಲಿ ಪುಟ್ಟಿದುದೀಗ ಚಾಂಚಲ್ಯವಿಾ ಸಮಯಕೆರಳೆ ತಾನೆಂತೊದಗಿತೊ ||
ಬಲ್ಲರಾರಕಟ ದೈವದ ಮಾಯೆಯಂ ಲೋಕ |
ದಲ್ಲಿ ಕಾಲಸ್ಯಕುಟಿಲಾಗತಿಗಳೆಂದೆಂಬ |
ಸೊಲ್ಲು ಪುಸಿಯುಪ್ಪುದೆಂತೆನುತ ವಿಸ್ಮಿತನಾಗಿ ತನ್ನೊಳಾಲೋಚಿಸಿದನು || (20)

ಕಂಗಳನು ಮುಗಿದು ಮುನಿಪುಂಗವ ಸರಸ್ವತೀ |
ಯಂಗಣದಿ ಮನಮರುತಮುಭಯದಿಟ್ಟಗಳನ್ನು |
ಸಂಘಟಿಸಿ ಜಾನಿಸಲ್ಕಂತಪ್ಪ ಶುಭವಿಭವ ಕರತಳಾಮಲಕದಂತೆ ||
ಅಂಗಜಾರಿಯ ಕೃಪೆಯೊಳ್[1](ರಿವಾ)ಗೆ ನಿತ್ಯನೇ |
ಮಂಗಳಂ ಮಾಡಿ ನಿಜನಿಲಯಕೈತಂದು ಸಾ |
ರಂಗಿಯಂ ಪೋಷಿಸಿದನಖಿಳೋಪಚಾರದಿಂದನುದಿನಂ ಮಮತೆಯಿಂದ || (21)

ಅನಿತರೊಳ್ ನವಮಾಸಮಾಗಲಾ ಹರಿಣಿಯೊಳ್ |
ಜನಿಸಿದಂ ಕುವರ ಮಸ್ತಕದ ಕೋಡುಗಳಿಂದ |
ಕನಕರುಚಿಕರತೇಜದಿಂದಖಂಡಾನಂದಮೆಂಬಂತೆ ಶುಭದಿನದಲಿ ||
ಮುನಿತಿಲಕ ತರ್ಣಕನ ಸಲಹಿದ ತಪೋವನದಿ |
ತನಯನೆಂಬಭಿಲಾಷೆಯಿಂದಷ್ಟ ವತ್ಸರಂ |
ಸನುಮತಿಸೆ ಯತಿನಿವಹಮುಪನಯನಕೃತ್ಯಮಂ ರಚಿಸಿದಂ ಕುವರನಿಂಗೆ|| (22)

ವೇದವೇದಾಂತನಿಗಮಂಗಳಂ ಕಲಿಸಿ ಬಲು |
ಸಾದರದಿ ಸಾಂಖ್ಯಯೋಗಗಳಂ ಪೇಳಿ ಮಿಗೆ |
ಬೋಧಿಸಿ ನಿಜಾನಂದಮಯನೆನಿಸಿದಂ ಸುತನ ಕಶ್ಯಪನ ತನುಸಂಭವ ||
ಆ ದಿವಿಜಮುಕುಟಮಣಿಯನುದಿನದಿ ಪಿತೃಸೇವೆ |
ಮೋದದಿಂ ನಿತ್ಯ ಶುಶ್ರೂಷಣಂಗೈವುತಂ |
ಮಾಧವಾಂಘ್ರಿಧ್ಯಾನ ಪಾರವಶ್ಯದೊಳಿರ್ಪನೇನೊಂದನುಂ ಬಯಸದೆ || (23)

---

1. ಳರುಹಂಗೆ.

ಆರು ರುಚಿಗಳನರಿಯನಮಿತಫಲಮೂಲದಾ |
ಹಾರಮಲ್ಲದೆ ತಿಳಿಯ ಸ್ತ್ರೀನಪುಂಸಕರಿವರು |
ಬೇರೆಬೇರೆಂಬುದಂ ಕಾನನದ ಮೃಗಸಂಗದೊಡನಾಟ ಬಾಲ್ಯದಿಂದೆ ||
ನೀರಮುಳುಗುವುದಗ್ನಿಪೂಜೆ ಪಿತೃಸೇವೆಯುಂ |
ಚಾರುತರದಷ್ಟಾಂಗಯೋಗಗಳ ಸ್ವಾಧ್ಯಾಯ |
ವಾರೈದು ಪಿತನಲ್ಲದನ್ಯರಂ ಕಂಡರಿಯ ವಿಪ್ರೇಂದ್ರ ನೃಪಲಲಾಮ || (24)

ಅಂಗದೇಶದಲನಾವೃಷ್ಟಿ ದ್ವಾದಶವರ್ಷ |
ಸಂಗಡಿಸೆ ಜನಮೆಲ್ಲ ದುರ್ಭಿಕ್ಷಬಾಧೆಯಿಂ |
ಕಂಗೆಟ್ಟು ಕೆಲರಸುಗಳಂ ನೀಗಲತಿಘೋರತರಮಾಗೆ ಕ್ಷೋಭೆ ನೃಪಗೆ ||
ರಂಗಳಿದು ಪುಟ್ಟಿತುರುತರಚಿಂತೆಯದರಿಂದೆ |
ಮುಂಗೆಟ್ಟಿತಕಟ ಗತಿಯೇನೆಂದು ಕರೆಸಿ ದ್ವಿಜ |
ಪುಂಗವರೊಳಿಂತೆಂದ ಪ್ರಕೃತಿಜನರೊಡವೆರೆದು ತೆರಳಿ ಯಮಿಶಿಶುಕನೆಡೆಗೆ || (25)

ಪರಿಪರಿಯುಪಾಯದಿಂ ಕರೆತಂದು ಲೋಕಮಂ |
ಪೊರೆಯದಿರೆ ಸಂವರ್ತಸಮಯದಂದದಿ ಲೋಕ |
ಮೊರೆವುತಿದೆಯೆಂದೆನಲ್ಕಾ ವಿಪ್ರಕುಲಮೆಲ್ಲಮಾತನೊಡಸಿಂತೆಂದರು ||
ಅರಸ ಲಾಲಿಸು ವಿಪಿನಚರಮೃಗೋಪಮವಿಪ್ರ |
ನರಿಯ ನರರೆಂಬುದಂ ಕಾಣಲ್ಕೆ ಭೀತಿಯಿಂ |
ಪೆರಸಾರ್ವನನುಸರಿಸೆ ಶಪಿಸದಿರನೆಂಬ ಭಯದಿಂದಾವು ಪೊಗಲಮ್ಮೆವು || (26)

ಈ ಪರಿಯ ವಿಪ್ರಕುಲ ಶಾಪಭಯದಿಂದೊರೆಯೆ |
ಭೂಪ ವಿನಮಿತವದನನಾಗಿ ಬಲ್ಚಿಂತೆಯಿಂ |
ಕಾಪುರುಷನಾದೆನಕಟಕಟಿನ್ನ ದೇಶಮಂ ರಕ್ಷಿಸಲ್ ಶಕ್ತಿಯುಳಿದು ||
ಕೋಪಪ್ರಸಾದಂಗಳಿಲ್ಲ ಶರಣೆನೆ ಕಾಯ್ದು |
ಪಾಪಜನರುಂ ಅಲೆಯಲೇಸುದಿನ ಧರೆಯಾಳ್ದ |
ಡಾ ಪುರುಷ ನಿರಯಗತಿವಿಡಿಯದಿರನೆಂದರಸ ಯೋಚಿಸಲ್ಕಾ ಸಮಯದಿ || (27)

ಕಮನೀಯ ನೇತ್ರೆಯರ್ ಕನಕನಿಭಗಾತ್ರೆಯರ್ |
ಕಮಲನಿಭವಕ್ತ್ರೆಯರ್ ಕಾಂತಾನುರಕ್ತೆಯರ್ |
ಭ್ರಮರಾಳಕಾಳಿಯರ್ ಬೆರತ ಬಹುದಾಳಿಯರ್ ಬೆಡಗಾಂತ ಮೋಹಿಸಿಯರು ||
ಸಮದೇಭಯಾನೆಯರ್ ಸರಸತರಯಾನೆಯರ್ |
ನಮಿತಹರಿಮಧ್ಯೆಯರ್ ನಟನಾನುಮೋದೆಯರ್ |
ಕ್ರಮುಕಗಳ ಕಾಂತೆಯರ್ ಕಮ್ರಪ್ರಸ್ವಾಂತೆಯರ್ ನೃಪಸಭೆಗೆ ನಡೆತಂದರು || (28)

ಮಾರನಂಬಿನ ಮೊನೆಯ ಮುಗುಳೆ ಮೊನೆಗೈಯುತಿಹ |
ವಾರನಾರೀವಾರ ಒಪ್ಪದಿಂ ಬಪ್ಪ ವೈ |
ಯಾರ ಬಲು ಜಾರರೆದೆ ಹಾರಲತಿಶೃಂಗಾರಪೂರದೋರಣೆಯನಿಡಲು ||
ಆರಡಿಗಳಾರಡಿಗಳಡಿಗಡಿಗೆ ಪೆರ್ಚುತಿರೆ |
ಕ್ರೂರಝೋಂಕಾರರವ ಕುಲಿಶಮೆನೆ ಬರುವ ವಿಟ |
ಜಾರರಂ ಪಾರವಶ್ಯತೆಗೈವರೇನೆಂಬೆ ಸಮ್ಮೋಹನಾಕೃತಿಯನು || (29)

ಮಾತಿನಿಂ ಮರುಳೆನಿಸಿ ಮರ್ಮಗಳನರಿತೊರೆವ |
ಜಾತಿಯಿಂ ಜಾತಿಯನ್ನಪಹರಿಸಿ ಮೃದುತರದ |
ರೀತಿಯಿಂದುಳ್ಳನಿತ ಸೆಳೆದು ಮುನ್ನಣೆಯಿಂದ ಮಮತೆ ವೆಗ್ಗಳಿಸಿ ಮನೆಯ ||
ನೀತಿದಪ್ಪದ ಕಾರ್ಯಗಳನೆಸಗುವಂತೆ ಬಹು |
ಘಾತಿಶಯದಿಂ ಮರುಳ್ಗೊಳಿಸುತಲಿ ಸೂಳೆಯರ್ |
ಕಾತರದೊಳೈತರಲ್ಗಣಿಕಾನಿಂತಂಬಿನಿಯರೆಡಬಲದಿ ನೃಪನ ಸಭೆಗೆ || (30)

ನಗೆಯ ಬೆಳ್ದಿಂಗಳಂ ಮೊಗಶಶಿಯ ಕಳೆಗಳಂ |
ಚಿಗುರಿಸುತ ನಿಃಶ್ವಾಸದೆಲರ ಸುರಭಿಳಿತದಿಂ |
ಮುಗಮುಗಿಸಲಾ ಸಭೆಯ ನಯನಕಮಲಂಗಳುಂ ನಿದ್ದೆಯನ್ನಾನುವಂತೆ ||
ಬಗೆಬಗೆಯ ಚಾತುರ್ಯಕದ ವಾರನಾರಿಯರ್ |
ನಿಗಿನಿಗಿಪ ತನುಕಾಂತಿಯಿಂದಲೈತಂದರಸ |
ನೊಗುಮಿಗೆಯ ಚರಣಕಾನತರಾಗಿ ಬಿನ್ನಪಂಗೈದರೈತಂದು ಭಯದಿ || (31)

ಕತ್ತಲೆಯ ಮೊತ್ತಮೊತ್ತರಿಸುತಂಬರಮಣಿಯ |
ಮುತ್ತಿದೊಲ್ ದುರ್ಭಿಕ್ಷದನುತಾಪ ಚಿತ್ತಮ- |
ನ್ನೊತ್ತರಿಸಿ ಮೊತ್ತರಸ ನಸುರುಸುರುಗೊಳಿಸುತಿಹುದೇಂ ಕಜ್ಜವಂ ನಮ್ಮೊಳು ||
ಬಿತ್ತರಿಸಿ ಪೇಳ್ದರದ ಮುಸ್ತಕದೊಳಾಂತು ಪದ |
ದೊತ್ತಿನಲಿ ತಂದಿಡುವೆವಿದಕೆ ಸಂಶಯಮಿಲ್ಲ |
ಚಿತ್ತಜಾತಸಮಾನ ಚಿತ್ತವಿಸು ಬಿನ್ನಪವನಣುವೆಂದು ಗಣಿಸದೊಡನೆ || (32)

ಲಲನೆಯರ ನುಡಿಗೆ ಭೂಲಲನೆಯರಸಂ ಚಿತ್ತ |
ಕಲಿತಾನುತಾಪದತಿಕಲುಷಮನ್ನಪಹರಿಸು |
ತುಲಿದನಾ ವಿಪ್ರೇಂದ್ರನರಿಯ ಸ್ತ್ರೀಪುರುಷರೆಂಬರಿಕೆಯನ್ನೀವುದೆಂತು ||
ಒಲಿಸಲಳವೆಂತಕಟ ವಚನರಚನೆಗಳಿಂದ |
ಕಲುಷದೆದೆ ಕರಗುವುದೆ ಕಂಜಾರಿಯುದಯದಿಂ |
ಸುಲಭಮೇ ವಿಷಧರನ ಕೆಳೆ ಮರ್ತ್ಯಸಂತತಿಗೆಯೆನೆ ಬಿನ್ನಪಂಗೈದರು || (33)

ವಸುಧೆಯೊಳ್ ವಿಷಧರ ನರೇಂದ್ರವಶಮಪ್ಪುದೇ |
ನಸುಖಿನೇ ಲಾಲಿಸು ನರೇಂದ್ರಮಸ್ತಕಮಣಿಯೆ |
ಕುಸುಮಶರನುರವಣೆಗೆ ಸಿಲ್ಕದಿಹಸಾವನೀ ಪದಿನಾಲ್ಕು ಲೋಕದೊಳಗೆ ||
ಶಶಿಬೃಹಸ್ಪತಿಯಗ್ನಿಯಮನಿಋತಿಪಾಶಿಯುಂ |
ಪಶುಪತಿಯು ವಾಯುವ್ಯರೀಶಾನರತಿಬಲರ್ |
ಬಿಸಜಾಕ್ಷಿಯರ ಬಲೆಗೆ ಸಿಲ್ಕಿಹರು ಮನುಜರೇಂ ಮುಸಿಗಳೇಂ ಗಣನೆನಮಗೆ ||

ಹರಿಹರಚತುರ್ಮುಖಂ ಸುರನಾಥ ಮೌನಿತತಿ |
ಮರುಳಾಗಿ ಮಾನಿನಿಯರೊಳಿಗಂಗೈವ ಬ-|
ಲ್ಪರಿಯನೆಲ್ಲರು ಬಲ್ಲರರಸ ನೇಮವನೀಯಲಾತನಂ ತಹೆವೆಂದರು ||
ವರಪರಾಶರಕಣ್ವಗುರುವಸಿಷ್ಠಾದಿಮುನಿ |
ವರರೆಲ್ಲ ಸ್ತ್ರೀಬಲೆಯನರಿದು ಪೋದರದೆಂತು |
ಧರೆಯೊಳುಳ್ಳಖಿಳಜಂತುಗಳಿಂಗೆ ಕಾಂಕ್ಷೆಯುಂ ಪರಿದಪುದೆ ನರವರೇಣ್ಯ || (35)

ನಾರಿಯರ ನುಡಿಗೇಳಿ ನರನಾಥ ಸಂಭ್ರಮದಿ |
ತೋರುತೆಳನಗೆಯ ಅಪ್ಪಣೆಗೊಟ್ಟ ಋಷಿಯ ಸುಕು |
ಮಾರನಂ ತಹುದೆನುತ ಗಣಿಕಾಸಮೂಹಕಂದೆಲ್ಲಜನ ಭುಲ್ಲೈಸಲು ||
ವಾರಕಾಂತೆಯರೆಲ್ಲ ವಸುಮತೀಶಗೆ ನಮಿಸಿ |
ಕಾರುಣ್ಯನಿಧಿ ದಿವ್ಯಚಿತ್ತದಲ್ಲಿರ್ಪಂತು |
ದಾರವರ್ಣಿಯನು ಸನ್ನಿಧಿಗೆ ಕರತಹೆವೆಂದು ನಲಿವುತೈತಂದರೊಲಿದು || (36)

ಮರುಳುಬೂದಿಯು ಕಪ್ಪು ನರಕಪಾಲಂಗಳುಂ |
ಶಿರಸಿಗಂಟುವ ಪಸುರು ಕರಪಾದಲೇಪಂಗ |
ಳುರುತರದ ಮೋಹನದ್ರಾವಣ ವಶೀಕರಣಮೆನಿಸುವೌಷಧಿಗಳಿಂದೆ ||
ಸ್ಮರನ ನೀಕಿನಿ ತೆರಳುವಂತೆ ಮೃಗಯೂಥಂಗ |
ಳಿರದೆ ಬೆಂಬತ್ತುವಂದದಿ ವಾರನಾರಿಯರ್ |
ತ್ವರಿತದಿಂದೈತಂದರಾ ಮುನಿಪ್ರವರನಿರುವಾಶ್ರಮದ ವಿಪಿನದೆಡೆಗೆ || (37)

ಮುನಿಯ ಮಂದಿರಕೆ ದೂರದಿ ನಿತಂಬಿನಿಯರೆಲೆ |
ಮನೆಗಳಂ ರಚಿಸಿ ಸಂಭಾರಗಳನಲ್ಲಿಟ್ಟು |
ಬನಮೆಲ್ಲಮಂ ಸುತ್ತಿ ಬಿತ್ತರದಿ ಮೋಹನಕ್ರಿಯೆಗಳಲ್ಲಲ್ಲಿ ಮಡಗಿ ||
ಸನಿಹದಲಿ ತರಗೆಲೆಗಳೆಂಬವೋಲ್ ಕಜ್ಜಾಯ |
ದಿನಿಸುಗಳ ತರುತರುಗಳೆಡೆಯಲ್ಲಿ ಪರಪಿ ಮುನಿ |
ತನಯನಂ ಕಾಣದೈತಂದು ಮಂಡಿಸಿದರಾ ಮಾನಿನಿಯರನುಮಾನದಿ || (38)

ತಂಬೂರವಂ ಪಿಡಿವುತಂಬುಜಾನನೆಯೊರ್ವ |
ಳಂಬುಜಕರಂಗಳಿಂ ಶ್ರುತಿಮೇಳಗೊಳಿಸಿತ |
ನ್ನಂಬಕೋಪಮು ಶಂಕರಾಭರಣಮೊದಲಾದ ರಾಗಂಗಳಂ ಪಾಡಲು ||
ಸಂಭ್ರಮದಿ ಭೋಗಿಕುಲ ತಲೆಯೆತ್ತಿ ರಾಗರಸ |
ದಿಂ ಬಳಸಿ ಕೇಳುತಿರಲವಸರದಿ ಮುಗುಳಾನಿ |
ತಂಬಿನಿಯು ಸರದಾದಿಯಂ ಪಾಡೆ ಭರದಿಂದ ಸರಿದವೆಣ್ದೆಸೆಗೆ ಮರಳಿ || (39)

ನಟನೆಯಿಂದಾ ವಿಪ್ರವಟುಕನಂ ಮರುಳ್ಗೊಳಿಸಿ |
ಕುಟಿಲದಿಂದವನ ಕಟ್ಟುತ ಕುರಿಯೊಲೆಳೆತಂದು |
ಚಟುಲವಾಕ್ಚಾತುರ್ಯದಿಂದ ವಶವರ್ತಿಯಂ ಗೈವೆನೆಂದೊರ್ವೆಯುಸುರೆ ||
ನಿಟಲಾಕ್ಷನಾದಡೇಂ ಕಣ್ಗೆ ಗೋಚರವಾಗೆ |
ನಟಸುತೆನ್ನಂ ಬಳಸಿ ಮರಳದೊಲ್ ಘನವಾದ |
ಪಟುತರದ ಮೂಲಿಕಾಶಕ್ತಿಯುಂಟೆಂದೊರ್ವೆಯುಚಿತದಿಂದುಸುರ್ದಳಂದು ||

ಮುಚ್ಚುಮಾಯಂಗಳುಂ ಮರುಳುಕೌಟಿಲಗಳುಂ |
ಪೆರ್ಚುಗೆಯ ಪುಸಿನುಸುಳು ಠಕ್ಕುಠೌಳಿಯ ಬೆಡಗಿ |
ನಚ್ಚರಿಯ ಲಲ್ಲೆಗಾರಿಕೆ ವಂಚನಾಲಲಿತವಾಗ್ಜಾಲವಿಷಯಂಗಳ ||
ಎಚ್ಚರಿಂದವನಾವಯತಿಯಾದಡೆಮ್ಮ ಮನ |
ಮೆಚ್ಚಿ ಮುಂಗಾಣದನುಚರನಂತೆ ಚರಿಸುವಂ |
ತೊಚ್ಚಿತ್ತಿನಲಿ ತೋರ್ಪೆನೆಂದೊರ್ವೆ ಜರಡಕುಂಟಣಿ ಪೇಳ್ದರವರೆಡೆಯೊಳು || (41)

ಎಳನಗೆಯ ತೋರುತ್ತಲೆಡೆಗೆಡೆಗೆ ಸಾರುತ್ತ |
ತಳಕುಗಳ ಬೀರುತ್ತ ಬೆಳಕಿನಿಂ ಜಾರುತ್ತ |
ತಳತಳಿಪ ನಯನಗಳ ಬೆಳಕನುಂ ಬೆಳಗುತ್ತ ಬೆಳಸುತಂ ಬಹುನೇಹವ ||
ಸುಳಿಸುಳಿದು ನಟಸುತಂ ನಲಿನಲಿದು ಲಲ್ಲೆಯಿಂ |
ದೆಳೆಗಿಳಿಗಳಂಳಂತುಲಿವುತೊಳಗೊಳಗೆ ಕಲಕಂಠ | [ರ್ವೆಯು || (42)
ಗಳರವಂಗಳ ಗಳದೊಳಿಂಬಿಟ್ಟು ನೊಳಗುತಂ ಮೋಹಿಸುವೆನೆಂದೊ

ಈ ಪರಿಯ ರೂಪಿಣಿಯರನುದಿನಂ ಬಹುಳಕಪ |
ಟೋಪಾಯದಿಂದಲಾ ವನಕೆ ನಾನಾವಿಧದ |
ಸೋಪಾಯಗಳ ನೆಗಹಿ ಮುನಿತಿಲಕನೈತಪ್ಪ ಪಥಮುಂ ನಿರೀಕ್ಷಿಸುತಿರೆ ||
ತಾಪಸೋತ್ತಮ ಸಮಿತ್ಕುಶಕುಸುಮಫಲಮೂಲ |
ರೂಪೋಪಹಾರಕೈತಂದು ಚರಿಸುವ ದಿವ್ಯ |
ರೂಪವೀಕ್ಷಿಸಿದರಾ ರೂಪಜೀವನೆಯರುಂ ಬೆರಗಾಗಿ ಬೆಡಗುಗೊಳುತೆ || (43)

ಕುಸುಮಾಪಚಯಗೈದು ಕುಸುಮಫಲವಾರೈದು ।
ರಸವ ಕಲಶಕೆ ನೊಗೆದು ಲಲಿತಕಂಗಳೊಳೈದೆ ।
ಬಿಸಜಾಕ್ಷಹರನೈದುತಿರೆ ನಿಜಾಶ್ರಮಕಲ್ಲಿ ಕಂಡಾ ನಿತಂಬಿನಿಯರು ॥
ಪೊಸವಾತುಗಳನೆಸಗೆ ಪತ್ತಿದುರುಭಯದಿಂದ ।
ಸಸಿನೆ ತರುಗಳ ಮರೆಯ ಸಾರಿಯೆವೆ ಮಿಸುಕದಂ ।
ತುಸಿರಿಕ್ಕುತೀ ಪರಿಯ ಕೆಲವುದಿನ ಕಳೆಯಲಾ ಮರುದಿನಂ ಮುನಿತಿಲಕನು ॥ (44)

ಎಂದಿನಂದದಿ ಬನಕೆ ಬಂದು ಮುನಿತಿಲಕನಾ ।
ನಂದದಿಂ ಕಂದಮೂಲಾದಿಫಲಕುಸುಮಗಳ ।
ಬೃಂದಮಂ ಸಂಗ್ರಹಿಸಿ ದರ್ಭಾಂಕುರಂಗಳಂ ಸಮಿಧೆಯಂ ಕರದಿ ಪಿಡಿದು ॥
ಮುಂದಕೈದುವ ಸಮಯದಲ್ಲಿ ಗಣಿಕಾಜನರ್ ।
ಬಂದು ಬಿನ್ನಣಬೇಟಬೆಸುಗೆಯ ಚಮತ್ಕಾರ ।
ದಿಂದ ನರ್ತಿಸಿ ಪಾಡಿ ಪೊಗಳಿದರು ಕಲುಮರಗಳೆಲ್ಲ ಪಲ್ಲವಿಸುವಂತೆ ॥ (45)

ಗೀತವಾದ್ಯಂಗಳಂ ಜಾತತುಕರೀಮಧುರ ।
ರೀತಿಶ್ರುತಿತಾಡಿತಮದಾಗಲಾ ಬನದೊಳಗೆ ।
ಚೇತನಂಗಳಚೇತನಾಕಾರಮಾಗಲ್ಕೆ ಚೇತನಂ ಚೇತನಮೆನೆ ॥
ಭೂತಳದ ಜಂತುಗಳ್ಮರುಳಾಗಿ ನೋಡುತಿರ ।
ಲಾ ತಪೋನಿಧಿ ಕುತೂಹಲಚಿತ್ತನಾಗಿ ಬಹು ।
ಧಾತಿಶಯದಿಂದನಿಮಿಷಾಕೃತಿಯ ದಿಟ್ಟಿಸಿದನಾಲೇಖ್ಯಪುತ್ತಳಿಯೆನೆ ॥ (46)

ಆವಾವ ಕಾಲದಿಂದಲಿ ಕಂಡು ಕೇಳದಿಹ ।
ಪಾವನತರಾಕೃತಿಯ ಯತಿನಿವಹಮೆಂದೆನುತ ।
ಭಾವಿಸುತ ಸಾಷ್ಟಾಂಗವೆರಗಿ ಕೃತಕೃತಿಯಾದೆ ತಾನೆಂದೆನುತ್ತ ಮುದದಿ ॥
ಸಾವಧಾನದೊಳರ್ಘ್ಯಪಾದ್ಯಾಸನಗಳಿತ್ತು ।
ಲಾವಣ್ಯಪ್ರಾಸನ್ನದಾರ್ಚನಂಗೈವುತಂ ।
ಪ್ರಾವಿಣ್ಯ ಪಕ್ವಫಲಮೂಲಾದಿಗಳನಿತ್ತನತ್ಯಂತ ಸಂಭ್ರಮದೊಳು ॥ (47)

ಕಾಮಿನಿಯರೀಪರಿಯ ಕಂಡು ಕೌತೂಹಲದಿ ।
ಭ್ರಾಮಕಂಗೊಂಡು ಕಂಗೆಟ್ಟು ಕಾತರವಟ್ಟು ।
ಈ ಮಹಾಪುರುಷ ಸ್ತ್ರೀಪುರುಷರೆನ್ನುವುದರಿಯನಕಟಕಟ ಮದ್ಭಾಗ್ಯವು ॥
ಈ ಮಹಿಯೊಳೆಂತು ಕೈಸಾರ್ವುದೆಮ್ಮಯ ಸಾರ್ವ ।
ಭೌಮನ ಮನೋರಥಂ ಸಿದ್ಧಿಸುವುದೆಂದೆನುತ । [ಗೊಳುವನಿತರೊಳ್ ॥ (48)
ಲಾ ಮಹಿಳೆಯರು ವಿಭಾಂಡಕಮುನಿಯ ಭಯದಿಂದೆ ಸಂಶಯಂ

ನೆನೆದು ಮುದಿಕುಂಟಣಿಯುರನುವನೊಂದಂ ಮನದಿ |
ಮುನಿಸುತಂಗಭಿನಮಿಸಿ ಮಗುಳರ್ಘ್ಯಪಾದ್ಯಂಗ |
ಳನು ಕೊಟ್ಟು ನುತಿಗೈದು ಮೋಹಸಂಭವಿಸುವಂತಾಪೂಪರಾಶಿಗಳನು ||
ವನಕಂದಮೂಲಂಗಳೆನುತ ಕರತಳಕಿತ್ತು |
ಮುನಿತಿಲಕ ಮಧುರಮಿನಿರಸತುಲ್ಯಮಿಾ ಫಲಗ |
ಳೆನಿತು ಸವಿಯಲ್ಕನಿತು ತನುಸೌಖ್ಯಕರಮೆಂದು ಪೊಗಳಿಮಗುಳಿಂತೆಂದರು ||

ಸಾಧುಗಳ ರನ್ನ ನಿನ್ನಾದರದೊಳಾವ್ ಧನ್ಯ |
ರಾದೆವಾಶ್ರಮಕ್ಕೈದಲಪ್ಪಣೆಯನೀವುದೆಂ |
ದಾ ದಯಾಂಬುಧಿಯ ಬೀಳ್ಕೊಂಡು ಮರಳಿದರಿತ್ತಲಾ ವರ್ಣಿಯತಿಪ್ರೇಮದಿ ||
ಮೋದಕಾಪೂಪಗಳ ಮೊತ್ತಮಂ ಸವಿಸವಿಯ |
ಲಾದುದಾನಂದಕರಮಾಪ್ಯಾಯನಂಗಳಂ |
ಶ್ರೀಧರ ನಮಶ್ಶಿವ ಶಿರೀಷನಂಬರಕೇಶರಂ ನೆನೆದರತಿಹರ್ಷದಿ || (50)

ಬನಮಧ್ಯದೊಳಗಾವು ಜನನಮಾದಂದಿನಿಂ |
ದಿನಿದಪ್ಪ ಫಲಕಂದಮೂಲಂಗಳಂ ಸವಿವೆ |
ವನುದಿನಂ ಪೊಸವೌನಿಜನಮಿತ್ತ ಪಕ್ವಫಲಕ್ಕೈದೆ ಪಾಸಟಿಯಪ್ಪುದೆ ||
ವನಧಿಮೇಖಲೆಯೊಳುದಿಸಿದುದಲ್ಲ ಕೈಲಾಸ |
ವನಜಾಕ್ಷನಾಲಯೋದ್ಭೂಂತಂಗಳಲ್ಲದೀ |
ಮುನಿಜನರಪೂರ್ವಮಿಂದೆನಗೆ ದರ್ಶನಮಿತ್ತರಾನೇ ಸುಧನ್ಯನೆನುತೆ || (51)

ಹರುಷರಸಮುಂಕುರಿಸಿ ಕರದೊಳ್ ಸಮಿತ್ಕುಶೆಯ |
ಧರಿಸಿ ನಿಜಪರ್ಣಮಂದಿರಕೈದಿ ಕ್ರತುಭುಜನ |
ತ್ವರಿತದಿಂದರ್ಚಿಸಿದನನಿತರೊಳ್ಮಜ್ಜನಕ್ಕೈದಿರ್ದ ಜನಕ ಬರಲು ||
ಚರಣಮಂ ತೊಳೆದು ಪೂಜಿಸಿ ಕಂದಮೂಲಗಳ |
ಪರಿಕರವನರ್ಪಿಸಲ್ಕಾ ಮುನಿಪನತಿಶಯದಿ |
ತರಳನಂ ಕುಸ್ತರಿಸಿ ಕಳುಪಿ ನಿಜನಿಸ್ಠೆಯೊಳ್ನಿಂದನಾನಂದದಿಂದೆ || (52)

ನಿಶಿಯೊಳಗೆ ನಿದ್ದೆ ಸಮನಿಸದಾದುದಾ ಯತಿಗೆ |
ಪೊಸಬೇಟದಾಟಗಳ ಫಲರುಚಿಗಳಂ ನೆನೆದು |
ವಸುರಾಯನುದ್ಭವಿಸುವನ್ನೆಗಂ ತೊಳಲಿದಂ ನಿಜಚಿತ್ತನಿಲಯದಲ್ಲಿ ||
ಬಿಸಜಾಕ್ಷನುದಯಿಸಲ್ಕೈದೆ ಮಜ್ಜನಗೈದು |
ಸಸಿನೆ ಪಿತೃಸೇವೆ ಕ್ರತುಲಿಹತೋಷಣಂಗೈದು |
ರಸಫಲಂಗಳ ತರುವಡಿಚ್ಛೈಸಿ ಕಾನನಕ್ಕೈತಂದ ಮುನಿವಟುಕನು || (53)

ಬರವ ನಿಟ್ಟಿಸಿ ಮುನಿಯ ತರುಣಿಯರ್ ನಡೆತಂದು |
ತರತರದಿ ಬಳಸುತುಪಚರಿಸಿ ಮೋದಕಗಳಂ |
ಪರಿಪರಿಯ ದಿವ್ಯರುಚಿಕರಗಳಂ ಮೆಲಲಿತ್ತು ಪಾಡುತಾಡುತ್ತ ನಲಿಸಿ ||
ಮರಳಿದರು ನಿಜಪರ್ಣಶಾಲೆಗಳಿಗೀ ಪರಿಯು |
ಚರಿಸಿ ದೈನಂದಿನದೊಳಾ ಯಮಿಗಳರಸನಂ |
ಮರುಳೆನಿಸಿ ಸ್ಮರನ ವಶವರ್ತಿಯೆಂದೆನಿಸಿದರದೇವೇಳ್ವೆ ಕೋಟಲೆಯನು || (54)

ಇಂತು ಬಹುವಾಸರಗಳಾ ವಾರಕಾಂತೆಯರ್ |
ಸ್ವಾಂತರಂಗಕೆ ತಂದರಾ ಮುಮುಕ್ಷುವನು ರತಿ |
ಕಾಂತಕೇಳಿಯಲಿ ಮೆಚ್ಚಿಸಿ ಮಮತೆ ಪುಟ್ಟುವೊಲ್ಮಾಡಿ ಮರುಳೆನಿಸಿ ಕಳುಪೆ ||
ಸಂತತಂ ಪಾರಿಕಾಂಕ್ಷಕ ನಿಜಾಶ್ರಮದಿಂದ |
ಕಾಂತೆಯರ ಪೂರೆಗೈದಿ ಕಾಮುಸಮರದಿ ವಿಜಯ |
ಮಾಂತ್ಯೆದುತಿರ್ದನನುದಿನಮದೇನೆಂಬೆ ನಾಂ ಮೋಹರದ ಬೆಚ್ಚರವನು || (55)

ಮನಸಿನೊಳಗೆ ವಿವೇಕ ಜನಿಸುವುದು ವೇದಾಂತ |
ಜನಿತವಿಜ್ಞಾನಯುತ ಪಂಡಿತಸಮೂಹಕಂ |
ವನಿತೆಯರಪಾಂಗಶರ ತನುವಂಟದಿಪ್ಪನ್ನ ನನ್ನಿಯಿದು ಭೂತಳದೊಳು ||
ಮನಸಿಜನ ಕಿಂಕರತೆಯಂ ತಾಳ್ದ ಮಾನಿನೀ |
ಜನರನೊಲ್ಲದನಾವನೆಂಬುದಕೆ ಲಕ್ಷ್ಯಮಿಾ |
ಮುನಿತಿಲಕನಾದನೆಂತೊರೆಯಲಳವಪ್ಪುದಿನ್ನುಳಿದ ಪುರುಷಾಕೃತಿಗಳ || (56)

ವರತಪೋಧನಮೌಳಿಯಿರುತಿರಲ್ ದಿನದಿನಂ |
ತರುಣಿಯರ್ಮುದದಿಂದ ಸ್ಮರಕೇಳಿಯೊಳ್ಬೆರೆದು |
ಹೆರುಷಮನ್ನಿತ್ತು ಸ್ವಾಧೀನಗೈವುತ್ತಲುಂ ಮಗುಳೊಂದು ದಿವಸ ನಯದಿ ||
ಕರುಣಾರಸಾಂಬುನಿಧಿ ಕವಲಿಲ್ಲದೊಲ್ ನಿನ್ನ |
ಚರಣಸೇವಾಸಕ್ತರಾಗಿರ್ಪೆವನವರತ |
ಭರದಿಂದ ನಮ್ಮ ಮಂದಿರಗಳೀಕ್ಷಿಸವೇಳ್ಕುಮೆಂದು ಮೃದುನುಡಿಗಳಿಂದ || (57)

ಬಿನ್ನಪಂಗೈದು ಬಹುವಿಧಮಾಯಮನ್ನೆಗಳ |
ಲನ್ನೆಗಂ ನಿರ್ಮಳಾಂತಃಕರಣ ಯತಿವರ್ಯ |
ಬನ್ನಣೆಗೆ ಮರುಳಾಗಿ ಮಾತನಂಗೀಕರಿಸಿ ಬಂದನಾ ಸತಿಯರೊಡನೆ ||
ಸನ್ನುತಿಸಿ ವಾರನಾರಿಯರೆಲ್ಲ ಹರುಷಾಶ್ರು |
ವನ್ನೆಸುಗುತ್ತೈತಂದರಾ ರೋಮಪಾದನೃಪ |
ರನ್ನನಾಳುವ ರಾಷ್ಟ್ರಕಂದು ಸುರರಾನಂದದಿಂದ ಮಳೆಗರೆಯೆ ಪಿಂದೆ || (58)

ಆದುದು ಸುವೃಷ್ಟಿಯಾ ಮೇದಿನಿಗೆ ಕಾಸಾರ |
ಮೇದುರದಿ ಜಲಭರಿತವಾಗೆ ಪದ್ಮಾಕರಗ |
ಳಾದಿಯಹ ನದಿನದಂಗಳು ಪೂರ್ಣವಾಗಲುಂ ದುರ್ಭಿಕ್ಷ ಪೋದುದಿಳೆಗೆ ||
ಭೂದೇವಮುಕುಟಮಣಿ ಬಪ್ಪುದಂ ಕೇಳ್ದಾಗ |
ಮೇದಿನೀರಮಣನತ್ಯಾನಂದಹರ್ಷಸ |
ಮ್ಮೋದದಿಂದೈತಂದನಲ್ಲಿಗೆ ಪರಿಗ್ರಹಂಸಹಿತಲತಿಶೀಘ್ರದಿಂದ || (59)

ಕಂಡು ವಿಪ್ರೋತ್ತಮಗೆ ಮಂಡೆಯಂ ಮಣಿದು ಭೂ |
ಮಂಡಲಾಧಿಪನರ್ಘ್ಯಪಾದ್ಯಾದಿಗಳನಿತ್ತು |
ಕೊಂಡಾಡಿ ಕರೆದೊಯ್ದು ನಿಜಗೃಹದಿ ಸೌವರ್ಣಮಯಸಿಂಹವಿಷ್ಟರದಲಿ ||
ಮಂಡಿಪಂದದಿ ಮಾಡಿ ಮಗುಳೆರಗಿ ಭಕ್ತಿಯಿಂ |
ತಂಡತಂಡದ ಧೂಪದೀಪನೈವೇದ್ಯಗಳ |
ಖಂಡತೇಜೋರಾಶಿಗರ್ಪಿಸುತ ಕೃತಕೃತ್ಯನಾದನಮಿತಾನಂದದಿ || (60)

ಭೂಸುರೋತ್ತಮಗೆ ನಿಜಸುತೆ ಶಾಂತೆಯಂ ಸುರರು |
ಲೇಸೆಂಬೊಲುದ್ವಾಹಗೈದಿತ್ತು ಭಕ್ತಿರಸ |
ವಾಸಿಯಿಂ ರೋಮಪಾದಾಭಿಧನೃಪೋತ್ತಮಂ ಸೌಖ್ಯದಿಂದಿರ್ದನೆಂದು ||
ವಾಸವನ ಸಭೆಯೊಳ್ ಸನತ್ಕುಮಾರಂ ಪೇಳ್ದ |
ನೀ ಸುವೃತ್ತಾಂತಮಂ ಭೂಭುಜಲಲಾಮಗುಣ |
ರಾಶಿ ಲಾಲಿಪುದೊಂದ ಗೋಪ್ಯವಾರ್ತೆಯನೊರೆದನಾ ಸಭೆಯಲಾ ಮುನಿಪನು ||

ರವಿವಂಶದಲಿ ಮಹಾಬಲಶಾಲಿಯುಂ ಕೀರ್ತಿ |
ಕುವಲಯಾಪ್ತಂ ಪಂಕ್ತಿರಥನಾಮಭೂಭುಜಂ |
ಭುವಿಯೊಳವತರಿಸಲಾತಗೆ ಮಕ್ಕಳಿಲ್ಲದಿರೆ ಲಾಲಪ್ಯಮಾನನಾಗಿ ||
ಲವವಿಕೆಯಿಲ್ಲದಿರಲಾ ಋಷ್ಯಶೃಂಗ ಬಂ |
ದವಿರಳದಿ ಪುತ್ರಕಾಮೇಷ್ಟಿಯಂ ಮಾಡಿಸಲ್ |
ಕುವರರಪ್ಪರು ಮಹಾಋಷಿಯನುಗ್ರಹದಿಂದಲೆಂದೊರೆದ ಮುನಿತಿಲಕನು || (62)

ಕೇಳಿದರ್ಥವ ಮನದಿ ತಾಳ್ದಿರ್ದು ನಿನ್ನಪದ |
ದೂಳಿಗಂ ತಾನಾದ ಕತದಿ ಪೇಳಿದೆ ನೃಪರ |
ಮೌಳಿ ಲಾಲಿಸು ಚಿತ್ತದೊಳಗೆನ್ನ ಬಿನ್ನಪವ ಹಿತಕಾಮಿತಾರ್ಥಕೆಂದು ||
ಭಾಳನೇತ್ರೋಪಮದ್ವಿಜೋತ್ತಮನ ಕರೆತಂದೊ |
ಡಾಲಸ್ಯಮಿಲ್ಲದಪ್ಪರು ಕುಮಾರಕರೆನ್ನು | [ಮಾನ್ಯನು || (63)
ತಾಳುವೊಡೆಯಂಗರುಪಿ ಬೀಳ್ಕೊಂಡು ಮರಳಿದಂ ಹರುಷದಿಂದಾ

ಈಮುಹಾಮುನಿಯ ಚಾರಿತ್ರೆಯಂ ಮನದೊಳತಿ |
ಪ್ರೇಮದಿಂ ಬರೆದೋದಿ ಕೇಳುವರ ಪೇಳುವರ |
ಸೀ ಮಹಿಯೊಳಮಿತಸೌಖ್ಯವ ಪುತ್ರಸಂಪದವಸಿತ್ತು ಕೃಪೆಪೆತ್ತು ಭರದಿ ||
**ರಾಮಪುರಿ**ವಲ್ಲಭಂ ಕಾಯ್ವನೆಂಬರ್ಥಮಂ |
ಸೋಮಶೇಖರ ತನ್ನರಮಣಿಗುಸುರಿದನೆಂದು |
ನೇಮದಿಂ ಸೂತಮುನಿಯೊರೆದ ಭೂಸುರಸಭೆಗೆ ಸಂತೋಷಪೆರ್ಚುವಂತೆ || (64)

ಸಂಧಿ 6 ಕ್ಕಂ ಪದಂಗಳ್ 359

---

## ಏಳನೆಯ ಸಂಧಿ

ಸೂಚನೆ || ಗುರುವಸಿಷ್ಠರ ನೇಮದಲಿ ಋಷ್ಯಶೃಂಗನನು |
ಕರೆತಂದು ನಿಜನಗರಿಗಜನೃಪಾಲಾತ್ಮಜಂ |
ತುರಗಮೇಧಾಧ್ವರವ ಮಾಡಲುದ್ಯೋಗಿಸಿದ ಮಾಧವಾಗಮನದಲ್ಲಿ ||

ಗಿರಿರಾಜಸುತೆಯೆ ಕೇಳಾ ಸುಮಂತ್ರನ ವಾಣಿ |
ಗರಸ ಸಂತೋಷದಿಂ ಮರುದಿವಸ ಕರೆಸಿದಂ |
ತರಣಿಕುಲಗುರುವಸಿಷ್ಠರ ಬ್ರಹ್ಮನಿಷ್ಠರಂ ಬಳಿಕೆಂದನೀ ಪರಿಯನು ||
ದೊರೆಯ ನುಡಿಗೇಳುತಂ ಹರುಷದಿಂ ವಿಪ್ರೇಂದ್ರ |
ಕರೆತರಲ್ವೇಳ್ಕು ವೈಭಾಂಡಕನ ಮತ್ಪುರಕೆ |
ಧುರವಿಜಯ ನೀನೈದು ರೋಮಪಾದಾಖ್ಯನೃಪನಿರುವ ಪಟ್ಟಣಕೆ ನಯದಿ || (1)

ಎನುತ ಸಂತೋಷದಿಂ ಮುನಿಪನಪ್ಪಣೆಗೊಡಲ್ |
ಜನನಾಥ ಸೂತನಂ ಕರೆವುತಾಜ್ಞಾಪಿಸಿದ |
ನನುವಿನಿಂ ಚತುರಂಗವಾಹಿನೀಸನ್ನಾಹಗೊಳಿಸು ಭೇರಿಯನು ಪೊಡೆಸು ||
ಘನಪತಾಕವು ಸಮರಸನ್ನಾಹ ಗೂಡಾರ |
ವನು ಪುರಪ್ರಾಂತದಲಿ ರಚಿಸೆನಲ್ಜೀಯ ಲೇ |
ಸೆನುತ ನಡೆತಂದಮಾತ್ಯಾಧಿಪಂ ಸೇನಾಧಿಪರಿಗಿದಂ ನೇಮಿಸಿದನು || (2)

ಧೀಮಂತನೊರೆದ ಭಾಷೆಗೆ ಚಮೂನಾಥರುಂ |
ಪ್ರೇಮಂದಳೆದು ಬೇಗ ದುಂದುಭಿಯ ಮೊಳಗಿಸಲ್ |
ಸಾಮಂತನಾದಂಗಳುಚ್ಚತರನಾದದಿಂ ಭೋಯೆಂದು ಕೂಗುತಿರಲು |
ಸೋಮಮಂ ತದಾಚಿತ್ರದಂಬರವನುಳಿದ ಶ್ರೀ |
ಸೀಮಂತ ಸೀಮೆಯಲ್ಲಿಟ್ಟ ಮುತ್ತಿನ ಬೊಟ್ಟ |
ಕೋಮಂತ್ರಮೆಂದೆನುತಲೊಳಗಿಟ್ಟ ಕಮಲೇಶ ಕಂಪಿಸಲ್ಕಮರಾಪಗಾ (?) || (3)

ಪುರದ ಮುಂಗಡೆಯಲ್ಲಿ ತರತರದ ಪಟನಿಲಯು |
ವರರಚನೆಯಂಗೈದರೀ ವಾರ್ತೆಯಂ ಬೇಗ |
ಸುರರೆರೆಯನೆಡೆಗೈದಿ ಪೇಳ್ದು ಮಗುಳ್ಕೈತಪ್ಪೆನೆಂದು ಪುಷ್ಕರವನಡರೆ ||
ಸರಭಸದ ಪಟಪಟತ್ಕಾರದಗ್ರೋದೀತ |
ದುರುರವಗಳಂ ಕೇಳಿ ಬೆಗಡುಗೊಳಲಸುರತತಿ |
ಮೆರೆದುದಾ ಗಿಡುಸಿಂದ ನಡುಗಲಮರೀವೃಂದ ತುದಿಯ ಬಿರುಗಾಳಿಯಿಂದ || (4)

ತೆಗೆದುಟ್ಟ ಚಲ್ಲಣದ ಬಿಗಿದ ಕಾಸೆಗಳಿಂದ |
ಮೊಗಕಿಟ್ಟ ಭಸಿತಕುಂಕುಮಸಾದುಕಾಡಿಗೆಯೊ |
ಳೊಗುಮಿಗೆಯ ಮಸ್ತಕಗಳೋರೆಶಿಖೆಗಳನಾಂತು ಚಿತ್ರತರಮಾಲಿಕೆಗಳ ||
ಮಿಗೆ ವಿರಾಜಿಸುವೋರೆಪಾಗುಗಳಲಿಕ್ಕೆಲದಿ |
ಜಗುಳುತಿಹ ಕೇಶಗಳ ವೀರಭಟರತಿಜವದಿ |
ಬಿಗಿದ ಮುಂಡನಕರದಿ ಚಲಿಪ ತರವಾರಿಯಿಂದೈತಂದರವನಿ ಕುಸಿಯೆ || (5)

ಬತ್ತೀಸ ಶಸ್ತ್ರಗಳನೆತ್ತಿ ಕಡುವೊತ್ತರದಿ |
ಚಿತ್ತದುದ್ರೇಕಕರವೆತ್ತು ಕ್ರೋಧಗಳಿಂದ |
ಲೊತ್ತಿಬಹ ಕ್ರೂರತರ ವೀರವಾದಂಗಳಿಂದುಲಿವ ನಾದಂಗಳಿಂದೆ ||
ಸುತ್ತಲೆತ್ತೆತ್ತಲಿಂದೊತ್ತರಿಸುತೆಣ್ದೆಸೆಯ |
ಮುತ್ತಿಗೆಯನಿತ್ತಂತೆ ಮುಂಕೊಂಡು ಬಹ ಭಟರ |
ಮೊತ್ತಕರದಾಯುಧದಿ ಕತ್ತರಿಸಲರಿನೃಪರ ನೇತ್ರಕತಿಚಿತ್ರಮೆನಲು || (6)

ಆವರ್ತ ಸಂಭ್ರಮದ ಅತಿಶುಭೋತ್ಕರಫಲವ |
ನೀವ ಶುಕ್ತಿಗಳಿಂದೆ ವರದೇವಮಣಿಗಳಿಂ |
ದೋವಿದುರುರಂಧ್ರಭೋಗಗಳಿಂದಮಶ್ವಂಗಳತಿಜವದಿ ನೀರಧಿಯೊಲು ||
ರಾವಂಗಳುಲುಹಿನಿಂ ವಲಿಗಳುರುಗಮನದಿಂ |
ಭೂವಲಯ ಕಂಪಿಸಲ್ಪಾಕಶಾಸನನಶ್ವ |
ಠೀವಿಗತಿಶಯಮಪ್ಪ ವಾಹಂಗಳೈತಂದವಮಿತಪದಘಟ್ಟಣೆಗಳಿಂ || (7)

ಧಾರಾಸಮೃದ್ಧಿಯಿಂದೆಸೆವ ಘೋಟಕಗಳ-|
ನ್ನೇರಿ ನಿಜಕರಕಲಿತಕಶೆಗಳಿಂ ತಾಡಿಸಲ್ |
ಸೂರಿಯನ ರಥದಶ್ವಗಳ ನಿಲ್ಕುವಂದದಿಂ ಕುಪ್ಪಳಿಸುತಂಬರದಲಿ ||
ತೋರೆ ಭಯದಿಂ ನೆಲಕೆ ತಾರಕೆಗಳುರುಳುವಂ |
ತಾರಟ್ಟವದನದಿಂ ಜಾರುತಿಹ ಬೆಳ್ನೊರೆಯ |
ತೋರವನಿ ನಿಟ್ಟುಸಿರು ದಾರುಣರವಂಗಳಿಂದಾ ರಾಜಿ ರಾಜಿಸಿದುದು || (8)

ದಾನವೈಭವದಿಂದಲೈತಪ್ಪ ಮಾರ್ಗಣಂ |
ಸಾನುರಾಗದಿ ಸಮುಸಮಾನಮೆಂದೆಸಿಸಲ್ಕೆ |
ಸಾನುಚರರೆಡಬಲದೊಳೆಚ್ಚರಿಸುತೈತರಲ್ ಪದಕಟಕನಾದದಿಂದೆ ॥
ಮ್ಲಾನಮೆನಿಸಲ್ಕಹಿತಮುಖಪಂಕಜಂಗಳುಂ |
ಸಾನಂದಕರಮಪ್ಪ ಸಾರ್ವಭೌಮರ ಕುಲಸ |
ಮಾನಮತ್ತೇಭಂಗಳೈತಂದವೆಣ್ದೆಸೆಯ ದಿಕ್ಕರಿಯ ಧಿಕ್ಕರಿಪೊಲು ॥ (9)

ನೂರಂಚಿನಲಗಿನಿಂ ವಿದಾರಿಸಿದ ಪಕ್ಕಗಳ |
ಪಾರದಂತಾಯ್ತೆಂದು ಧಾರಿಣೀಧರಗಳೀ |
ಧಾರಿಣೀಶಗೆ ಪೇಳ್ವೊಡೈತಂದ ಭಂಗಿಯಂಗೀಕರಿಸಿ ರಂಗಿನಿಂದ ॥
ತೋರೆ ಮದಧಾರೆ ನಿರ್ಝರಪೂರಮೆಂಬಂತೆ |
ವಾರಣಗಳರಿ ನಿವಾರಣಗಳತುಲಿತವಿಜಯ |
ಕಾರಣಗಳೆನೆ ಬೆಡಗ ಬೀರಿದುವು ನೃಪಸದನದೆಡೆಯೊಳೈರಾವತದೊಲು ॥ (10)

ಉತ್ತಮಾಂಗದಿ ಧರಿಸುತುಡುಗಣವ ಹರನಂತೆ |
ಬಿತ್ತರದ ಚಕ್ರಧರನೇಮಿಯಿಂ ಹರಿಯಂತೆ |
ಮತ್ತೆ ಹಂಸಾಶ್ರಯಂ ವಾಣಿಯರಸನ ತೆರದೊಳಿಂದ್ರನೊಲ್ಬಲುಕಂಗಳಿಂ ॥
ಉತ್ತಮರ್ಗಂಧರ್ವಸೇಷ್ಯ ಧನಪತಿಯಂತೆ |
ಇತ್ತರದಲೈತಹ ಶತಾಂಗಸಂತತಿಗಳುರು |
ಮೊತ್ತವರಿಮೊತ್ತಕುಂ ಬಿತ್ತರಿಪವನುದಿನಂ ಮಸ್ತಕದ ಕಂಪನವನು ॥ (11)

ಚತುರಂಗಬಲಸಂಖ್ಯೆ ಚತುರತೆಯು ವರ್ಣಿಸಲ್ |
ಚತುರಾಸ್ಯನಿಂಗಳವೆ ಚತುರಬ್ಧಿಪರ್ಯಂತ |
ಚತುರದಿಕ್ಪತಿಗಳುಂ ಚಕಿತರಾಗಲ್ಕಂಡು ದಳಪತಿಗಳೈದಿ ಮುದದಿ ॥
ಪತಿಗೆ ಬಿನ್ನಪಗೈದು ನುತಿಸೆ ಲಾಲಿಸಿ ಪಯಣ |
ಗತಿಯಿಂದ ನೆನೆದು ಶ್ರೀಪತಿಯ ಪದಗಳನು ಭೂ |
ಪತಿಗಳರಸಂ ಪೊರಟ ವಿತತಗುಹೆಯಿಂ ಬಪ್ಪ ಮೃಗಪತಿಯ ಮಾಳ್ಕೆಯಿಂದೆ॥ (12)

ಮೊರೆಯೆ ನಾನಾವಿಧದ ವಾದ್ಯತತಿ ಘೀಂಕರಿಪ |
ಕರಿಗಳುರುಗೊಂದಣಂ ಹೂಂಕರಿಸಿ ಕುಪ್ಪಳಿಪ |
ತುರಗಗಳ ಸಂದಣಿಗಳಲ್ಲಲ್ಲಿ ಹೊಳಕೆಯಿಂ ವೀರವಾದಗಳಲೆಸೆವ ॥
ಚರರ ಪದಗತಿಗಳಾ ದುಂದುಭೀಭೀಂಕಾರ |
ಭರಕಳುಕಿ ನಮಿಸಲೈತಹ ರಾಜಮೌಳಿಗಳ |
ತೆರದೆ ಖಣಿಖಟಲೆಂಬ ನಾದ ಮಾಗಧರವದಿ ತುಂಬಿತೆಣ್ದೆಸೆ ರಭಸದಿ ॥ (13)

ಭೂನಾಥ ಪೊರಮಡಲ್ಕಾ ನಗರಜನನಿವಹ |
ಮಾನಿನಿಯರಾನಂದ ಪುಳಕದಿಂ ಕರುಮಾಡ |
ದಾ ನಿವೇಶಗಳಡರಿ ತಮತಮಗೆ ಚಿತ್ರಿಸಿಹ ಪುತ್ತಳಿಗಳೆಂಬಂದದಿ ॥
ನಾನಾಪ್ರಕಾರದಿಂದೀಕ್ಷಿಸುತ್ತಿರುತಿರ್ದ |
ರೇನೆಂಬೆ ಕಣ್ಗದಿರ ಮಾಲೆಗಳ್ಪಟುಭಟರ |
ಸೇನೆಯಂ ಪರಿವೇಷ್ಟಿಸೊಪ್ಪಿರ್ದವಗಲದೊಳ್ ಸಂರಭರಂಭಣದೊಳು ॥ (14)

ಗ್ರೈವೇಯ ಕುಂಡಲಂ ಮಣಿಮುಕುಟ ಭುಜಕೀರ್ತಿ |
ಲಾವಣ್ಯಕರವಲಯಮುಂಗಲೀಯಕಚಿತ್ರ |
ಪಾವನಾಂಬರಭೂಷಣಾದಿಗಳನಳವಡಿಸಿ ನರನಾಥನೈತರಲ್ಕೆ ॥
ಶೀವಿಯಿಂ ನಿಜಕೀರ್ತಿಗೆಣೆಯೆನಿಪ ಚಂದ್ರಮನ್ನು |
ಪಾವಗಿದು ಬದುಕಿದನೆನುತ್ತ ಕೋಪದಿ ಕಿಳ್ತು |
ಈ ವಸುಧೆಯಿಂದಲಂಬರಕಿಟ್ಟನೆಂಬಂತೆ ರಾಜಿಸಿತ್ತಾತಪತ್ರ ॥ (15)

ತನ್ನ ಧರ್ಮದ ಕನಕದಂಡವನ್ನಳವಡಿಸು |
ತುನ್ನತದ ಕೀರ್ತಿಮಯ ಶುಭ್ರಪಟದಾವರ್ತ |
ಮೆನ್ನಿಸಿ ಪ್ರತಾಪನಿರ್ಜಿತಸೂರ್ಯಬಿಂಬಮಂ ಮಕುಟದಲಿ ಕಲಶಮೆನಿಸಿ ॥
ನನ್ನಿಯಿಂ ಬೆಳ್ಗೊಡೆಯ ನೆಗಪಿ ವಾಲವ್ಯಜನ |
ಮುನ್ನುಭಯಪಾರ್ಶ್ವದಲಿ ಬೀಸುತಿರಲಮರಧುನಿ |
ಸನ್ನುತಿಸಲಂಬರದಿ ಕವಲೆನಿಸಿ ಬರ್ಪಳೆನಲಡಿಗಡಿಗೆ ಬೆಡಗೆನಿಸಿತು ॥ (16)

ಅಮರೇಂದ್ರನಂ ಪೊರೆದ ವಿಮಲಚಾರಿತ್ರೆಯಂ |
ತಮತಮಗೆ ಕೈವಾರಿಸಲ್ಕೆ ಮಾಗಧನಿಚಯ |
ಸಮುದರಿಪುಗಜಸಿಂಹ ಜೀಯಪಾಯವಧಾರುಯೆನೆ ಸಪ್ಪಿದಲ್ಲರುರುಬಿ ॥
ಕ್ರಮದಿಂ ಪರಾಕು ಸಲ್ಲಾಮೆನಲ್ಕಂಚುಕಿಗ |
ಳಮರೇಶನಂತೆ ಪುಷ್ಪಕದಿ ಮಂಡಿಸಲು ಭೂ |
ಸುಮನಸರು ಜಯ ವಿಜೀಭವ ದಿಗ್ವಿಜಯಿಯೆಂದು ಮಂತ್ರಾಕ್ಷತಂಗಳೆಸಗೆ ॥

ನಲಿವ ವಾರಸ್ತ್ರೀವಿಲಾಸದಿಂ ಹಾಸದಿಂ |
ದುಲಿವ ಮತ್ತೇಭಘೀಂಕಾರದಿಂ ತೋರದಿಂ |
ಕಲಿತ ಭೇರಿಗಳ ಭೋಂಕಾರದಿಂ ಘೋರದಿಂ ನೃಪಮೌಳಿಮಣಿರೋಚಿಯ ॥
ಪೊಳಪಾಂತು ಹರಿವ ಹರಿದಶ್ವಗಳ ಸಾಶ್ವಗಳ |
ಬಲುಜವದೊಳೈತಪ್ಪ ಸ್ಯಂದನದ ಗೊಂದಣದ |
ಕಳಕಳದಿ ದಶರಥಂ ನಡೆತರೆ ಮನೋರಥಂ ಸಿದ್ಧಿಸಲ್ಸಕಲಜನರ ॥ (18)

ಸೃಣಿಯ ಕರದಿಂ ಪಿಡಿದು ಸೃಣಿಯುಲಾ ಘೋರಣೆಯ |
ಗಣನೆಗೊಳ್ಳದೆ ಗಂಧಸಿಂಧುರಂ ಪಾರ್ಶ್ವದಲಿ |
ಘಣರೆನಲ್ ಗಂಟೆಗಳ್ ಮುಂಬರಿಯೆ ಮದಜಲದಿ ಧರಣಿ ಜಂಬಾಲಮೆನಿಸೆ ||
ಕುಣಿವುತಂ ಮೊಗನೆತ್ತಿ ಪಲ್ಗಳರೆಯುತ ನೊರೆಯ |
ನುಣಿಸುತಂ ಭೂತಳಕೆ ಪೊರೆಗಳಂ ಬೀಸಿಟ್ಟು |
ಬಣಗಾಟದಿಂ ಜನರ ನಗಿಪ ಉಷ್ಟ್ರಂಗಳುಂ ಪಾರುತಿಹ ಭೀಕರದಲಿ || (19)

ಬಲನಡೆದುದಂಬುಧಿಯ ಬಳಗಮೆನೆ ಪದಘಾತ |
ಕಳುಕೆ ಭೂತಳ ಮೇಲಕಡರ್ವ ಧೂಳೀಪಾಳಿ |
ಕಲಿತದಿಕ್ಪಟಲಂಗಳೆಲ್ಲ ಪೀತಾಂಬರವ ಸಿಂಗರಂಗೈದಂದದಿ ||
ಬೆಳಗೆ ಸುರತಟನಿಗುಂ ಸೇತುವೆಯ ಕಟ್ಟಿದೊಲ್ |
ಕೆಳೆಗೊಂಡಿತಂಬರಂ ಮಣಿಯೊಳೆನೆ ಗುಣದಿಂದ |
ನಳಿನಪೀಠಸಮಾನಮಾದುದಿನ್ನೇನೆಂಬೆ ವಾಹಿನೀವೈಭವವನು || (20)

ಅಪರಿಮಿತವೈಭವದೊಳಜಕುಮಾರಕನಂಗ |
ನೃಪತಿಯುಂ ಕಾಣ್ಬೆನೆಂಬುತ್ಸವದ ವೇಗದಿಂ |
ಪ್ರಪಗಳನು ನದಿನದಗಳುಪವನಂಗಳನೆಲ್ಲ ಕಳೆಕಳೆದು ಗಮನವಿಡಿದು ||
ವಿಪುಳಪಟ್ಟಣದೆಡೆಗೆ ನಡೆತಪ್ಪ ನುಡಿಯ ಭೂ |
ಮಿಪ ಕೇಳಿ ನಿಜಸೈನ್ಯದೊಡವೆರದು ಹರ್ಷದಿಂ |
ತಪನವಂಶೋತ್ತಮನನಿದಿರ್ಗೊಂಡು ಪೌರಜನ ಭೂಸುರೋತ್ತಮರುಸಹಿತ ||

ಪ್ರೀತಿಯಿಂ ಪರಿರಂಭಮೆಸಗಿ ನಿಜಚಿತ್ತಸಂ |
ಜಾತಕುತುಕದಿ ಕುಶಲಸನ್ಮಾನಗಳ ಕೇಳಿ |
ತಾತ ನೀನೈತಂದುದೆಮ್ಮ ಭಾಗ್ಯದ ಬೆಳೆಯು ಬೆಳಸಾದುದೀ ದಿನದಲಿ ||
ಭೂತಳಾಧಿಪ ಮಿತ್ರವಾಂಛಲ್ಯಯುತ ನೀನೆ |
ಭೂತಿಪ್ರದಾತನೆಂದೆನುತ ತನ್ನೃಪ ಮೃದುಳ |
ಮಾತಿನಿಂದುಪಚರಿಸುತೊಡಗೊಂಡು ಸಂಭ್ರಮದಿ ಮಂದಿರಕೆ ನಡೆತಂದನು || (22)

ವೀರರಗ್ರೇಸರಂ ಕಂಡು ಕಶ್ಯಪಸುತ ಕು |
ಮಾರನಂ ಶುಚಿಯ ಸುಕುಮಾರನಂ ಭವನದಲಿ |
ಚಾರುತರಮೃದುನುಡಿಗಳಿಂದೆ ಕೈವಾರಿಸುತ ಸಾಷ್ಟಾಂಗಮೆರಗಿ ನಯದಿ ||
ಪಾರುವಶಿರೋರನ್ನ ಪದಗಳೀಕ್ಷಿಸಲೆನ್ನ |
ಸಾರಿರ್ದ ಪಂಕತತಿ ಪಾರಿತಿನ್ನೆಡ್ದೆಸೆಗೆ |
ತೋರಿತಿಂದಿನ ದಿನಂ ಶುಭಬೆಳಸಿನಂಕೂರ ಧೀರ ಮನ್ಮಾನಸದಲಿ || (23)

ಅರಸನಾಡಿದ ನುಡಿಗೆ ಹರುಷದಿಂ ವಿಪ್ರೇಂದ್ರ |
ಪರಸಿ ರಾಜರ್ಷಿ ತವದರುಷನದಿ ಲೋಕಕುಂ |
ಕರೆದಪುದು ಶುಭಕರವ ಧಾರ್ಮಿಕರ ಮಕುಟಮಣಿಯಲ್ತೆ ಗಡ ನೀನೆ ಜಗದಿ ||
ಸುರಪತಿಯು ಸಲಹಿದ ಮಹಾವೀರನೃಪನೆ ಕು |
ಳ್ಳಿರವೇಳ್ಕುಮೆಂದನುಗ್ರಹದಿ ಋಷ್ಯಶೃಂಗ |
ನೊರೆಯೆ ದಶರಥರಾಜನಂಗನೃಪನೊಡನೆರೆದು ಮಂಡಿಸಿದ ಗದ್ದುಗೆಯಲಿ || (24)

ರೋಮಪಾದಮಹೀಶ ಪ್ರೇಮರಸತುಳ್ಕಾಡ |
ಲಾ ಮಹೀಪಾಲಂಗೆ ರಾಜೋಪಚಾರಗಳ |
ನೇಮದಿಂ ಮಾಡಿಸುತ ಮಜ್ಜನಂ ಭೋಜನಂ ತಾಂಬೂಲಪರಿಮಳಗಳ ||
ತಾಮರಸಸತ್ಕಟಕಮಕುಟಕುಂಡಲಗಳಂ |
ಕಾಮದುಘ ಕಮನೀಯಮಣಿಖಚಿತಪದಕಗಳ |
ರಾಮಣೀಯಕಹಾರಮುಖ್ಯಭೂಷಣಗಳನುಮಂಬರಗಳಿತ್ತು ನಯದಿ || (25)

ಇಂತು ನಾನಾವಿಧದೊಳಾ ಮಹೀಕಾಂತನ-|
ತ್ಯಂತದುಪಚಾರಂಗಳಿಂ ರೋಮಪಾದನೃಪ |
ಸಂತಸಂಗೊಳಿಸಲೇಳೆಂಟುದಿನಮಾ ನಗರದೊಳಗಿರ್ದು ಸೌಖ್ಯದಿಂದ ||
ಮುಂತಪ್ಪ ವೃತ್ತಾಂತಗಳನೊಂದು ದಿವಸಮೇ |
ಕಾಂತದೊಳ್ಬೆಸಗೊಂಡನಂಗಾಧಿನಾಥನಂ |
ಸ್ವಾಂತ ಪಲ್ಲವಿಸಂತೆ ಮೃದುಮಧುರವಾಣಿಯಿಂ ಕ್ಷೋಣೀಶನೀ ಪರಿಯೊಳು ||

ತಾತ ಲಾಲಿಪುದೆನ್ನ ಹೃದಯದಂತಸ್ಥಮಂ |
ಪ್ರೀತಿಯಿಂ ಸಲಹುವರೆ ತರಳರಿಲ್ಲದೆ ಮನಂ |
ಕಾತರಿಪುದದರಿಂದೆ ನಿನ್ನ ಸಂದರ್ಶನಕ್ಕೈತಂದ ಕತದೊಳೆನಗೆ ||
ಜಾತಮಾದುದು ಸುಖಂ ಬೀತುದತಿಚಿಂತೆ ಜಾ |
ನಾತನಂ ಮತ್ಪುರಿಗೆ ಕಳುಹವೇಳ್ಕುಂ ಮಹೀ |
ನಾಥ ದಯದಿಂದೊಲಿದು ಯಜ್ಞಾರ್ಥಪ್ರಸವಾರ್ಥಮೋಕ್ಷಾರ್ಥಕೋಸುಗದಲಿ ||

ಎನೆ ಸಂತಸಂದಳೆದು ಜನನಾಥ ರೋಮಪದ |
ನಿನಕುಲೋತ್ತಮನ ಪೂಜಿಸಿ ವಿಪ್ರಕುಲವರ್ಯ |
ಮುನಿಗೆಯಪ್ಪಣೆಗೊಟ್ಟು ಕಳುಪಿದಂ ಸರ್ವಜನ ಸಂತೋಷಕರಮೆನಿಪೊಲು ||
ವನಿತೆಯೊಡನಾ ಮೌನಿಯನುಸರಿಸಿ ಬರೆ ಪೌರ |
ಜನಸಹಿತಲಂಗನೃಪನೈತಂದು ದಶರಥನ |
ವಿನಯದಿಂದುಪಚರಿಸಿ ಬೀಳ್ಕೊಟ್ಟು ನಿಜನಗರಿಗೈತಂದನಿತ್ತಲರಸ || (28)

ಚಿತ್ತದಾಕಾಂಕ್ಷೆ ಕೈಸತ್ತಿತೆಂದರಿತು ಮುನಿ |
ಪೋತ್ತಮನ ಸತಿಸಹಿತ ಮಣಿರಥದಿ ಕುಳ್ಳಿರಿಸಿ |
ಮತ್ತೆಗಮನಾಭಿಮುಖರಾಗಿ ಬರುವೆಡೆಯಲ್ಲಿ ಚಾರರಂ ಕರೆದು ನೃಪತಿ ||
ಇತ್ತೆರನ ಮುತ್ಪುರಿಗೆ ಬಿತ್ತರದಿ ಪೇಳುವದು |
ಪತ್ತನವ ಶೃಂಗರಿಸುತುರುಪತಾಕೆಗಳೆತ್ತಿ |
ಕತ್ತುರಿಯ ಪನ್ನೀರ್ಗಳಂ ತಳಿದು ಬೀದಿಗಳಲಂಕರಿಸವೇಳ್ಕುಮೆನುತ || (29)

ಪೇಳಲಾಕ್ಷಣ ಚರರ್ ಕೈಮುಗಿದು ನೇಮಮಂ |
ತಾಳಿ ಮಕುಟಾಗ್ರದಲಿ ಪವನಗತಿಯಿಂದೈದಿ |
ಪೇಳಿದರ್ ನೃಪನೊರದ ಮಾಳ್ಕೆಯೊಳ್ ಸಾಮಂತಧೀಮಂತರಿಂಗೆ ಜವದಿ ||
ಕೇಳುತಲೆ ಹರುಷದೊಳಗಾಡಿ ಜನರೆಲ್ಲರಾ |
ಗಾಳಿದೊಡೆಯನ ಭಾಷೆಗನುಸಾರಮಾಗಿ ನಿಜ |
ಮಾಳಿಗಳ ನೊಲಿದೊಲಿದು ಪುರವ ಸಿಂಗರಗೈದರಮರೇಂದ್ರಪುರಿಗೆಣೆಯೆನೆ ||

ಧೂಪದೀಪಿತಮೆನಿಸೆ ರಾಜವೀಥಿಗಳಲ್ಲಿ |
ದೀಪಿತಪತಾಕಿಗಳ ಕಲಶಕನ್ನಡಿಗಳಂ |
ಗೋಪುರಗಳಲ್ಲಲ್ಲಿ ಪಜ್ಜಳಿಸಿ ಬೆಳಗಿದುವು ತಳಿರುತೋರಣಗಳಿಂದೆ ||
ಆ ಪುರವ ಪುರಜನರಲಂಕರಿಸಿ ಕರವಿಡಿದು |
ಭೂಪತಿಯ ದರ್ಶನಕ್ಕೈತಂದರಮರತತಿ | [ಮೊಳಗುತಿರಲು || (31)
ಗೋಪತಿಯನಿದಿರ್ಗೊಂಬ ಮಾಳ್ಕೆಯಿಂ ಬಹುವಿಧದ ವಾದ್ಯತತಿ

ಅನಿತರೊಳು ಮುನಿತಿಲಕ ಮುನಿಸಹಿತಲೈತರಲ್ |
ಘನವ ನಿಟ್ಟಿಸಿದ ಬರುಹಿಗಳಂತೆ ತಮುತಮಗೆ |
ಜನರು ನಲವೆತ್ತು ಜಯಜಯಮೆಂಬ ರವದಿಂದ ಮುಕುಳಿತಾಂಜಲಿಗಳೆನಿಸಿ ||
ವಿನಯದಿಂ ನಮಿಸುತಂ ಕಾಣಿಕೆಗಳೀವುತಂ |
ಮನದ ಹರುಷದಲುಬ್ಬಿ ನುತಿಗೈದ ಪೌರರಂ |
ಜನನಾಥ ಪ್ರೀತಿಯಿಂ ಮನ್ನಿಸುತಲೈತಂದ ನಿಜನಿಲಯದೆಡೆಗೆ ಮುದದಿ || (32)

ಪಾಡುವ ಪುರಂಧ್ರಿಯರ ಪಟುತರದ ಗಾನದಿಂ |
ಕೂಡಿ ನರ್ತಿಪ ಕಾಂತೆಯರ ಹಂಸಯಾನದಿಂ |
ಬೇಡುತಂ ನಿಜಮನೋರಥವ ಕೈವಾರಿಸುವ ಪಾಠಕಧ್ವಾನದಿಂದೆ ||
ನೋಡುತಿಹ ಪೌರಜನಕಲಕಲಾರಾವದಿಂ |
ರೂಢಿಗತಿಶಯಮೆನಲ್ ಸಂಭ್ರಮದಿ ನಿಜಗೃಹವ |
ನಾಡೊಡೆಯನೊಳಪೊಕ್ಕನಿಕ್ಕೆಲದಲಾರತಿನಿವಾಳಿಗಳ ಬೆಡಗಿನಿಂದೆ || (33)

ಕುವಲಯಾಧಿಪ ಸಿಂಹವಿಷ್ಟರದೊಳಾ ಮುನಿಯ |
ಯುವತಿಸಹ ಕುಳ್ಳಿರಿಸುತರ್ಘ್ಯಪಾದ್ಯಗಳಿತ್ತು |
ನವಕುಸುಮಗಂಧಮಾಲ್ಯಂಗಳನ್ನರ್ಪಿಸುತ ಭಕ್ತಿಯಿಂ ಪೂಜೆಗೈದು ||
ಲವಲವಿಕೆಯಿಂದಿಷ್ಟಸಿದ್ಧಿಯಾಯ್ತೆಂದರಿತು |
ಶಿವಸಮಾನದ ಋಷಿಯ ಬರವಿನಿಂ ಮಂಗಳಗ |
ಳವಿರಳದಿ ವಶವರ್ತಿಯಾದುದೆಂಬುತ್ಸವದೊಳಾನಂದಮಯನಾಗುತೆ || (34)

ಅಂತಃಪುರದೊಳಿರ್ಪ ಕಾಂತೆಯರ್ನಡೆತಂದು |
ಶಾಂತಾಪತಿಯ ಕಂಡು ಪೊಡಮಟ್ಟು ಸಂತೋಷ |
ದಿಂತು ಪೂಜಿಸಿದರಾ ದಂಪತಿಗಳನಪೂರ್ವದಂಪತಿಗಳೆಂಬ ಮನದಿ ||
ಸ್ವಾಂತದಾನಂದದಿಂ ಪಿಂತಿರುಗಲವರಿತ್ತ |
ಕಂತುವಿಗೆ ಸೀಮಂತ ಋತುಗಳಿಗೆ ಸಾಮಂತ |
ಕಾಂತಾಮನೋಕಾಂತ ಜಾಲಕಗಳ ನಿಶಾಂತ ಬೆಳಗಿದ ವಸಂತನೃಪತೀ || (35)

ಮಾಕಂದಗಂಧಗಳ ನಿದ್ರೆಯಳಿದಾಶೋಕ |
ಶಾಖಾಸಮೂಹಕ್ಕೆ ರಾಗರಸಮಂ ತುಂಬಿ |
ಕೋಕಿಲಾಂಗನೆಯರಿಗೆ ಬಾಯ ಬೀಗಂ ತೆಗೆಸಿ ನಗಿಸಿ ಮೇಣ್ಮಲ್ಲಿಗೆಗಳ ||
ಪ್ರಾಕಟಿಸಿ ತಂಬೆಲರ ತುಂಬಿಗಳ ಡೊಂಬಿಗಳ |
ಬೇಕಾದ ಸಂಪದವ ಕೈಗೈದು ಕಾದಲರ |
ನೀಕಮಂ ಕರೆದು ಬೇಕಾದಲರನೀವುತಂ ಮಾಧವಂ ಮೈದೋರ್ದನು || (36)

ಅರಿಯೆಂದು ಪಂಚಮದ ಸರವನುಂ ಧಿಕ್ಕರಿಸಿ |
ಭರದಿಂ ಲತಾಕಾಂತೆ ಹಿಂದೋಳಮಂ ಪಾಡೆ |
ಕರುಬುತ ರಸಾಲವೀರುಧಮಾನಿನೀಮಣಿಯುದಾರತಪದಿಂದಲೊಲಿಸಿ ||
ವರವಸಂತನ ಪರಭೃತಾಂಗನಾಗಾನದಿಂ |
ಪರಿದುದಕೆ ಸರಿಯಾಗಿ ಪಾಡಲಾಕೆಗೆ ಮೆಚ್ಚಿ |
ಕರುಣದಿಂ ಪ್ರವಾಳದ ತೊಡವುಗಳನಿತ್ತನೆನೆ ಕರಮೆಸೆದುದಾ ಸಮಯದಿ (?) || (37)

ಎಲ್ಲಿಯುಂ ಪಲ್ಲವದ ಚಲ್ಲಾಟವಿಭವ ಮ-|
ತ್ತೆಲ್ಲಿಯುಂ ಪರಪುಟ್ಟದಭಿವೃದ್ಧಿರಾಗ ಮಗು |
ಳೆಲ್ಲಿಯುಂ ಮಧುಪಾಯಿಗಳ ಮನೋರಥದೇಳ್ಗೆ ಜಾತಿವಿರಹಿತರಮೆಗಳ ||
ಇಲ್ಲಿ ಸುಳಿಯಲ್ಬಾರದೆಮಗೆ ಶಂಬರ ವೈರಿ |
ಯಲ್ಲಿ ದಾಕ್ಷಿಣ್ಯಬಾಹುಳ್ಯಮೆಂದವಮಾನ |
ದಲ್ಲಿ ಮಂದತೆಯಾಂತು ಸುಳಿವ ಮರುತಕಿಶೋರನಾ ವಸಂತಾಗಮದೊಳು ||

ಯಾಮಿನೀದಳಪತಿಗೆ ಕುಸುಮಮುದ್ರೆಯನಿತ್ತು |
ಪ್ರಾಮುಖ್ಯಪಿಕನಾಯಕರಿಗೆ ಚಿಗುರೆಲೆತೆತ್ತು |
ನೇಮಿಸುತ ಮಲಯಪವಮಾನಮಂತ್ರೀಶಗುಂ ಮನ್ನಿಸಿ ಪರಾಗತತಿಯ ॥
ತಾಮುಸವನುಳಿದು ಚರಿಸುವ ಭೃಂಗಭಟರಿಗಂ |
ದಾಮೋದಮಾರಂದಪಾನಕಪ್ಪಣೆಗೊಟ್ಟು |
ಸಾಮದಿಂ ಸಂಕಾಶಕಾಮನಿಗೆ ಗಿಳಿದೇರ ಕ(ಳು)ಳುಪಿದ ವಸಂತನೃಪತಿ ॥ (39)

ಕಲಕಂಠಕಂಠಕಹಳಾರವಂಗಳು ಮೊರೆಯೆ |
ಮಲಯಮಾರುತಮಂತ್ರಿ ಮುಂದಂಡಿನಲಿ ಮೆರೆಯೆ |
ಕಲಿಕಾಲಹೇತಿಗಳಲಂಕಾರಗೈದಾಗ ಕಾಮಿಗಳ ಕುಲವನಿರಿಯೆ ॥
ಗಿಳಿದೇರನಡರಿ ಮನ್ಮಥಭೂಪ ಮುಂಬರಿಯೆ |
ಲಲಿತಪಲ್ಲವಕರದಿ ಚೈತ್ರನುಂ ಬಾಗರೆಯೆ | [ವರಿಯೆ ॥ (40)
ಲಲನೆಯರ ಪ್ರಣಯಕರ ಮರಿದುಂಬಿಗಳು ಮೊರೆಯೆ ಸಂತೋಷ ಕೋಡಿ

ಮಲ್ಲಿಕಾಮಧುಪಾನಮತ್ತಗುಂಜದ್ಭ್ರಮರ |
ಪಲ್ಲವಾಧರೆಯರತಿಕಮನೀಯಕಾಕಲೀ |
ಯುಲ್ಲಾಸಗಾನದಿಂ ಗೋಚರಿಸಲನಿತರೊಳ್ ಪೊಳಪನೊಳ್ಕೆಯ್ಯೊಳಾಂತ ॥
ವಲ್ಲೀವಧುಗಳಲ್ಲಿ ನಟಿಸುತಿರೆ ದಕ್ಷಿಣದಿ |
ಗುಲ್ಲಸಿತಮರುತಸುಪ್ರೇರಣೆಯೊಳವಸರದೊ |
ಳಲ್ಲೀ ವನಪ್ರಿಯಾಂಗನೆಯರನುಮೋದದಿಂ ಪೊಗಳುತಿರೆ ನರನಾಥನ ॥ (41)

ತಳಿರ್ಗಾವಿದುಗುಲಮಂ ತಾಳ್ದು ವನಲಕ್ಷ್ಮಿಯುಂ |
ಗಿಳಿನುಡಿಯ ಲಲ್ಲೆಗಳ ತೋರ್ಪಡಿಸುತೊಮ್ಮೊಮ್ಮೆ |
ಕಳಕಂಠಗಾನದಿಂ ಕುಡಿಗೊಳಿಸಿ ಮೋಹಿಸುತೆ ಜನಗಳಂ ಮುಡಿದಲರ್ಗಳ ॥
ಲಲಿತಕಂಪನು ಬೀರುತಾ ನವಿಲ್ಮುಡಿಭಾರ |
ದೊಲಪಿನಿಂ ತಿಲಕಮಂ ಮಿಂಚಿಸುತೆ ಹಂಸಗತಿ |
ಚಲನೆಯೊಳ್ಸವಸಂತಮಾಧವನ ತೋಳ್ತೊಡೆಯೊಳೊಪ್ಪಿರ್ದಳುತ್ಸವದೊಳು ॥

ಹರುಷದಿ ಮರೀಚಿಕಾಹಯವನುಂ ಹಲ್ಲಣಿಸಿ |
ವರವಸಂತನು ಬೀದಿದೆಗೆಯಲ್ಕೆ ಮೃಗನಿವಹ |
ಮರುಳಾಗಿ ತೃಷ್ಣೆಯಿಂ ಜಲಮೆಂದು ತಮತಮಗೆ ಮುಂಬರಿಯೆ ಬಯಲಾಗಲು ॥
ನೆರೆದರಿದ್ರನ ಮನದ ತೋರ್ಕೆಯಂತಾದುದೆಂ |
ದರಳರಳಿ ನಾಸಾಗ್ರ ದೆಸೆದೆಸೆಗಳೀಕ್ಷಿಸುತೆ |
ತರಣಿಸಾಯುಜ್ಯಮಂ ಪಡೆದಂತೆ ಛಾಯಾನುಕೂಲದಿಂದೊಪ್ಪಿರ್ದವು ॥ (43)

ವರವಸಂತಾಗಮುವ ಭರದೊಳೀಕ್ಷಿಸಿ ನೃಪತಿ ।
ಕರೆಸುತ ಸುಮಂತ್ರಕಂಗೊರೆದ ಬೇಗದಿ ಪೋಗಿ ।
ಗುರುವಸಿಷ್ಠರ ವಾಮದೇವಜಾಬಾಲಿಯರ ಕಾಶ್ಯಪಪ್ರಮುಖದ್ವಿಜರ ॥
ಕರೆತರುವುದೆನೆ ಭೂಪಗೆರಗಿ ಬೀಳ್ಕೊಂಡೈದಿ ।
ವರತಪೋಧನರೆಡೆಯ ಬಿನ್ನೈಸಿ ವಾರ್ತೆಯಂ ।
ತ್ವರಿತದಿಂದೊಡಗೊಂಡು ಬಂದನಾ ಸೂತ ವಿಖ್ಯಾತವಿಪ್ರೋತ್ತಮರನು ॥ (44)

ಮುನಿಗಳೈತರೆ ಕಂಡು ಜನನಾಥ ಸಾಷ್ಟಾಂಗ ।
ವನು ಗೈದು ನಿಜಮನೋರಥವನಾಜ್ಞಾಪಿಸಿದ ।
ಘನತರಾಧ್ವರವ(ನೆ)ಸಗುವೆನೆಂದು ಚಿತ್ತದೊಳಗೆಣಿಸಿರ್ಪ ಮುದ್ವಚನವ ॥
ಮನವೊಲಿದು ಧ್ಯಾನಿಸುತ ಮುಮತೆಯಿಂ ಕೃತಕೃತ್ಯ ।
ನೆನಿಸವೇಳ್ಕೆಂದೆನಲು ಸಂತೋಷಯುತರಾಗಿ ।
ವಿನಯದಿಂದಿಂತೆಂದರಾ ಬ್ರಾಹ್ಮಣೋತ್ತಮರು ರಾಜನ್ಯಮುಕುಟಮಣಿಗೆ ॥ (45)

ಮಧುಮಾಸ ಬಂದಿರುವುದಿದು ಯಾಗಮನ್ನೆಸಗೆ ।
ವಿದಿತಕಾಲವು ವೇದವಿದಿತರಿಂದುಕ್ತಮಿದು ।
ಸದಯ ಕೇಳ್ ಮುಖಕೆ ಬೇಕಾದ ವಸ್ತುಗಳೆಲ್ಲ ಸಂಗ್ರಹಿಸಿಕೊಂಡು ಬಳಿಕ ॥
ಮುದದಿಂದ ಯಾಗಶಾಲೆಗೆ ನಡೆಯವೇಳ್ಕುಮೆನೆ ।
ಹೃದಯದಾನಂದದಿಂ ಭೂಸುರೋತ್ತಮರ ಸಿರಿ ।
ಪದಗಳ್ಗೆ ವಂದಿಸುತ ನೇಮಿಸಿದನಾ ಸುಮಂತ್ರಾದಿಗಳಿಗೀ ವಿಧವನು ॥ (46)

ವಾಮದೇವಾದಿವಿಪ್ರಸ್ತೋಮದೊಡವೆರದು ।
ಪ್ರೇಮದಿಂ ಗುರುವಸಿಷ್ಠರು ಋಷ್ಯಶೃಂಗರಿಂ ।
ದಾ ಮಹಾರಾಜದಶರಥ ತನ್ನ ಪತ್ನಿಯರನೊಡಗೊಂಡು ವೇಗದಿಂದೆ ॥
ಶ್ರೀಮತ್ಪ್ರದಾಯಿಸರಯೂನದೀತಟದಲ್ಲಿ ।
ನೇಮದಿಂ ವಿರಚಿಸಿದ ಯಜ್ಞಶಾಲೆಗೆ ಬಂದು ।
ತಾಮರಸಸಖವಂಶವರ್ಧನಂ ದೀಕ್ಷೆಯಂ ತಾಳ್ದ ವಿಪ್ರಾನುಮತದಿ ॥ (47)

ಶ್ರುತಿಯೊಂದು ನೀಲಮುಳಿದಂಗಮೆಲ್ಲಂ ಶುಭ್ರ ।
ಮತಿಮನೋಹರಪೀತಪುಚ್ಛ ಮಂಜುಳತರದ ।
ಗತಿಸರ್ವಲಕ್ಷಣೋಪೇತಮೆಂದೆನಿಪಶ್ವಮಂ ತರಿಸಿ ಬಳಿಕ ಮುಖಕೆ ॥
ಕ್ಷಿತಿಯರಸನಮಿತ ಬಿರುದಾವಳಿಗಳಂ ಲಿಖಿಸಿ ।
ವಿತತ ಸೌವರ್ಣಪಟ್ಟವನಲಂಕೃತಿಗೈದು ।
ಮತಿಶಯದ ಚತುರಂಗಬಲವ ತದ್ರಕ್ಷಣೆಗೆ ನೇಮಿಸಿದನವನೀಶನು ॥ (48)

ಒಂದು ವತ್ಸರ ಭೂತಳಪ್ರದಕ್ಷಿಣೆಗೈದು ।
ಕುಂದೆನಿಸದಖಿಳಭೂಭುಜರೆಲ್ಲರಂ ಜಯಿಸಿ ।
ತಂದವಪುದು ಧನರತ್ನರಾಶಿಗಳ ಮಧುಮಾಸದಾಗಮನದವಸರಕ್ಕೆ ॥
ಎಂದೆನುತ ನೇಮಿಸಿ ಸುಮಂತ್ರನಂ ಕಳುಪೆ ಮುನಿ ।
ವೃಂದಮಂ ಪೂಜಿಸುತ ವಿಧ್ಯುಕ್ತವಾಗಿ ಸಂ ।
ಕ್ರಂದನವಯಸ್ಯನಿರುತಿರ್ದ ದೀಕ್ಷಿತನೆನಿಸಿ ನಿಜಪರಿಗ್ರಹಗಳೊಡನೆ ॥ (49)

ಆರಾರ ಮನದಿಷ್ಟವಾವುದಿದಿರ್ದೊಡದೆಲ್ಲ ।
ಪೂರಣಂಗೈವುತ್ತಲಗ್ನಿಶುಶ್ರೂಷೆಯಂ ।
ಧಾರುಣೀಸುರಮತದೊಳನುದಿನಂ ಚರಿಸುತ್ತ ರಾಜಋುಷಿತೇಜದಿಂದ ॥
ಶ್ರೀರಾಮಪುರದರಸನಂಘ್ರಿಸಾರಸಗಳಂ ।
ಚಾರುತರಕುಸುಮದಿಂದರ್ಚಿಸುತ ಸೌಖ್ಯದಿಂ ।
ಧಾರಿಣೀಧವನೊಪ್ಪಿದಂ ಪಾಕಶಾಸನಂಗೆಣೆಯೆನಿಪ ವಿಭವದಿಂದ ॥ (50)

ಸಂಧಿ 7ಕ್ಕಂ ಪದ 409

---

## ಎಂಟನೆಯ ಸಂಧಿ

ಸೂಚನೆ ॥ ಸುರರೆಲ್ಲ ಸಂತೋಷಕರದಿ ಪೂಮಳೆಯನುಂ ।
ಕರೆಯಲವನೀನಾಥ ಗುರುವಸಿಷ್ಠರ ಮತದಿ ।
ತುರಗಮೇಧಾಧ್ವರವ ಪುತ್ರಕಾಮೇಷ್ಠಿಯಂ ರಚಿಸಿದಂ ಸಂತಸದೊಳು॥

ತುಹಿನಾದ್ರಿಜಾತೆ ಕೇಳಾ ಮಹಾಧ್ವರವಾಜಿ ।
ವಹಿಲದಿಂ ಚತುರಬ್ಧಿ ಪರ್ಯಂತಮಾಗುಳ್ಳ ।
ಮಹಿಯನೆಲ್ಲವ ಬಳಸಿ ಮರಳಿತಬ್ಧವು ಪೂರ್ಣಮೆನಿಪ ದಿವಸಕ್ಕೆ ಜವದಿ ॥
ಅಹಿತರೆಲ್ಲರ ಗೆಲ್ದು ಬಹುತರದ ಧನರತ್ನ ।
ವಹಮೆನಿಪ ಗಜನಿವಹ ಭೂಷಣಾಂಬರಗಳುಂ ।
ಸಹಿತಾ ಸುಮಂತ್ರನೈತಂದು ಕಾಣಿಕೆಗೊಟ್ಟು ಕೈಮುಗಿದನವನೀಶಗೆ ॥ (1)

ಸಾಮದಿಂದಲಿ ಸಕಲಸಾಮಂತರೈತರಲ್ ।
ಭೂಮೀಶ ನೋಡಿ ಹರುಷವ ತಾಳುತಡಿಗಡಿಗೆ ।
ಪ್ರೇಮದಿಂದಾ ವಸಿಷ್ಠರೊಳೆಂದ ವಿಪ್ರೇಂದ್ರನೀ ಮಹಾಕ್ರತುರಚನೆಗೆ ॥
ನೇಮಿಸಿದ ವಸ್ತುಗಳು ನಿಖಿಲವೊಂದುಳಿಯದೋ ।
ಲೀ ಮಹಾಧ್ವರಶಾಲೆಯಲ್ಲಿ ಸಂಗ್ರಹಮಾಯ್ತು ।
ತಾಮಸವದೇಕಿನ್ನು ಸಪ್ತತಂತುವನೆಸಗಿ ಕೃತಕೃತ್ಯನಂ ಮಾಳ್ಪುದು ॥ (2)

ಅರಸನಾಡಿದ ನುಡಿಯ ಲಾಲಿಸಿ ವಸಿಷ್ಠಮುನಿ ।
ವರಋಷ್ಯಶೃಂಗಂಗೆ ಬ್ರಹ್ಮತ್ವ ವಾಮದೇ ।
ವರಿಗೆ ಕಾಶ್ಯಪರಿಂಗೆ ಹೋತೃತ್ವಪ್ರೋಕ್ತೃತ್ವ ಜಾಬಾಲಿಗಗ್ನೀಧ್ರವ ॥
ಭರದಿಂ ಪ್ರತಿಸ್ಥಾಡವೌದ್ಗಾತ್ರ ಮುನ್ನೇತ ।
ನಿರತಲಷ್ಟಾವಾಕ ನೇಷ್ಟಿಗ್ರಾವಸ್ತುತಂ ।
ಪರಿಕಿಸೆ ಪ್ರತಿಸ್ತೋತ್ರ ಮೊದಲಾದ ಸ್ಥಾನಗಳಿಗುಳಿದ ವಿಪ್ರರ ನೇಮಿಸಿ ॥ (3)

ಅತಿಶಯಾಧ್ವರ್ಯುಕ್ಕೆ ತಾನಾಗಿ ಮುನಿರಾಯ ।
ಜತೆಗೂಡಿ ಕೂರ್ಚ ಕೃಷ್ಣಾಜಿನಂ ಶಮ್ಯಮಂ । [ಸ್ರುಕ್ತ್ರತಿಗಳ ॥
ಕತಿಪಯ ಕಪಾಲಗಳ ಮುಸುಲಮುಪಭೃತಸ್ರುವಂ ಜುಹುಧ್ರುವಂ
ವಿತತವೇದಾಗ್ರಗಳ ವೇದಪೂಜಾಸ್ಥಾಲಿ ।
ಪಥಿತಪಾತ್ರೆಗಳಿಡಾಪಾತ್ರೆ ಶಾಖಾಫಲಿತ ।
ನುತವಸಾಹೋಮಹವಣಿಗಳಾದಿವಸ್ತುಗಳ ತರಿಸಿದಂ ಯಜ್ಞವಿಧಿಗೆ ॥ (4)

ತ್ವರಿತದಿಂ ವಿಪ್ರೇಂದ್ರನಾಗ ಋತ್ವಿಜರನುಂ ।
ತರತರದಿ ಕುಳ್ಳಿರಿಸಿ ನಿಜನಿಜಸ್ಥಾನಗಳ ।
ಲರಸನೊಡನಿಂತೆಂದನೀ ಮಹಾಧ್ವರವಂ ಯಥಾವಿಧಿಯಲನುಗೈದರೆ ॥
ಬರುವದತುಲಿತಕೀರ್ತಿ ಸರ್ವದೇವಾತ್ಮಕಂ ।
ಕರುಣದಿಂ ಪಾಲಿಪನಭೀಷ್ಟಗಳನೆಂದೆನುತ ।
ಲೊರೆದು ಶಾಸ್ತ್ರೋಕ್ತದಿಂದಾ ಸಪ್ತತಂತುವಂ ಮಾಡಲುದ್ಯೋಗಿಸಿದನು ॥ (5)

ಮೊದಲೊಳ್ ಪ್ರವರ್ಗ್ಯಮಂ ಶಾಸ್ತ್ರವಿಧಿಯಿಂದೋಪ ।
ಸದಮಂ ಯಥಾಕರ್ಮ ವಿಧ್ಯುಕ್ತಮಾಗಿರ್ಪ ।
ದಧಿಕನ್ಯೂನತೆಗಳಿಲ್ಲದ ತೆರದಿ ಮಾಡಿದರ್ ಭೂಸುರೋತ್ತಮರು ನಯದಿ ॥
ಮುದದಿ ಪ್ರಾತಃಸವನಮುಖ್ಯಕರ್ಮಂಗಳನು ।
ಚದುರತನದಿಂದ ಮಾಧ್ಯಂದಿನದ ಸವನವನು ।
ಪದುಳದಿಂ ತೃತೀಯಸವನಂಗಳನು ಮಾಡಿದರು ಕಾಲವಿಧಿಪೂರ್ವಕದಲಿ ॥ (6)

ನರಪತಿಗೆ ಸುಕ್ಷೇಮಕರಮಾಗಿ ಯಾಗಮಂ ।
ಪರಮಋಷಿವರರೆಲ್ಲ ಮಾಡಿದರು ಬೇಕಾದ ।
ಪರಿಕರವ ಸಂಗ್ರಹಿಸಿ ಮಂತ್ರತಂತ್ರಕ್ರಿಯಾಲೋಪಂಗಳುದಿಸದಂತೆ ॥
ವರಮಹಾಧ್ವರದಲ್ಲಿ ಬಳಲಿ ಪಸಿದವರಿಲ್ಲ ।
ಭರದಿಂದ ಯಾಚಿಸುವ ವಿಪ್ರಜನ ಮುನ್ನಿಲ್ಲ ।
ಪರಮಸಂತೋಷದಿಂದಿರ್ಪರಭಿಮತಸಿದ್ಧಿಗಳನಾಂತದೇನೆಂಬೆನು ॥ (7)

ಎಲ್ಲಿ ನೋಡಿದರು ದಿವ್ಯಾನ್ನಮಂ ನೀಡುತಿಹ |
ರೆಲ್ಲೀಕ್ಷಿಸಿದರಂಬರಂಗಳಂ ಕೊಡುತಿಹರು |
ಎಲ್ಲಿ ನಿಟ್ಟಿಸಿದರಾಭರಣಂಗಳಂ ಗಂಧಮಾಲ್ಯಗಳನೀಯುತಿಹರು ||
ಎಲ್ಲಿ ನೋಡಿದರು ಕೊಡುತಿರ್ಪರಲ್ಲದೆ ಕೇಳ್ವ |
ರಿಲ್ಲವಾ ಭೂಪತಿಯ ಯಾಗಸಮಯದಿ ವಿಪ್ರ |
ರಲ್ಲಿ ಸಂತುಷ್ಟರೆಂದೆನಿಸಿರ್ಪರಾ ಮಹಿಮೆಯೆಂತುಟೊವದಾನ್ಯಘನಕೆ || (8)

ಯತಿಗಳಂ ಯಾಜ್ಞಿಕರ ವಾಜಪೇಯರ ಬಾಲ |
ತತಿಯೌವನಸ್ಥರಂ ವೃದ್ಧರ ಸುವಾಸಿನಿಯ |
ರತಿರೋಗಿಗಳ ಭೋಗಿಕುಲವನಾಥರ ಬೀಡ ನಾಥವಂತರ ಸಮುದಯ ||
ಸತತತೋಷಣೆಗೊಳಿಸುತವರವರ ಚಿತ್ತದಭಿ |
ಮತಗಳನ್ನರಿತರಿತು ಬೇಕಾದವಸ್ತುಸಂ |
ತತಿಗಳನ್ನೀವುತ್ತಲಾರೈದುಕೊಳುತಿಹರವಾತ್ಯಜನಮೊಂದೆಸೆಯೊಳು || (9)

ಪರರಾಷ್ಟ್ರದಿಂ ಬಂದ ದೊರೆಗಳ ಮನೋಭಾವ |
ವರಿತೋರೆಪೋರೆ ಸಂಜನಿಸದಂತುಪಚಾ |
ವೆರಸಿ ಭಟ್ಟಕವೀಂದ್ರಪಾಠಕಾದ್ಯರಿಗೊಲಿದು ಕೇಳಿದುದನಿತ್ತು ಸಲಹಿ ||
ಕರೆದನ್ನಪಾನಾಂಶುಕಾದಿಮಾಲ್ಯಂಗಳಂ |
ಸುರುಚಿರದ ತಾಂಬೂಲ ಸತ್ಕಾರದಿಂದಲುಪ |
ಚರಿಸಿ ಕರಿತುರಗಮೊದಲಾದ ಜಂತುಗಳಿಂಗೆ ತೃಪ್ತಿಕರಮೆಂದೆನಿಸುತೆ || (10)

ಶರದಭ್ರನಿಚಯದಂತಂಬರದ ರಾಶಿಗಳ್ |
ತರತರದಲನ್ನರಾಶಿಗಳು ಮಂದರಗಳೆನ |
ಲುರುತರದ ಧನರಾಶಿಗಳು ಮೇರುಗಿರಿಗಳೆನೆ ಕರಿತುರಗಗೋಸಮೂಹ ||
ಶರನಿಧಿಯೊಲೆಸೆದಿರ್ದವೇನೆಂಬೆನಧ್ವರದ |
ಪರಿಯನಭಿವರ್ಣಿಸಲ್ಕಳವೆ ಚತುರಾಸ್ಯಗುಂ |
ಸುರಪಸಖದಶರಥಂ ರಾಜಿಸಿದ ಸಗರರಘುರಾಯರಿಂಗತಿಶಯಮೆನೆ || (11)

ಸ್ವಾದುತರದನ್ನಭೋಜನದಿಂದ ಸಂತುಷ್ಟ |
ರಾದ ಭೂಸುರರೆಲ್ಲ ಪೊಗಳಿದರ್ನರಪತಿಯ |
ಮೇದಿನೀಪಾಕಶಾಸನನಲ್ಲದೆಣೆಯುಂಟೆ ರಾಜನ್ಯಗೋತ್ರದೊಳಗೆ ||
ಪೋದುದೆಲ್ಲಾ ಜನಕೆ ಬಡತನಂ ಸೌಖ್ಯಕರ |
ಮಾದುದೈಸಲೆ ಪೂರ್ವದರಸುಗಳ್ ಮಗುಳಶ್ವ |
ಮೇಧಗಳನೆಸಗಿದರನೇಕವಿಧದಿಂದಿದಕೆ ಪಾಸಟಿಯ ಕಾಣೆವೆನುತ || (12)

ಎಲ್ಲರುಂ ಷಟ್ಶಾಸ್ತ್ರವೇತರ್ ಪುರಾಣಗಳ |
ಬಲ್ಲವರ್ವೇದವೇದಾಂತಪಾರಂಗತರ್ |
ಸಲ್ಲಲಿತವಾಗ್ಮಿಗಳ್ ಸತ್ಕಲಾಕೌಶಲರ್ ಶುಚಿಗಳುಂ ಶಾಂತಿಯುತರು ॥
ಎಲ್ಲರುಂ ಸರ್ವಜ್ಞರೆನಿಪರಾ ಭೂದೇವ |
ರಲ್ಲಿ ಕಿಂಚಿಜ್ಞರುಂ ಜಡರಲ್ಪಮತಿವಂತ |
ರಿಲ್ಲೆನಿಸಿ ರಾಜಿಸುವರೇನೆಂಬೆನಾ ಸಭೆಯು ಸುರರ ಸಭೆಗಿಮ್ಮಡಿಯೆನೆ ॥ (13)

ದಣಿಯೆ ಭೂಸುರರನ್ನಪಾನದಿಂ ದಾನದಿಂ ।
ಮಣಿಯೆ ಕವಿಜನ ಮಣಿವಿತಾನದಿಂ ಮಾನದಿಂ |
ಭಣಿತಿಗಳ ಮೃದುಮಧುರಗಾನಸನ್ಮಾನದಿಂ ಭೂಭುಜರ್ ಸಂಭ್ರಮಿಸಲು ॥
ಎಣೆಯಪ್ಪನೆಂತಾ ದಿಲೀಪನುಂ ಶ್ರೀಪತೀ |
ಗುಣನಿಲಯನಹ ದಶಸ್ಯಂದನಗೆ ನಂದನರ |
ಮಣಿಗಳುದಿಸುವರತುಲಚತುರಚತುರಾಸ್ಯರೆಂದುಲಿಯುತಿರೆ ಜಾನಪದರು॥ (14)

ಕೊಡಹಿ ಪುಸ್ತಕಗಳಂ ಪೊಡೆದು ಕರತಳಗಳಂ |
ದೊಡಗೂಡಿ ಪೆರ್ವೆರಲನಾಮಿಕಂಗಳ ಮೇಲೆ |
ಮಿಡುಕುತಿರೆ ತರ್ಜನೀಮಧ್ಯಮಂಗಳು ಏಕಮೇವಮೇವಾಸ್ತ್ಯೆನುತಲಿ ॥
ಕಡುತೀಕ್ಷ್ಣನುಡಿಗಳಿಂದಡಿಗಡಿಗೆ ಕಕ್ಷಿಗಳ |
ನಿಡುತೊರ್ವರೊರ್ವರಂ ಜಯಿಸುವಭಿಲಾಷೆಯಿಂ |
ತುಡುಕಿ ವಾದಂಗಳನ್ನಲ್ಲಲ್ಲಿ ತಾರ್ಕಿಕಶಿಖಾಮಣಿಗಳೆಸೆದಿರ್ದರು ॥ (15)

ವಾಜಿಮೇಧಾಧ್ವರ ವಿರಾಜಿಸಲು ಭೂಸುರಸ |
ಮಾಜಮೋದನ ಸ್ವರ್ಣಭೂಷಣಾಂಬರರತ್ನ |
ರಾಜಿಯಿಂ ಸಂಪೂರ್ಣಕಾಮರೆಂದೆನಿಸುತಂ ಮುದದಿ ರಾಜನ್ಯವರನ ॥
ಈ ಜಗತ್ರಯದೊಳುಂ ನೀಂ ಧನ್ಯ ಮಾನ್ಯ ದಿನ |
ರಾಜನಂದದಲಕಲ್ಮಷನಾದೆಯೆನುತ ಬುಧ |
ರೋಜೆಯೊಳ್ ಹರ್ಷದಿಂ ಪರಸಿ ಮಂತ್ರಾಕ್ಷತೆಯನಿತ್ತು ಸನ್ನುತಿಗೈದರು ॥ (16)

ನೆರೆದ ಭೂಸುರಮಧ್ಯದೊಳು ಋಷ್ಯಶೃಂಗನೊ-|
ಪ್ಪಿರಲರಸ ಬೆಸಗೊಂಡನೆಲೆ ತಪೋಧನ ನಿನ್ನ |
ಚರಣಸೇವಾರ್ಥದಿ ಕುಮಾರರಪ್ಪಂತೆನಗೆ ದಯೆಗೆಯ್ಯುವೇಳ್ಕುಮೆನುತ ॥
ಅರಸನಾಡಿದರೆ ಮುನಿವರನೆಂದನೆಲೆ ರಾಯ |
ಪರಮಪುರುಷರು ಲೋಕಪಾಲಸಮವಿಕ್ರಮರು |
ಧರೆಯ ಗೋಬ್ರಾಹ್ಮರನು ಪೊರೆಯಲುದ್ಭವಿಸುವರು ನಾಲ್ವರರ್ಭಕರು ನಿನಗೆ ॥

ಎನುತೊರೆದು ವೈಭಾಂಡಕನು ವಸಿಷ್ಠಾದಿಮುನಿ ।
ಜನರ ಮುಂಗಡೆಯಲಿಂತೆಂದ * ಸುತರತ್ನಗಳು ।
ಜನಿಸಲೋಸುಗ ಪುತ್ರಕಾಮೇಷ್ಟಿಯಂ ಮಾಳ್ಪೆನಾನಥರ್ವಣಮಕುಟದಿ ॥
ಘನತರದಲುಕ್ತಮಂತ್ರಗಳಿಂದ ಭೂದಿವಿಜ ।
ರನುಮತಿಯನೀಯವೇಳ್ಕೆನೆ ತಪೋಧನರೆಲ್ಲ ।
ಸನುಮತಿಸುತಾನಂದಮಯರಾಗುತಪ್ಪಣೆಯನಿತ್ತರಾ ಯತಿವರ್ಯಗೆ ॥ (18)

ಭೂಸುರೋತ್ತಮರ ನೇಮದಿ ಋಷ್ಯಶೃಂಗಂ ದಿ ।
ನೇಶಕುಲವೃದ್ಧಿಕರ ಪುತ್ರಕಾಮೇಷ್ಟಿಯಂ ।
ಲೇಸೆನಲ್ ಮಾಡಿದ ಹವಿರ್ಭಾಗಸೇವನೆಗೆ ತೋಷದಿಂ ಸಕಲಸುರರು ॥
ವಾಸವಪ್ರಮುಖರೈತಂದು ಮಖಶಾಲೆಯೊಳ ।
ಗಾ ಸರಸಿಜಾಸನನ ಕಂಡು ವಂದನೆಗೈದು ।
ಭಾಸುರದ ಭಣಿತೆಯಿಂ ನುತಿಗೈದು ಬಿನ್ನಪಂಗೈದರಿಂತೆಂದು ಮುದದಿ ॥ (19)

ದುರುಳದಶಕಂಧರಂ ತರತರದ ತಪದಿಂದ ।
ಚರಣಸೇವನೆಗೆಯ್ಯೆ ಕರುಣದಿಂದಾತಂಗೆ ।
ವರವ ಪಾಲಿಸಿದೆನೀನಸುರಸುರಗಂಧರ್ವಯಕ್ಷಪನ್ನಗರ ದೆಸೆಯಿಂ ॥
ಮರಣವಿಲ್ಲದ ತೆರದಿ ಮಗುಳೆ ರಕ್ಕಸರಾಯ ।
ಪರಮಋಷಿಪಿತೃದೇವತೆಗಳ ಗೋವಿಪ್ರರಂ ।
ನಿರತ ಭಾಧೆಯಗೈವ ನಿತ್ಯಕರ್ಮಂಗಳಂ ಕೆಡಿಸಿ ದುರ್ಮೇಧೆಯಿಂದ ॥ (20)

ಸುಳಿಯಲಮ್ಮ ಮರುತ್ತ ಬೆಳಗಲಮ್ಮೆನೆನುತ್ತ ।
ತೊಳಲುತಿಪ್ಪನು ಭಾನು ಬಳಲುತಿಪ್ಪ ಕೃಶಾನು ।
ಬಳುಕುವಂ ನೈಋತಂ ನೆನೆದು ದಾನವಕೃತಿಯ ದಾರುಣವ ನಿಜಚಿತ್ತದಿ ॥
ಹಳವಳಿಸೆ ಮುನಿವರರು ಹಮ್ಮೈಸುವರು ಸುರರು ।
ಕಳವಳಿಸೆ ವಾರಾಶಿ ಕಾಯ್ವರಿಲ್ಲದೆ ವಾಸಿ ।
ಯಳಿದಿರ್ಪರೇನೆಂಬೆವಾರನುಂ ಬೆಸಗೊಂಬೆವಸುರನುಪಟಳದುರುಬನು ॥ (21)

ವರದಾನಬಲದೊಳೀ ಪರಿಯ ಲೋಕಂಗಳಂ ।
ಸೆರೆವಿಡಿದು ಬಾಧಿಪಂ ಪರಿಹರಿಸಲಳವಲ್ಲ ।
ಧರೆಯೊಳಿನ್ನಾರು ಗತಿ ನೀನಲ್ಲದನ್ಯರೆಮಗೆಂದು ಬಿನ್ನವಿಸೆ ಕೇಳಿ ॥
ಸರಸಿಜಾಸನ ದಿವಿಜರೆರೆಯನೊಡನಿಂತೆಂದ ।
ಪರಮತಪದಿಂದೆಮ್ಮ ಮೆಚ್ಚಿಸಿದ ದಾನವಗೆ ।
ಸುರಯಕ್ಷಕಿನ್ನರೋರಗರಿಂದ ವಧ್ಯತ್ವಮನ್ನಿತ್ತೆಯ್ಯೆಸೆ ಮುದದಿ ॥ (22)

---

* ಇಷ್ಟಿಂ ತೇಹಂ ಕರಿಷ್ಯಾಮಿ ಪುತ್ರೀಯಾಂ ಪುತ್ರಕಾರಣಾತ್ ॥
ಅಥರ್ವಶಿರಸಿ ಪ್ರೋಕ್ತೈರ್ಮಂತ್ರೈಸ್ಸಿದ್ಧಾಂ ವಿಧಾನತಃ ॥ ೨ ॥
(ವಾ. ರಾ.---ಬಾಲಕಾಂಡ---ಪಂಚದಶಸ್ಸರ್ಗ)

ಇಂತಿದಕುಪಾಯವೊಂದಿಹುದು ಕೇಳು ಸುರೇಂದ್ರ ।
ಪಿಂತಸುರಸುರರಿಂದೆ ಮರಣ ನೆರೆಘಟಿಸದವ ।
ಗಾಂತು ಯಾಚಿಸದಾದ ನರವಾನರರ್ಕಳಿಂ ಭಯ ಜನಿಸಬಾರದೆನುತೆ ॥
ಕಂತುಪಿತನ ಕಟಾಕ್ಷದಿಂದ ನಿಮ್ಮಯ ಮನದ ।
ಚಿಂತೆ ಪರಿಹರಮಪ್ಪುದೆಂದು ಕಮಲಜ ಪೇಳೆ ।
ಸಂತಸಂಗೊಂಡರನಿಮಿಷರಮರಮುನಿವರರು ಪೊಗಳಿದರು ಚತುರಾಸ್ಯನ ॥ (23)

ಅಂಬುಜಾಸಂಭೂತನಮರೇಂದ್ರತಾಪಸಕ ।
ದಂಬಮಾಲೋಚಿಸುವ ಸಮಯದೊಳ್ ಕಾಣಿಸಿದು ।
ದಂಬರದೊಳಮಿತ ಭಾಸ್ಕರನುದಯಮಾದಂತಖಂಡತೇಜೋರಾಶಿಯು ॥
ಅಂಬುದೋಪಮಕಾಂತಿಯೆಡೆಯೆಡೆಗೆ ಭೂತಳದಿ ।
ಬಿಂಬಿಸಲ್ಕೆ ನಿಲಿಂಪ ಮೌನಿಗಳ ಹೃತ್ಕೇಕಿ ।
ಡೊಂಬಿ ಸಂಭ್ರಮಗೊಂಡು ನಲಿದುದಾನಂದದಿಂ ಕೌತುಕಮಿದೇನೆನುತ್ತ ॥ (24)

ಮಣಿಮುಕುಟಕುಂಡಲಗ್ರೈವೇಯಹಾರಗಳ ।
ಪಣೆಯ ಕಸ್ತುರಿತಿಲಕ ಪಂಕಜೋಪಮನಯನ ।
ಮೆಣೆಯಿಲ್ಲದುರದ ಶ್ರೀವತ್ಸಕೌಸ್ತುಭರತ್ನಮುರುಚತುರ್ಭುಜಗಳಿಂದೆ ॥
ಪ್ರಣವಮೆನಿಪ ರಥಾಂಗಮಬ್ಜಗದೆಪದ್ಮದಿಂ ।
ರಣಿತಮಣಿಮೇಖಲೆಯ ಕಿಂಕಿಣೀಜಾಲಂಗ ।
ಳಣಿಮಾದಿಸಿದ್ಧಿಗಳ ದಾತಾರ ಶ್ರೀರಮಣ ಕಣ್ಗೆ ಗೋಚರನಾದನು ॥ (25)

ತಳತಳಿಪ ವದನೇಂದು ಸುಂದರರದ ಬಂಧುರದ ।
ಕಳೆಕಳೆಯಲಿಹ ಗಂಡಮಂಡಲದ ಕುಂಡಲದ ।
ನಳನಳಿಪ ಕಡೆಗಣ್ಗಳಿಂಗಡಲ ವಂಗಡದ ಸಂಗಡಿಗರೆಂದೆನಿಸಿರೆ ॥
ಕಳಕಳಿಪ ದರಹಾಸಕೌಮುದಿಯ ಸೌಮುದಿಯ ।
ಪೊಳೆಪೊಳೆವ ಬಿಂಬೋಷ್ಠಪಲ್ಲವದ ವಲ್ಲವದ ।
ನಲವಿನಿಂ ನೋಳ್ಪ ಯತಿತತಿಯ ಸುರತತಿಯ ಸಂತತಿಗೆ ಹರಿಯೈತರೆ ॥ (26)

ನೀರುದುಂಬಿದ ಘನಾಘನದುದಯಮಾಗಲ್ಕ ।
ಯೂರತತಿ ನಲಿವಂತೆ ಸಾರಸಾಸನದಿವಿಜ ।
ಧೀರರೆಲ್ಲರ್ನೈಗಮಾಗಮೋದಿತವಚನದಿಂದ ಸಂಸ್ತುತಿಗೈವುತ ॥
ವಾರಣಮಹಾಭಯನಿವಾರಣ ತ್ರಿಮೂರ್ತಿಗಳ ।
ಕಾರಣ ಪರಬ್ರಹ್ಮ ಕಾಯಬೇಕೆಮ್ಮನಾ ।
ದಾರುಣದಶಾನನೋರಗದುಗ್ರಬಾಧೆಯಿಂ ಬನ್ನಬಡಲಾರೆವರಸ ॥ (27)

ಸುರಯಕ್ಷಗಂಧರ್ವಗರುಡಪನ್ನಗಋಕ್ಷ |
ವರದಿಶಾನಾಯಕಾಸುರರಿಂದ ದೈತೇಯ |
ರರಸನಿಗೆ ಮರಣವಿಲ್ಲದ ತೆರದಲಭಯಮನ್ನಿತ್ತಸೀಯಬ್ಜಯೋನಿ ||
ವರದಾನಬಲದಿಂದ ಪರಮಋಷಿಕ್ರತುಭುಜರ |
ಪರಿಯನರಿಯದೆ ಕೃತಾಂತನ ತೆರದಿ ಬಾಧಿಸುವ |
ಕರುಣದಿಂ ರಕ್ಷಿಸುವರಾರೆಮ್ಮ ಪರಬೊಮ್ಮ ಭವದೀಯ ಚರಣಮುಳಿದು || (28)

ಮನುಜರಿಂದಲಿ ದೈತ್ಯಜನಪತಿಗೆ ಮರಣಮಂ |
ನೆನೆದಿಹಂ ಚತುರಾಸ್ಯನದರಿಂದೆ ದೇವೇಶ |
ಮನುಜೇಶ ಪಾಕಶಾಸನಮಿತ್ರ ಧರ್ಮಜ್ಞ ಸತ್ಯನಿಧಿ ಪಂಕ್ತಿರಥನ ||
ಮನದೀಪ್ಸಿತವನೀಯಲೋಸುಗಂ ತದ್ರಾಜ |
ವನಿತೆಯರ ಜಠರದಿಂದೊಗೆತಂದು ವೇಗದೊಳ್ |
ದನುಜೇಂದ್ರನಂ ಕೊಂದು ರಕ್ಷಿಸಲ್ವೇಳ್ಕೆಂದು ಬಿನ್ನೈಸಲಾ ವಿಬುಧರು || (29)

[1]ಶೇಷಶಯನಂ ಕೇಳ್ದು ಮೃದುಮಧುರರಸಗಳಂ |
ಸೂಸುತಿಂತೆಂದನೆಲೆ ಮಗನೆ ಕೇಳ್ಳೆ ಸುರರ |
ಬೇಸರಂ ಪರಿದಪೆಂ ಭಯಬೇಡಮಿನ್ನು ರವಿಕುಲಜಾತಪಂಕ್ತಿರಥಗೆ ||
ಲೇಸನೀಯಲ್ಕೆ ಸುತನೆನಿಸಿ ದಶಗಳನಾತ್ಮ |
ನಾಶನಂಗೈದು ನಿಮ್ಮಯ ಕುಲವ ರಕ್ಷಿಸುವೆ |
ಭೂಸುರೋತ್ತಮರೆಲ್ಲ ಭೀತಿಯನ್ನುಳಿದಿರ್ಪುದೆನುತಭಯಮಿತ್ತು ಬಳಿಕ || (30)

[2]ದುರುಳ ದಶಕಂಧರನ ಶಿರಗಳಂ ತರಿದಿಟ್ಟು |
ಧರೆಯ ಪಾಲಿಸಿ ಪತ್ತುಸಾಸಿರಬ್ದಂಗಳಂ |
ತುರಗಮೇಧಾಧ್ವರವ ಮಾಡುವೆಂ ಸಕಲಜನರಿಷ್ಟಂಗಳನ್ನೀವುತ ||
ಪೊರೆದು ಗೋಬ್ರಾಹ್ಮಣೋತ್ತಮರ ತದನಂತರದಿ |
ಬರುವೆ ವೈಕುಂಠಮಂದಿರಕೆಂದು ಶ್ರೀಹರಿಯು |
ಸರಿಸಿಜಾಸನಮುಖ್ಯರಿಂಗಭಯಮನ್ನಿತ್ತು ಗಮಿಸಿದಂ ನಿಜನಿಲಯಕೆ || (31)

---

1 ಅಬ್ರವೀತ್ತ್ರಿದಶಾನ್ ಸರ್ವಾನ್ ಸಮೇತಾನ್ ಧರ್ಮಸಂಹಿತಾನ್ || ೨೬ ||
ಭಯಂ ತ್ಯಜತ ಭದ್ರಂವೋ ಹಿತಾರ್ಥಂ ಯುಧಿ ರಾವಣಂ ||
ಸಪುತ್ರಪೌತ್ರಂ ಸಾಮಾತ್ಯಂ ಸಮಿತ್ರಜ್ಞಾತಿಬಾಂಧವಂ || ೨೭ ||

2 ಹತ್ವಾ ಕ್ರೂರಂ ದುರಾತ್ಮಾನಂ ದೇವರ್ಷೀಣಾಂ ಭಯಾವಹಂ ||
ದಶವರ್ಷ ಸಹಸ್ರಾಣಿ ದಶವರ್ಷಶತಾನಿಚ || ೨೮ ||
ವತ್ಸ್ಯಾಮಿ ಮಾನುಷೇಲೋಕೇ ಪಾಲಯನ್ ಪೃಥಿವೀಮಿಮಾಂ ||
ಏವಂ ದತ್ವಾ ವರಂದೇವೋ ದೇವಾನಾಂ ವಿಷ್ಣುರಾತ್ಮವಾನ್ || ೨೯ ||

(ವಾ. ರಾ.—ಬಾಲಕಾಂಡ—ಪಂಚದಶಸ್ಸರ್ಗ.)

ಜಗದೀಶನೀ ಪರಿಯಲಭಯದಾನವನಿತ್ತು ।
ಖಗಪತಿಯನೇರಿ ಬಿಜಯಂಗೆಯ್ಯೆ ಸುರರೆಲ್ಲ ।
ವಿಗತಕಂಟಕರಾದೆವೆಂದು ಸಂತೋಷದಿಂ ನಾರಾಯಣಾಂಘ್ರಿಯುಗವ ॥
ಪೊಗಳಿ ನಿಜಚಿತ್ತದಲಿ ಬಗೆಗೊಳಿಸಿ ಹರುಷದಿಂ ।
ನಗೆವೆರಸಿ ನಡೆತಂದರಾ ರಘೂತ್ತಮನಾಳ್ವ ।
ಸೊಗಸಿನಧ್ವರಹವಿರ್ಭಾಗಂಗಳಂ ಸವಿದರಾನಂದಮಯರಾಗುತೆ ॥ (32)

ಅನಿತರೊಳು ಋಷ್ಯಶೃಂಗಾಖ್ಯ ತಾಪಸವರ್ಯ ।
ಜನಪತಿಗೆ ಸುತಲಾಭಮಪ್ಪಂತೆ ಮಖವ ಸ-।
ನ್ಮನಿಜನರು ಭಳಿರೆನ್ನಲೆಸಗಿದಂ ಶಾಸ್ತ್ರೋಕ್ತಮಾಗಿ ದಿವಿಜಾಳಿ ನಲಿಯೆ ॥
*ಘನನೀಲಪಟ ರಕ್ತಕಲಿತ ದುಂದುಭಿಯಂತೆ ।
ಸ್ವನ ಸ್ನಿಗ್ಧಹರ್ಯಕ್ಷತನುಜ ಶ್ಮಶ್ರುಪ್ರವರ ।
ಮೆನಿಪ ಶುಭಲಕ್ಷಣಂ ದಿವ್ಯಭೂಷಾಯುಕ್ತ ಲೋಹಿತಾನನದ ಸೊಬಗು ॥ (33)

ರವಿಸಮಾಕಾರ ದೀಪ್ತಾನಲಶಿಖೋಪಮಂ ।
ಭುವಿಯೊಳತಿಶಯಮಾದ ಪುರುಷನೋರುವನಾಗ ।
ತವಕದಿಂದಗ್ನಿಕುಂಡೋದ್ಭವಂ ತಾನಾಗಿ ನಿಜಪಾಣಿತಳಗಳಿಂದೆ ॥
ಯುವತಿಗೆಣೆಯೆಂದೆನಿಪ ಪರಮಾನ್ನಸಂಭರಿತ ।
ವಿವಿಧ ಸತ್ಕಾಂತಿಯುತ ಸ್ವರ್ಣಪಾತ್ರೆಯ ಪಿಡಿದು ।
ನವಕಮೆನೆ ಮೃದುಮಧುರವಾಣಿಯಿಂದಿಂತೆಂದ ದಶರಥಮಹೀಪಾಲಗೆ ॥ (34)

ತಿಳಿಯರಸನೆನ್ನ ಪ್ರಾಜಾಪತ್ಯನಿವನೆಂದು ।
ಜಲಜಾಪ್ತಸಂತಾನತಿಲಕ ಬಂದಿರ್ಪೆನಿಂ ।
ದಿಳೆಗೆನಲ್ ಕೇಳಿ ನೃಪ ವಿಸ್ಮಿತಾನಂದಮಯನಾಗಿ ಸಾಷ್ಟಾಂಗಮೆರಗಿ ॥
ನಳಿನಾಕ್ಷನಿಭಮೂರ್ತಿ ನಿನ್ನ ದರ್ಶನದಿಂದೆ ।
ಕಳೆದು ಚಿಂತಾತತಿಯ ಸಂತೋಷದುದಯಮಂ ।
ತಳೆದೆನೆನ್ನಿಂದಪ್ಪ ಕಜ್ಜಮಂ ಬೆಸಗೆಯ್ಯವೇಳ್ಕೆಂದು ಮುಗುಳೆ ನಮಿಸಿ ॥ (35)

---

* ಕೃಷ್ಣರಕ್ತಾಂಬರಧರಂ ರಕ್ತಾಸ್ಯಂ ದುಂದುಭಿಸ್ವನಂ ॥
ಸ್ನಿಗ್ಧಹರ್ಯಕ್ಷತನುಜ ಶ್ಮಶ್ರು ಪ್ರವರಮೂರ್ಧಜಂ ॥ ೧೨ ॥

ಶುಭಲಕ್ಷಣ ಸಂಪನ್ನಂ ದಿವ್ಯಾಭರಣಭೂಷಿತಂ ॥
ಶೈಲಶೃಂಗ ಸಮುತ್ಸೇಧಂ ದೃಪ್ತಶಾರ್ದೂಲ ವಿಕ್ರಮಂ ॥ ೧೩ ॥

(ವಾ. ರಾ.—ಬಾಲಕಾಂಡ—ಷೋಡಶಸ್ಸರ್ಗ.)

✓ ನರನಾಥನೆಂದ ನುಡಿಕೇಳಿ ಪ್ರಾಜಾಪತ್ಯ ।
ನರನೆಂದ ನೃಪಕುಲಲಲಾಮ ನೀ ಮಾಡಿದ ।
ಧ್ವರಕೆ ಸಂತಸಗೊಂಡು ಸುರರೆಲ್ಲ ನಿರ್ಮಿಸಿದರೀ ದಿವ್ಯಪಾಯುಸವನು ॥
ವರಸುಧೋಪಮ ಪ್ರಭಾಕರದನ್ನಮಾರೋಗ್ಯ ।
ಹರುಷದಿಂ ನಿನ್ನರಸಿಯರಿಗೆ ಯೋಜನಗೆಯ್ಸೆ ।
ತರಳರಪ್ಪರು ಮನೋರಥಸಿದ್ಧಿಯಹುದಿದಂ ಕೊಳ್ಳೆನುತಲಿತ್ತ ನಯದಿ ॥ (36)

ಕೊಡೆ ದೇವನಿರ್ಮಿತದ ಪಾಯಸವ ಕರತಳಕೆ ।
ಪೊಡವಿಪತಿ ಸಂತೋಷಚಿತ್ತನಾಗುತೆ ಬೇಗ ।
ಪೊಡಮಟ್ಟು ಮೋದದಿಂ ನಿಧಿಯ ಕಂಡ ದರಿದ್ರನಂತೆ ಹಿಗ್ಗುತ್ತ ನಲಿದು ॥
ಬಿಡುಗಣ್ಣರೆಲ್ಲರುಂ ನೋಡಲದ್ಭುತದಿಂದ ।
ಮೊಡನೆ ಪ್ರಾಜಾಪತ್ಯಪುರುಷನಂತರ್ಧಾನ ।
ವಿಡಿದನಿತ್ತಲು ಭೂಸುರೋತ್ತಮರು ಜಯಜಯಾರಾವದಿಂ ನುತಿಗೈಯಲು ॥(37)

✓ * ಅನಿತರೊಳ್ನರನಾಥನಂತಃಪುರಕೆ ಬಂದು ।
ವನಿತೆಕೌಸಲೆಯೊಳೀ ವೃತ್ತಾಂತಮಂ ಪೇಳಿ ।
ಮನದ ಹರ್ಷದಲಿತ್ತ ಪಾಯಸಾರ್ಧವನುಳಿದ ಪರಮಾನ್ನಮಂ ಕೈಕೆಗೆ ॥
ವಿನಯದಿಂದಿತ್ತಾ ಸುಮಿತ್ರೆಯಂ ನೆನೆದಾಗ ।
ಕನಲುತಿರೆ ನರಪತಿಯ ಪರಿಯಂ ನಿರೀಕ್ಷಿಸುತ ।
ಬಿನದದಿಂದಿತ್ತರ್ ನಿಜಾಂಶಗಳಲೊಂದೊಂದು ಭಾಗಮಂ ಮಗಧಸುತೆಗೆ ॥ (38)

---

* ಪಾಯಸಂ ಪ್ರತಿಗೃಹ್ಣೀಷ್ವ ಪುತ್ರೀಯಂತ್ವಿದಮಾತ್ಮನಃ ||
ಕೌಸಲ್ಯಾಯೈ ನರಪತಿಃ ಪಾಯಸಾರ್ಧಂ ದದೌ ತದಾ || ೨೬ ||

ಅರ್ಧಾದರ್ಧಂ ದದೌಚಾಪಿ ಸುಮಿತ್ರಾಯೈ ನರಾಧಿಪಃ ||
ಕೈಕೇಯ್ಯೈಚಾವಶಿಷ್ಟಾರ್ಧಂ ದದೌ ಪುತ್ರಾರ್ಥ ಕಾರಣಾತ್ || ೨೭ ||

ಪ್ರದದೌಚಾವಶಿಷ್ಟಾರ್ಧಂ ಪಾಯಸಸ್ಯಾಮೃತೋಪಮಂ ||
ಅನುಚಿಂತ್ಯ ಸುಮಿತ್ರಾಯೈ ಪುನರೇವ ಮಹೀಪತಿಃ || ೨೮ ||

ಹೀಗೆ ವಾಲ್ಮೀಕಿರಾಮಾಯಣದಲ್ಲಿ ದಶರಥನು ಕೌಸಲ್ಯಾದೇವಿಗೆ ಆ ಪಾಯಸದಲ್ಲಿ ಅರ್ಧವನ್ನು ಕೊಟ್ಟು, ಉಳಿದ ಅರ್ಧದಲ್ಲಿ ಅರ್ಧಭಾಗವನ್ನು ಸುಮಿತ್ರಾದೇವಿಗೂ, ಮತ್ತೂ ಉಳಿದ ಚತುರ್ಥಾಂಶದಲ್ಲಿ ಎರಡು ಭಾಗಮಾಡಿ ಒಂದು ಭಾಗವನ್ನು ಕೈಕೆಯಿಗೂ ಮತ್ತೊಂದು ಭಾಗವನ್ನು ಮರಳಿ ಸುಮಿತ್ರಾದೇವಿಗೂ ಕೊಟ್ಟು ನಿಷ್ಪಕ್ಷಪಾತವಾಗಿ ಪಾಯಸವನ್ನು ಹಂಚಿರುವನು ಎಂಬುದಾಗಿ ಹೇಳಿರುತ್ತದೆ. ಇಲ್ಲಿ ಈ ಕವಿಯು ಹೇಳುವ ಬಗೆ ಭೋಜಕೃತ ಚಂಪೂರಾಮಾಯಣದಂತಿದೆ.

ಆ ನಿಲಿಂಪೋದ್ಭೂತಪರಮಾನ್ನವನ್ನು ಭೂ ।
ಜಾನಿ ಕೊಡಲತಿಮುದದಿ ಪ್ರಾಶನಂಗೈದರಾ ।
ಮಾನಿನಿಯರಮೃತಮಂ ಸವಿದ ತಾರಾದೇವಿಶಚಿಸರಸ್ವತಿಯರಂತೆ ॥
ಏನೆಂಬೆ ಪಾಯಸವ ಸವಿಯಲಚಿರೇಣ ಸತ ।
ತಾನಂದವರಸುಧಾಹೃದಯಲಕ್ಷಣಗಳಾ ।
ಮ್ಲಾನಮೆನೆ ತೋರಲೀಕ್ಷಿಸಿ ಮನೋಹರ್ಷಮಂ ತಾಳ್ದ ಭೂಭುಜಲಲಾಮ ॥ (39

ತಾವರೆಯ ಕಣ್ಣ ದಶರಥರಾಯನಿಗೆ ಮುದವ ।
ನೀವ ಸುತನಪ್ಪನೆಂದರಿತು ಪೊಂಬೊಡೆಯನುಂ ।
ಠೀವಿಯಿಂ ಲೇಖಾಸಮೂಹದೊಡನಿಂತೆಂದನತಿಮನೋಹರಭಾಷೆಯಿಂ ॥
ಕಾವಪಿತನವತಾರಮಂ ಮಾಳ್ಪನವನಿಯೊಳ್ ।
ನೀವೆಲ್ಲರಚ್ಯುತಸಹಾಯರೆಂದೆನಿಸುವರೆ ।
ಪ್ಲಾವಗಂ ಭಲ್ಲೂಕಗೋಪುಚ್ಛಸಂತತಿಯ ಸೃಜಿಸುವುದು ಮುದದಿಂದಲಿ ॥ (40)

ಶೂರರ ನಯಜ್ಞರಂ ವಿಮಲಮಾಯಾವಿಗಳ ।
ಧೀರರಂ ಬುದ್ಧಿಸಂಪನ್ನರನವದ್ಯರಂ ।
ಮಾರುತೋಪಮವೇಗಯುತಸರ್ವಶಾಸ್ತ್ರವೇದಾಂತಿಗಳ ದಿವಿಜಸಮರ ॥
ಕಾರಣಿಕ ವಿಷ್ಣುಸಮವಿಕ್ರಮರ ವಾನರರ ।
ಚಾರು ಗಂಧರ್ವಿಯರು ಯಕ್ಷಕಿನ್ನರರುರಗ ।
ನಾರಿಯರೊಳಂ ಸೃಜಿಪುದಪ್ಸರಾಂಗನೆಯರಲಿ ಹರಿಗೆ ಬೆಂಬಲಮಪ್ಪರೆ ॥ (41)

ನೊದಲೆ ಮನು ಜೃಂಭಣದಿ ಜಾಂಬವಂ ಋಕ್ಷಪತಿ ।
ಯುದಿಸಿಹನು ಎಂದೆನುತ ಪದುಮಪೀಠ(ನು) ಪೇಳೆ ।
ಮುದದಿಂದಲಪ್ಸರೀಕಿನ್ನರೀಗಾಂಧರ್ವಯಕ್ಷಪನ್ನಗಿಯರಲ್ಲಿ ॥
ಕುಧರಸಮಧೈರ್ಯವಾನರರ ನಿರ್ಮಿಸಿದರತಿ ।
ಚದುರತನದಿಂ ದೇವಗಂಧರ್ವರಿಸಿಗಳರಿ ।
ನಿಧನಕ್ಕೆ ಭೂಮಿಬೆಸಲಾದಂತೆ ಬಾನೆಡೆಯುದಿಕ್ತ್ತಿಯು ಪೆತ್ತ್ತಂದದಿ ॥ (42)

ಸುರಪನಿಂದಂ ವಾಲಿ ಹರಿಯಿಂದ ಸುಗ್ರೀವ ।
ಗುರುವಿನಿಂ ತಾರ ವೈಶ್ರವಣತನುಸಂಭೂತ ।
ವರಗಂಧಮಾದನಂ ನಳ ವಿಶ್ವಕರ್ಮನಿಂದಗ್ನಿಯಿಂ ನೀಲಾಖ್ಯನು ॥
ವರುಣನಿಂದ ಸುಷೇಣ[1] ನಶ್ವಿನಿಯರಿಂ) ಮೈಂದ ।
ನುರುಪರಾಕ್ರಮಿದ್ವಿವಿದರಿರ್ವರುದ್ಭವರಾದ ।
ರರಿನಿಷೂದನವೈನತೇಯಜವಧೀಮಂತಹನುಮಂತ ಮರುತನಿಂದೆ ॥ (43)

---

1. ನಾ ಸತ್ಯರಿಂ ವೈಂದ

ಇಂತಿಪ್ಪುದಾ ದಿವಿಜರುಷಿಗಳಾಕೃತಿವೀರ್ಯ ।
ಶಾಂತಿಧೈರ್ಯಗಳವರ ಪ್ರತಿಬಿಂಬಮಾದಂತ ।
ಚಿಂತಿತ ಪರಾಕ್ರಮಿಗಳುದಯಿಸಿದರತಿಬಲರ್ ಪ್ಲವಗಗೋಲಾಂಗೂಲರು ॥
ಕಾಂತಗೋಪುಚ್ಛ ಭಲ್ಲೂಕಸಮುದಯದುದಯ ।
ಮಾಂತರಾ ವಾರನಾರಿಯರಪ್ಸರೆಯರೆಕ್ಷ ।
ಕಾಂತೆಯರೊಳಜ ನೇಮವಿತ್ತಂತೆ ಸಂಜನಿಸಿತುನ್ನತದೊಳೇವೇಳ್ಪಿನು ॥ (44)

ಎಲ್ಲರುಂ ಕಾಮರೂಪಿಗಳು ಸ್ವೇಚ್ಛಾಗಮನ ।
ರೆಲ್ಲರುಂ ಸಿಂಹಶಾರ್ದೂಲವಿಕ್ರಮಮುಳ್ಳ ।
ರೆಲ್ಲರುಂ ಪಾದಪಶಿಲಾಯೋಧನಪ್ರಿಯರ್ನಖದಂಷ್ಟ್ರಹೇತಿಯುತರು ॥
ಎಲ್ಲರುಂ ಸರ್ವಶಾಸ್ತ್ರಾರ್ಥಕೋವಿದನಿಪುಣ ।
ರೆಲ್ಲರುಂ ಧೈರ್ಯಗಾಂಭೀರ್ಯಸ್ಥೈರ್ಯಾದಿಯುತ ।
ರೆಲ್ಲರುಂ ಸಂಯುಗದಿ ಗಣಿಸರಮರೇಂದ್ರಾದಿವೀರರಂ ಭೂತಳದೊಳು ॥ (45)

ಹರಿಗೆ ಬೆಂಬಲಮಾಗಿ ಸುರರೆಲ್ಲ ಕಪಿರೂಪ ।
ಧರಿಸಿ ತಿರೆಯೊಳಗುದಿಸಲವರ ಸಾಹಸಗಳಂ ।
ಪಿರಿದೆನಿಪ ಗಮನದೇಳ್ಗೆಗಳ ತತ್ಸಂಖ್ಯೆಗಳ ಗಣಿಸಲುಂ ಪಣಿಪಗಳವೆ ॥
ಶರಧಿಮೇಖಲೆಯೊಳವತರಿಸಿದೀ ಪರಿಯನ್ನು ।
ಸರಸಿಜಾಸನ ನೋಡಿ ಹಿಗ್ಗುತಿರೆ ಮುನಿವರರು ।
ಪರಮ ಸಂತೋಷವೆತ್ತಿರ್ದರಿತ್ತಲು ಪಂಕ್ತಿರಥಮಹೀಪಾಲ ಮುದದಿ ॥ (46)

ಯಾಗಮಂ ಸಂಪೂರ್ತಿಗೊಳಿಸೆ ದಿವಿಜರು ಹವಿ- ।
ರ್ಭಾಗಂಗಳಂ ಕೊಂಡು ನಿಜನಿವಾಸಂಗಳಿಗೆ ।
ಪೋಗೆ ಧರಣೀಸುರರು ಭೂಷಣಾಂಬರರತ್ನವಸುಸಮೃದ್ಧಿಗಳಿಂದಲಿ ॥
ಸಾಗರಾಂತದ ಧರಣಿಯಂ ಪಾಲಿಸೆಂದು ನೃಪ ।
ಗಾಗಲಾಶೀರ್ವಚನಗಳನಿತ್ತು ಬೆಸಗೊಂಡು ।
ವೇಗದಿಂದೈದಲ್ಕೆ ಸಕಲಭೂಭುಜರೊಡನೆ ಧರಣೀಶನೀಶನಂತೆ ॥ (47)

ಸತಿಯರೊಡಗೊಂಡು ರಥವೇರಿ ವೈಭವದಿಂದ ।
ಲತಿಶಯದ ಚತುರಂಗಬಲದೊಡನೆ ಪಾಠಕರ ।
ರತಿಯಿಂದೆ ನರ್ತಿಸುವ ವಾರನಾರಿಯರಿಂದೆ ನಟಗಾಯಕರ ಕವಿಗಳ ॥
ವಿತತಸಂಸ್ತುತಿಯಿಂದಲಖಿಳಬಿರುದಾಂಕಗಳ ।
ತತಿಯ ಕೈವಾರಿಸುವ ಮಾಗಧರ ರವದಿಂದೆ ।
ಕ್ಷಿತಿಪ ನಿಜನಗರಕೈತಂದನಮರಾವತಿಯನಮರೇಶ ಪೊಗುವಂದದಿ ॥ (48)

ಬೀಸುತಿಹ ಚಾಮರದ ಬಿಡಯ ಸಮುದಾಯದಿಂ ।
ಸೂಸುತಿಹ ಲಾಜದ ವಿಡಾಯ ಗರುವಾಯದಿಂ ।
ಲೇಸೆಂದು ಲೇಖಾಸಮೂಹಸುಮವೃಷ್ಟಿಗಳ ಕರೆವ ಕಮನೀಯದಿಂದೆ ॥
ಆ ಸಮಸ್ತರು ತಳಿವ ಸೇಸೆಗಳ ಹಾಸಗಳ ।
ಭಾಸುರದ ಗಾಯಕವಿಲಾಸಗಳ ವಾಸಿಗಳ ।
ಭೂಸುರೋತ್ತಮರ ಪರಿವೇಷ ಶುಭಘೋಷದಿಂ ನೃಪತಿಲಕನೈತಂದನು ॥ (49)

ರಾಜಸನ್ಮಾನದಿಂ ರಾಜಶೇಖರನಂತೆ ।
ರಾಜಿಸುವ ವಿದ್ಯಾಧರಾನುಮೋದಂಗಳಿಂ ।
ರಾಜರಾಜನ ತೆರದಿ ಗಂಧರ್ವಪರಿವೇಷದಿಂ ಸುರಪನಂದದಿಂದ ॥
ಆ ಜನಪನೈತಂದನಖಿಲಪ್ರಜೆಪರಿವಾರ ।
ರಾಜಿಯಂ ಮನ್ನಿಸುತ ಚತುರಾಸ್ಯನೆನೆ ನೃಪಸ ।
ಮಾಜಮೋಲೈಸುತ್ತೈತರಲತುಲವೈಭವದೊಳರಮನೆಯ ಪೊರೆಗೆ ಭರದಿ ॥ (50)

ವರಭೂಷಣಾಂಬರಗಳಿತ್ತು ಸನ್ಮಾನದಿಂ ।
ದರಸುಗಳ ಪ್ರೀತಿಯಿಂ ಬೀಳ್ಕೊಟ್ಟು ನೃಪಮೌಳಿ ।
ಯರಮನೆಯ ಪೊಕ್ಕನತಿಹರ್ಷದಿಂ ಹರ್ಯಕ್ಷ ಗಹ್ವರವ ಪೊಗುವಂದದಿ ॥
ವಿರಚಿಸುತೆ ಮಜ್ಜನವ ಭೋಜನಂಗೈದು ವರ ।
ಸುರುಚಿರದ ಶೃಂಗಾರಯುತನೆನಿಸಿ **ಶ್ರೀರಾಮ** ।
**ಪುರದ** ಹರಿಯಂಪ್ರಿಯಂ ಸ್ಮರಿಸಿ ಸುರರಾಜನೆಂಬಂತೆ ಸುಖಮಿರ್ದ ನೃಪತಿ॥ (51)

ಸಂಧಿ 8 ಕ್ಕಂ ಪದಗಂಳ್ 460

---

## ಒಂಭತ್ತನೆಯ ಸಂಧಿ

ಸೂಚನೆ ॥ ನಿರುಪಮಾನಂದೈಕನಿಧಿಯೆನಿಪ ವಿಷ್ಣು ನಿಜ ।
ಕರುಣದಿಂ ಧರಣಿಯೊಳಗವತರಿಸಿ ತ್ರಿಜಗಮಂ । [ನಲಿಯೆ ॥
ಪೊರೆಯೆ ದಶರಥನಾತ್ಮಭವನೆನಿಸಿ ರಾಜಿಸಿದ ನಿರ್ಜರಕದಂಬ

ಮುಡದಿಯರ ಮಾಣಿಕವೆ ಮನದನ್ನೆ ಕೇಳ್ವುದಾ ।
ಪೊಡವೀಶನಮಿತಸೌಖ್ಯದೊಳಿರ್ದನನ್ನೆಗಂ ।
ಮಡದಿಕೌಸಲೆಯ ಮುಖಪಂಕಜಶರಚ್ಚಂದ್ರಕಳೆಯಿಂದೆ ಕಳೆಯಾಂತಿರೆ ॥
ನಡುಗಿ ಕುಚಕೋಕಗಳು ಪಿಡಿದ ಕಡುಚಿಂತೆಯಿಂ ।
ದೊಡನೆ ಭೀತಿಯ ನೀಗಲೆಂದು ಬಲಭಿನ್ಮಣಿಯ ।
ಮುಡಿದುವೋ ಸೀಮಂತದಲ್ಲೆಂಬ ಮಾಳ್ಕೆಯೊಳ್ಚೂಚುಕಂ ಕಣ್ಗೆಸೆಯಲು ॥ (1)

ವಟಪತ್ರನಿಭಮೆನಿಪ ವಾಮೆಯ ತಳೋದರಂ ।
ವಟಪತ್ರಮಾದುದತಿಚಿತ್ರಮೆಂತೆನೆ ದೈತ್ಯ ।
ಕಟಕಿ ದಶಕಂಠಕುಂಭಶ್ರವಣನಾಮಕದ ಕುಂಭೀನಸಂಗಳಿಂದ ॥
ಕುಟಿಲ ಹಾಲಾಹಲೋದಿತಮಾಗಿ ತ್ರಿಜಗಮಂ ।
ಚಟುಲತರಬಾಧೆಗೊಳಿಸಲ್ ಜೀವನೌಷಧಿಯ ।
ಪಟು ಪರಮಪೂರುಷನ ತನ್ನೊಳಿಂಬಿಟ್ಟಿರ್ಪ ಗರ್ಭ ಕೈತವದಲೆಸೆಯೆ ॥ (2)

ಪದುಮಾಕ್ಷ ಮಾನಿನೀಯುದರಮಂ ನೆಲೆಗೆಯ್ಯೆ ।
ಹೃದಯಸ್ಥಮಾದ ಕಳ್ತಲೆಯ ಮೊತ್ತಂ ಸುರರ ।
ನದಿರಿಸುವ ರಿಪುಗಳುಂ ಕಂಗೆಟ್ಟು ಮುಖನೈಲ್ಯಮಾಂತಂತೆ ಚೂಚುಕಗಳು ॥
ಪದಗಿನಿಂ ಮೇಚಕಿತಮೆಂದಿನಿಸಲೀಕ್ಷಿಸುತ ।
ಮುದದಿಂ ಕುವಾಲಂಗಳುಂ ನಲಿವವೆಂಬಂತೆ ।
ಚದುರನೇತ್ರಗಳತಿವಿಕಾಸಕರಮಾಗಿರ್ದವತಿಶಯದೊಳಾ ಕಾಂತೆಗೆ ॥ (3)

ಮೂರುಲೋಕಗಳ ತನ್ನುದರದೊಳಗಿರಿಸಿರ್ಪ ।
ಮಾರನಯ್ಯನ ತನ್ನೊಳಿಂಬಿಟ್ಟ ಕತದಿ ಸೊಂ ।
ಪೇರಿ ಬರೆ ಮುಮ್ಮೂರ್ತಿಗಳು ತದೈಕ್ಯತೆಯಾದರೆಂಬಂತೆ ಮೂರೇಖೆಗಳ್ ॥
ತೋರದಾ ಗರ್ಭದೊಳಗಡಗಿದುವು ನಾಭೀಸ ।
ರೋರುಹವು ತನ್ನೊಳಿಹ ಪರಬೊಮ್ಮನಂ ಜಗಕೆ ।
ತೋರುವಂದದೆ ಗಾಢಮಾದುದಚ್ಚರಿಯೆನಲ್ಕಾ ಮಾನಿನೀರನ್ನೆಗೆ ॥ (4)

ವಳಿಗಳುಂ ಮಾಜಿದುವು ಒಪ್ಪದಿಂದಾಸ್ಯ ಶಶಿ ।
ಕಳೆಯನಂಗೀಕರಿಸೆ ನಾಭಿಕುಳಿಯುಂ ಪರಿಯೆ ।
ನಳಿನಕುಟ್ಮಳಸನ್ನಿಕಾಶ ವಕ್ಷೋರುಹಗಳಗ್ರಿಮಂ ನೀಲಮಣಿಯ ॥
ಪೊಳಪೆನಲ್ಕಳೆಯೆನಿಸೆ ಬೆಳೆಯೆ ಪಿಡಿನಡು ಕಣ್ಗೆ ।
ಎಳೆಮುತ್ತಿನಂತೆಸೆಯೆ ಬೆಮರ್ವನಿ ಕಪೋಲಂಗ ।
ಳೊಳು ಮನಂ ಮಾಂದ್ಯತೆಯನಾಂತುದಾ ತನ್ವಿಯಳಿಗತುಳಗರ್ಭೋದಯದೊಳು॥

ಪಿಡಿನಡುವುಪೊಡೆಯು ಕೊಡಮೊಲೆಜಘನ ಮುಂಬರಿಯೆ ।
ಪಿಡಿಯೆ ಚೂಚುಕಕುಂತಳಗಳು ಕಡುಕಪ್ಪಿಸೆಯೆ । [ದೊಳೆಸೆಯೆ ॥
ತುಡುಕೆ ನಡು ತನುಗಳುಂ ಬಳಲಿಕೆಯ ಬಯಕೆಯುಂ ಪೆರ್ಚುತತಿಶಯ
ಸಡಗರದಿ ಬಡಬಾಸೆ ಸೂತ್ರಪಿಡಿದಂತೆಸೆಯೆ ।
ತುಡುಕಿ ಗಲ್ಲಗಳು ಕೈಪಿಡಿಯ ಬೆಡಗಾಂತೆಸೆಯ ।
ಲಡಿಗಡಿಗೆ ಶೃಂಗಾರರಸವು ಬೇರೂರಿದಂತಾಗಿ ಸರ್ವಾಂಗ ನಲಿಯೆ ॥ (6)

ತ್ರಿದಶಾರಿಧೂಮಕೇತುವನು ಪೊಡೆಯೊಳಗಾಂತ |
ವಿಧುಮುಖಿಗೆ ಪೆರ್ಚಿತ್ತು ಪಿಡಿನಡುವು ಶ್ರೀರಾಜ |
ಪದಪಯೋಜಾತದವಲಂಬನಾಸಕ್ತರಿಗದೆಲ್ಲಿಹವು ಬಡತನಗಳು ||
ಚದುರಿನಿಂದ ನಿತಂಬಚಕ್ರ ಭೂಚಕ್ರಕ್ಕೆ |
ಸದನಮೆನಲೆಸೆಯಲ್ಕೆ ಮೆಲ್ಲಮೆಲ್ಲನೆ ತೊಟ್ಟ |
ಪದಕಟಕಭೂಷಣಂಗಳು ಪ್ರೋಷಿತಗಳಾದವಾ ಕಾಂತೆಗತಿಶಯದೊಳು || (7)

ಮಲ್ಲಿಗೆಯ ಜೊಲ್ಲೆಯಂ ಮೊಲ್ಲೆಯ ಮುಗುಳ್ಗಳಂ |
ಪುಲ್ಲಕಾಂಚನಮಾಲೆ ಸಾರಸದ ಸರಗಳಂ |
ಸಲ್ಲಲಿತಪಕ್ವಫಲರಸಸಾರದಭಿಕಾಂಕ್ಷೆ ಮುಂಬರಿದು ಪೆರ್ಚಿಬರಲು ||
ಚಲ್ಲೆಗಣ್ಣಬಲೆಯರು ಚಂದನವನಣ್ಪಿಟ್ಟು |
ಮುಲ್ಲಾಸದಿಂ ದಿವ್ಯಭೂಷಣಂಗಳನು ಭೂ |
ವಲ್ಲಭನ ವಲ್ಲಭಗಲಂಕರಿಸಿ ನೋಡುತಲೆ ಹಿಗ್ಗಿದರು ನಡೆನುಡಿಗಳಿಂ || (8)

ನೀಲವರ್ಣವನಾಳೆ ವಾಸೆಯಾಶೆಯೊಳು ನಡು |
ಮೇಲೆನಿಸಿ ಪೊಂಗಿದುದು ಪಿಗ್ಗಿಬರೆ ಕುಚಗಳುಂ |
ಲೀಲೆಯಿಂ ಮೊಗಬೆಳ್ತುದಡಿಗಡಿಗೆ ವಳಿಗಳುಂ ಸಮನೆನಿಸಿ ಸೌಖ್ಯತೆಯೊಳು ||
ಮೇಲೆ ನಡೆನುಡಿಯುಂಗಲತೆ ಗಜ್ಜುಗೊಂಡುದಿ - |
ನ್ನಾ ಲತಾಂಗಿಯ ಗರ್ಭಚಿಹ್ನೆ ಶಶಿಲೇಖೆಯಂ |
ತಾಳಿರ್ದ ಪೌರುಹೂತಿಯ ಗರ್ಭಲೀಲೆಯನ್ನಾಳಿದುದನೇವೇಳ್ವೆನು || (9)

ಪರಬೊಮ್ಮಗರ್ಭ ನಿರ್ಭರ ಪ್ರಕೃತಿಯೆಂಬಂತೆ |
ಸಿರಿಗರ್ಭಮಾದಾಜ್ಞೆಯಂತೆ ಸಲ್ಲಾಲಿತ್ಯ |
ಕರಪ್ರಪಂಚದ ಗರ್ಭ ಸೃಷ್ಟಿಯಂದದಿ ಯಜ್ಞಗರ್ಭ ಪಳೆವಾತಿನಂತೆ ||
ಮೆರೆವ ಸತ್ಯಾಚಾರಗರ್ಭ ಸ್ಮೃತಿಯಂದದಿಂ |
ವರವಿವೇಕದ ಗರ್ಭಮೆನಿಪ ವಿದ್ಯೆಯ ತೆರದಿ |
ಸುರುಚಿರದ ಸುಜ್ಞಾನಗರ್ಭ ಸನ್ಮತಿಯಂತೆ ಭಾಸಿಸಿದಳಾ ಕಾಂತೆಯು || (10)

ನೋಡಲಾಖ್ಯಾಯನದ ಗರ್ಭ ಸಂಸ್ತುತಿಯಂತೆ |
ಕೂಡೆ ಹೋಮದ ಗರ್ಭ ಸ್ವಾಹ ನಿಜಮೆಂಬಂತೆ |
ಸೂಡಿರುವ ಫಣಿಗರ್ಭ ಜಾಯೆಯಂದದೊಳಗ್ನಿಗರ್ಭಮಾ ಧರಣಿಯಂತೆ ||
ಆಡಲಸದಳ ಪ್ರಭಾವದ ಗರ್ಭಶಕ್ತಿಯೋ |
ಲ್ಮೂಡುವಾನಂದಗರ್ಭದ ಲೀಲೆಯಂದದಿಂ |
ನಾಡೊಡೆಯನರಸಿ ಕೌಸಲೆಯು ರಾರಾಜಿಸಿದಳೇನೆಂಬೆ ರತಿಯೆಂಬೊಲು || (11)

ಗುರುನಿತಂಬದ ಭಾರ ಗುರುಕುಚಂಗಳ ಭಾರ |
ಗುರುಕೇಶಪಾಶಭರ ಗುರುತರೋರುದ್ವಯದ |
ಭರದಿಂ ಸ್ವಭಾವಿತದ ಮಂದಗಮನವನಾಂತ ಕಾಂತಾಶಿರೋರನ್ನೆಗೆ ||
ವರಚತುರ್ದಶಭುವನದರಸನನ್ನುದರದೊಳ್ |
ಧರಿಸಿರ್ಪ ಗರ್ಭನಿರ್ಭರದ ದುರ್ಭರದಿಂದೆ |
ಮೆರೆದುದತಿಮಂಜುಳದ ಗತಿ ಮಾಂದ್ಯಮೆಂದೆನಿಸಿತೇವೇಳ್ವೆ ಸಂಭ್ರಮವನು || (12)

ಗುರುಕಬರಿ ಕುಸುಮದುರ್ವಹಮೆನ್ನಲಂಬಕಂ |
ಧರಿಸದಿರಲಂಜನವ ವಕ್ಷೋರುಹಂಗಳುಂ |
ಸಿರಿಕರದ ಮಕರಿಕಾಪತ್ರಮುರುಭರಮೆಂದು ಸುಪ್ಪಾಣಿಮಾಲಿಕೆಗಳ ||
ಧರಿಸದಾದುದು ಗಳಂ ವರಕಟಕಮಂಜೀರ |
ಸುರುಚಿರದ ಭೂಷಣಕ್ಕಲಸೆ ಕರಚರಣಂಗ |
ಳರಸಿಯಂತರ್ವತ್ನಿಯೆನಿಸಿದ ಬೆಡಂಗದೇಂ ವರ್ಣಿಸಲ್ಕಳವಪ್ಪುದೇ || (13)

ಇಂತು ಕೌಸಲೆ ಗರ್ಭಚಿಹ್ನೆಯಿಂ ರಾಜಿಸಿದ |
ಳಂತೆ ಕೈಕಾಸುಮಿತ್ರೆಯರಿರ್ವರುಂ ಮನೋ |
ಕಾಂತಮೆನೆ ಸದುಹೃದಸುಲಕ್ಷಣಗಳಿಂದೆಸೆಯಲವರಾನನೇಂದುಗಳನು ||
ಪಂತಿರಥನಂಬಕಚಕೋರಿಗಳು ನೋಡುತಂ |
ಸಂತಸಂಗೊಂಡು ಹಿಗ್ಗಿದುವು ಸುಧೆಗಂಡಮರ |
ರಂತೆ ನಿಃಸ್ವಗೆ ನಿಧಿಯ ಬೀಡು ಕೈಸಾರ್ದಂತೆ ಪತಿಯು ಕಂಡಂಗನೆಯೊಲು || (14)

ಅರುದಿಂಗಳಾಗಲನ್ನೆಗ ಸಚಿವರರಸಿಯರು |
ಭರದಿಂದಲೈತಂದು ಕಲಸೋಗರವನಿಟ್ಟು |
ಪರಿಪರಿಯ ಭೂಷಣಂಗಳ ತೊಡಿಸಿ ದಿವ್ಯಾಂಬರಗಳನುಡಿಸುತ್ತ ಮುದದಿ ||
ತುರುಬಿಂಗೆ ಕುಸುಮಮಾಲೆಗಳಲಂಕರಗೈದು |
ಕರಮೆಸೆವ ಚಂದನವನಣ್ಪಿಟ್ಟು ಕತ್ತುರಿಯ |
ಗುರುಕುಚಂಗಳಿಗೆ ಸಿಂಗರಗೈದು ಪಾಡುತಂ ಪರಸಿದರ್ಪದುಳದಿಂದೆ || (15)

ಶರದಬ್ಜಮುಂ ತಾಳ್ದುದಾನನಂ ಜಘನ ಭೂ |
ಧರವನುಂ ಸೆರೆಗೊಂಡು ಪುಂಡರೀಕಂಗಳುರು |
ಪರಿಮಳಕೆ ಮುಂಡಿಸಿದ ತುಂಬಿಗಳ ಸಂಭ್ರಮವನಾಂತೆಸೆಯೆ ಚೂಚುಕಗಳು ||
ಸರಸದಿಂದಂಗಲತೆ ಕರಮೆಸೆಯೆ ಗಮನ ಸುಂ |
ದರಮರಾಳದ ಗತಿಯ ಕೆಳೆಗೊಳ್ಳೆ ಸವಿನುಡಿಗ |
ಳಿರದೆ ಮೃದುತರಮಾಗೆ ತನು ಬಳಲ್ಕೆಗಳಲ್ಲಿ ನೆಲಸಿದವು ದಿನದಿನದೊಳು || (16)

ಈ ಪರಿಯ ಶುಭವಿಭವವೃದ್ಧಿಗನುವೃದ್ಧಿಯೆನ |
ಲಾ ಪುರಂಧ್ರಿನಿಯರಿಗೆ ಗರ್ಭ ಪೆರ್ಚುಗೆಯಾಗೆ |
ಶ್ರೀಪತಿಗಧಿಷ್ಠಾನಮೆನಿಪ ಕೌಸಲ್ಯೆಗುಂ ನವಮಾಸಮುಂ ತುಂಬಲು ||
ತಾಪೋಪಹರಗೈಯುಲಮುರಮನುಮುನಿವರರ |
ಭೂಪಾಲಕುಲ ಪವಿತ್ರತೆಯಾಂತು ಕುಡಿವರಿಯ |
ಲಾ ಪರಮಪುರುಷ ಜಗತೀತಳದಲವತರಿಸೆ ಕರುಣದಿಂದಿಚ್ಛೆಗೆಯ್ಯೆ || (17)

*ತಿಂಗಳುಗಳೊಂಬತ್ತು ಹಿಂಗುತಿರೆ ಪತ್ತನೆಯ |
ತಿಂಗಳೊಳ್ ಸಿತನವಮಿ ಸೌಮ್ಯವಾಸರದಲ್ಲಿ |
ತುಂಗಮೆನಿಸಿರೆ ಸೂರ್ಯನಂಗಾರಕಂ ಧಿಷಣ ಕವಿ ಸೌರಿಯೊಂದೆನಿಸುತ ||
ಸಂಗಡಿರೆ ಗುರುಚಂದ್ರರಾದಿತ್ಯ ಮೇಷದಿ ಬಿ |
ಡಂಗಿನಿಂದಿರೆ ಪುನರ್ವಸುಋಕ್ಷ ಕರ್ಕಟಕ |
ಶೃಂಗದತಿಶುಭಲಗ್ನದಲ್ಲಿ ಮಧ್ಯಾಹ್ನದೊಳ್ ಕರೆಯೆ ಪೂಮಳೆಯ ಸುರರು|| (18)

ಜನಿಸೆ ಕೌಸಲೆಯ ಬಸುರೊಳಗಖಂಡಾನಂದ |
ಮೆನಿಪ ತೇಜೋರಾಶಿಯಜ್ಞಾರಿಗದೆಯಭಯ |
ಮಿನುಗುತಿಹ ಕರಚತುಷ್ಟಯದಿಂದ ಕರಕಂಕಣಂ ಮಕುಟ ಶ್ರೀವತ್ಸವ ||
ನನುಕರಿಪ ಹಾರ ಕೇಯೂರಕುಂಡಲಮುಖ್ಯ |
ಘನಭೂಷಣಂಗಳಿಂ ಮಿಸುಪ ಪೀತಾಂಬರದ |
ಘನನೀಲನಿಭಕಾಯ ಮುನಿಮಾನಸನಿಕಾಯ ನೆನೆವರಿಷ್ಟಾರ್ಥದಾಯ || (19)

ಹರಿನೀಲನಿಭತನೂಭಾಸದಿಂ ಹಾಸದಿಂ |
ವರಶಂಖಲಾಂಛಿತಸುಹಸ್ತದಿಂ ನ್ಯಸ್ತದಿಂ |
ಮಿರುಪ ಪೀತಾಂಬರದ ಭಾಸಾನ್ನಿಧಿಯನಲೆಯುತಿರೆ ಸುರವರರ ಸಂತತಿ ||
ಕರೆವ ಪೂಮಳೆಗಳಾಸಾರದಿಂ ತೋರದಿಂ |
ಮೊರೆವ ಸುರದುಂದುಭಿಯ ಘೋಷದ ಸುವೇಷದಿಂ |
ಮೆರೆವ ಮುನಿಗಾಂಧರ್ವನಾಯಕರಗಾಯಕರ ನುತಿಗಳಿಂ ಹರಿ ಮೆರೆದನು|| (20)

---

* ತತೋ ಯಜ್ಞೇ ಸಮಾಪ್ತೇತು ಋತೂನಾಂ ಷಟ್ಸಮತ್ಯಯುಃ||
ತತಶ್ಚ ದ್ವಾದಶೇ ಮಾಸೇ ಚೈತ್ರೇನಾವಮಿಕೇ ತಿಥೌ || ೮ ||
ನಕ್ಷತ್ರೇದಿತಿ ದೈವತ್ಯೇಸ್ವೋಚ್ಚ ಸಂಸ್ಥೇಷು ಪಂಚಸು ||
ಗ್ರಹೇಷು ಕರ್ಕಟೇಲಗ್ನೇ ವಾಕ್ಪತಾವಿಂದುನಾಸಹ || ೯ ||
ಪ್ರೋದ್ಯಮಾನೇ ಜಗನ್ನಾಥಂ ಸರ್ವಲೋಕ ನಮಸ್ಕೃತಂ ||
ಕೌಸಲ್ಯಾಜನಯದ್ರಾಮಂ ಸರ್ವಲಕ್ಷಣಸಂಯುತಂ || ೧೦ ||
(ವಾ. ರಾ.—ಬಾಲಕಾಂಡ—ಅಷ್ಟಾದಶಸ್ಸರ್ಗ)

ನೋಡಿದಳು ಕೌಸಲ್ಯೆ ನಿಜಸುತನ ಲೀಲೆಯಂ ।
ಮೂಡಿಬಹ ದಿನನಾಥಸಾರಸಸುದೀಧಿತಿಯ ।
ಬೀಡೆನಿಪ ಮಣಿಮುಕುಟಶಂಖಚಕ್ರಾಬ್ಜವನಮಾಲಾವಿಲಾಸದಿಂದೆ ॥
ಕೂಡೆ ಶ್ರೀವತ್ಸಕೌಸ್ತುಭಚಿತ್ರಭೂಷಣದ ।
ರೂಢಿಯಂಗಾಂಗದೊಳಗಿರ್ಪ ಮೂಲೋಕಗಳ ।
ಪ್ರೌಢಿಯಿಂ ಜಘನದಲ್ಲೆಸೆವಬ್ಧಿಶೈಲಂಗಳಿರವಿನತಿಶಯದ ಬೆಡಗ ॥ (21)

ಅಂಬಕಗಳಲಿ ಚಂದ್ರಸೂರ್ಯರಂ ಘ್ರಾಣದಲಿ ।
ಸಂಭ್ರಮಿಪ ಮಾರುತನ ನಾಭಿಯಲ್ಲಿಹ ವಿಧಿಯ ।
ಬೆಂಬಿಡದೆ ಶ್ರುತಿಗಳೊಳು ಮೆರೆವ ದಶದಿಕ್ಕುಗಳ ಶ್ವಾಸಗತವೇದಂಗಳ ॥
ಅಂಬರವನೆಳನಗೆಯ ಮಾಯೆಯಲಿ ಭುವನಗಳ ।
ಡೊಂಬಿ ಬ್ರಹ್ಮಾಂಡಶತಕೋಟಿ ರೋಮಂಗಳಲಿ ।
ತುಂಬಿರಲು ದೇವರ್ಷಿಬ್ರಹ್ಮರುದ್ರಾದಿಗಳ ಕಂಡಳಾ ಪರಮೇಶನೊಳ್ ॥ (22)

ಕಂಡು ವಿಸ್ಮಿತಳಾದಳಾಗಲಾ ಕೌಸಲ್ಯೆ ।
ಖಂಡಶಶಿಧರ ಭಾರತೀರಮಣ ಸಪ್ತಾರ್ಚ್ಯ ।
ಖಂಡತೇಜೋರೂಪ ದೃಕ್ಮನೋವಾಕ್ಯಗಳ ದೂರ ಭವದೂರ ಹರನ ॥
ಮಂಡೆಯನ್ನೊಲೆದು ನುತಿಗೈದಳೆಲಿ ದೇವ ಬ್ರ-।
ಹ್ಮಾಂಡಭಾಂಡೋದರಪರಾತ್ಮಾಚ್ಯುತಾನಂತ ।
ಪುಂಡರೀಕಾಕ್ಷ ಪುರುಷೋತ್ತಮ ನಿಜಾನಂದ ನಿರಘ ನಿರ್ಮುಕ್ತನೆನುತ ॥ (23)

ಆದಿಪುರುಷನೆ ಪರಾತ್ಪರ ನಿಮ್ಮ ಮಾಯೆಯಿಂ ।
ದೀ ಧರೆಗಳೆಲ್ಲಮಂ ಸೃಜಿಸಿ ರಕ್ಷಿಸುತರಿದು ।
ವೋದದಿಂದೊಂದನಂಟದೆ ಮನೋಬುದ್ಧ್ಯಾದಿಗೋಚರಂ ನೀನಲ್ಲದೆ ॥
ಭೇದವಿರಹಿತಮೆನಿಸಿ ಸತ್ಯವಾಗಕಲಂಕ ।
ನೀ ದಯಾಂಬುಧಿ ಜ್ಞಾನಮೂರ್ತಿ ಸತ್ತಾಮಾತ್ರ ।
ಬೋಧನೆಂದೆನುತ ವೇದಾಂತವಿಜ್ಞಾನಗಳನೇಕಪರಿಯಿಂದನುದಿನ ॥ (24)

ನೋಡುತಿಹೆ ನೋಡದಿಹೆ ನಡೆವೆ ನಡೆಯದಲಿಪ್ಪೆ ।
ಮಾಡುತಿಹೆ ಮಾಡದಿಹೆ ಚರಿಪೆ ಚರಿಸದೊಲಿರ್ಪೆ ।
ನೋಡಲಾ ಪ್ರಾಣೋಹ್ಯ ಚಿತ್ತವಿಜ್ಞಾನಾದಿ ಶ್ರುತಿನುಡಿಗಳಂ ನೋಳ್ಪರೆ ॥
ಕೂಡೆಲ್ಲ ಭೂತಗಳೊಳಿರ್ದು ಕಾಣಲ್ಪಡುವೆ ।
ಗೂಢನೆಂದೆನಿಪ ಚಿನ್ಮಯನೆನ್ನ ಗರ್ಭದಲಿ ।
ಮೂಡಿ ಬಂದಿಹನೆಂದು ಲೋಗರ ವಿಡಂಬಿಸುವೆ ನಿರುಪಮಾನಂದಾಬ್ಧಿಯೆ ॥ (25)

ಕರುಣನಿಧಿ ಶರಣರಂ ಪೊರೆವ ಬಿರುದಾಂಕ ಶಂ ।
ಕರನೆ ಪತಿಪುತ್ರಗೃಹಧನಧಾನ್ಯಮೆಂಬ ಸಂ ।
ಕರದ ಬದ್ಧಿಯೊಳು ಕಡುನೊಂದು ಬೇಗದಿ ನಿಮ್ಮ ಚರಣಗಳನಾಶ್ರಯಿಸದೆ ॥
ಮರೆಸುತಿದೆ ನಿಜಮಾಯೆ ಮೂರು ಲೋಕಂಗಳಂ ।
ಪರಮ ಋಷಿಗಳನವಿದ್ಯೆಯು ಸೋಂಕದಂತೆನ್ನೊ ।
ಳಿರಿಸು ತದ್ರೂಪಮಂ ಸತತಮೆಡೆವಿಡದಿರಲಿ ಮಾನಸಂ ತತ್ಪದದಲಿ ॥ (26)

ಆರು ನೋಡುವರೀ ಮಹಾರೂಪಲೌಕಿಕಂ ।
ಧೀರ ಭ್ರಾಂತಾಪಹರಚಿತ್ತರಲ್ಲದೆ ದೇವ ।
ತೋರುವದು ಬಾಲಭಾವವ ಲಾಲನಾದಿಗಳನೆಸಗಿ ಸಂಸಾರಾಬ್ಧಿಯ ॥
ಪಾರಮಂ ಕಂಡಪೆನೆನಲ್ಕೆ ಕೌಸಲೆಯಲೀ ।
ಕಾರಣಿಕ ಹರಿದಯದೊಳೆಂದ ಲಾಲಿಸು ಜನನಿ ।
ಸಾರಸಾಸನನೆನ್ನ ಪ್ರಾರ್ಥಿಸಿದ ಭೂಭಾರಹರಣಮಂ ಗೈವುದೆನುತ ॥ (27)

ಸರಸಿಜೋದ್ಭವನಿಗೋಸುಗವಾನು ನರರೂಪ ।
ಧರಿಸಿ ದಶಕಂಧರನ ತರಿವಡೈತಂದೆ ಭಾ ।
ಸ್ಕರನ ಕುಲದರಸ ದಶರಥನಿಂದ ನಿನ್ನಿಂದಲಾಂ ಪೂರ್ವಪೂಜೆಯೊಳಗೆ ॥
ಪರಿಪರಿಯ ತಪದಿಂದ ಪುತ್ರನಹುದೆಂದೆನುತ ।
ಉರುತರದಿ ಪ್ರಾರ್ಥಿಸಿದಿರದರಿಂದ ಗರ್ಭಸಂ ।
ಚರನೆನಿಸಿ ಮನದಿಷ್ಟಗಳನಿತ್ತೆನಿದು ನನ್ನಿ ಪೂರ್ವತಪಸಿಂಗೆ ಬೆಳಸು ॥ (28)

ಎನ್ನ ದರ್ಶನವು ಜೀವನ್ಮುಕ್ತರಿಂಗಪ್ಪು ।
ದನ್ಯರಿಗೆ ದುರ್ಲಭಂ ಕೇಳೆನ್ನ ಸದ್ಭಾವ ।
ಮನ್ನಾವ ಪುಂಸನುಂ ಬರೆದೋದಿ ಕೇಳಿದಡೆ ಮುಕ್ತನಹನಂತ್ಯದಲ್ಲಿ ॥
ಎನ್ನ ನಾಮವು ದೊರೆವುದೆಂದೊರೆದು ಶ್ರೀವತ್ಸ ।
ಮುನ್ನಿನಾಕೃತಿಯುಳಿದು ಬಾಲಭಾವವ ತಾಳ್ದು ।
ನನ್ನಿಯಿಂದಿರಲೆತ್ತಿ ಮೊಲೆಯೂಡಿ ನೋಡುತಂ ನಲಿದಳಾ ಕೌಸಲ್ಯೆಯು ॥ (29)

ಅರಸನೀ ವಾರ್ತೆಯಂ ಕೇಳಿ ಸಂಭ್ರಮದಿಂದ ।
ಲಿರಲು ಮರುದಿವಸ ಚಕ್ರಾತ್ಮಕಂ ಶಿಶುರೂಪ ।
ವೆರಸಿ ಕೈಕಾಸತಿಯೊಳುದಿಸಿದಂ ವರಪುಷ್ಯರಾತ್ರಿಯೊಳ್ ಝುಷಲಗ್ನದಿ ॥
ಉರಗರಾಜಂ ಶಂಖಮೆರಡಾ ಸುಮಿತ್ರೆಯೊಳ್ ।
ಭರದಿಂದ ಡಿಂಭಕರ ತೆರದೊಳವತರಿಸಿದರ್ ।
ಸಿರಿತಾರೆ ಸಾರ್ವವು ಕುಳೀರಶುಭಲಗ್ನದೊಳ್ ಸುರರು ಭುಲ್ಲವಿಸುವಂತೆ ॥ (30)

ಮೂವರರಸಿಯರು ಬೆಸಲಾದ ವಾರ್ತೆಯ ಕೇಳಿ ।
ಸಾವಧಾನದೊಳರಸ ಸಕಲವಸ್ತುಗಳನ್ನು ।
ಠೀವಿಯಿಂ ತರಿಸಿ ಭೂಸುರತತಿಯ ಪೂಜಿಸಿದನಂದು ಪುತ್ರೋತ್ಸವದೊಳು ॥
ಪಾವಕೋಪಮವಸಿಷ್ಠರ ಮತವನನುಕರಿಸಿ ।
ಕೋವಿದರು ಮೆಚ್ಚುವೊಲ್ ಭೂಹಿರಣ್ಯಾದಿಗಳ ।
ನೋವಿ ಮನಬಂದಂತೆ ಕೈದಣಿಯಲಿತ್ತನಾನಂದಾಬ್ಧಿಯೊಳಗಾಳುತೆ ॥ (31)

ಪತ್ತುದಿನಮಾಗಲರ್ಭಕರಿಂಗೆ ದಶರಥನೃ ।
ಪೋತ್ತಮಂ ಗುರುವಸಿಷ್ಠಾದಿ ದ್ವಿಜರಂ ಕರೆಸು ।
ತುತ್ತರೋತ್ತರವೃದ್ಧಿಗೋಸ್ಕರದಿ ಶುಭನಾಮಕರ್ಮಂಗಳಂ ಮಾಳ್ಪರೆ ॥
ಬಿತ್ತರದಿ ಗೋಭೂಹಿರಣ್ಯಗಜಹಯರತ್ನ ।
ವಿತ್ತಂಗಳಂ ವಿಪ್ರತತಿಗಿತ್ತು ವಂದಿಸುತ ।
ಮತ್ತೆ ದ್ವಿಜಸತ್ತಮರ ಪರಕೆಯಂ ಕೈಕೊಂಡು ಮಿತ್ರನೊಲ್ಭಾಷಿಸಿದನು ॥ (32)

ವರವಸಿಷ್ಠಮುನೀಶ ತರಳರಿಗೆ ನಾಮಗಳ ।
ವಿರಚಿಸುವೆನೆಂದಾಗಮೋಕ್ತದಿಂ ಯಮಿಜನರ ।
ಸರಿಸದೊಳಗಿಂತೆಂದ ಸ್ಮರಣೆಮಾತ್ರದಿ ಸಕಲಜನರ ಭವತಾಪಗಳನು ॥
ಪರಿಹರಿಸಿ ಮುಕ್ತಿಯಂ ಕರುಣಿಸುವನನುದಿನಂ ।
ಗಿರಿನಿವಾಸಸ್ಥಾನ ಸಾಸಿರ ಸುನಾಮಗಳ ।
ಗುರುವೆನಿಪ ಕತದಿಂದ ಶ್ರೀರಾಮನೀತನಹನಿದು ಪುರಾತನಸಮ್ಮತ ॥ (33)

ಸತ್ತುಚಿತ್ತಾನಂದ ನಿತ್ಯಪರಿಪೂರ್ಣ ಮುನಿ ।
ಪೋತ್ತಮರ ಚಿತ್ತನಿಲಯೋತ್ತಮಂ ರಮಿಸುತಿಹ ।
ಸತ್ಯ ಸಹಜಾನಂದ ಪರಬೊಮ್ಮ ರಘುಕುಲದೊಳವತರಿಸಿ ನರನೆನಿಸಿಯೆ ॥
ಉತ್ತಮರ ಪಾಲಿಸುತ ಮೂಲೋಕಕಂಟಕರ ।
ಮೊತ್ತಂಗಳಂ ಸೀಳೆ ಮಾನವರೊಳೆಸೆವ ಪುರು ।
ಷೋತ್ತಮಗೆ ಬಿತ್ತರದ ನಾಮ ಶ್ರೀರಾಮನೆಂದಿದುವೆ ಶ್ರುತಿತತಿಸಮ್ಮತ ॥ (34)

ಮರೆದೊಮ್ಮೆ ರಾಯೆನಲ್ ಭರಿತಪಾತಕನಿಚಯ ।
ಪೊರಡುವದು ಬಾಯಿಂದ ಮಗುಳೆ ಪೊಗದಂದಿನಿಂ ।
ನರಕಪಾಟೋಪಮು ಮಕಾರಮುದರಿಂ ರಾಮುನಾಮುನೊಪ್ಪಿರಲೀತನ ॥
ಸ್ಮರಿಸಿದವನೇ ಧನ್ಯ ಮಾನ್ಯ ಪುಣ್ಯಶ್ಲೋಕ ।
ನಿರತಸುಖಿ ಸುಜ್ಞಾನಿ ಯೋಗಿ ಸತ್ಕುಲವಂತ ।
ಪರಮಪಾವನ ಪಾಪದೂರ ಸತ್ಯಾಚಾರ ಸದಯ ಜೀವನ್ಮುಕ್ತನು ॥ (35)

ಚೋರನಾಗಲಿ ಪಾಪಕರ್ಮಿಯಾಗಲಿ ದುರಾ |
ಚಾರಪರನಾಗಿ ಚಾಂಡಾಲೀಪರಾಂಗನೆಯ |
ಬೇರೂರಿ ಪುಲ್ಕಸಪುಳಿಂದಿಪಶ್ಚಾದ್ಯಾದಿಸ್ತ್ರೀಸಮಾಗಮಿಯಾಗಲಿ ॥
ಪಾರುವರ ವಸ್ತುಗಳನಪಹರಿಸಿ ಪರವಿತ್ತ |
ಹಾರಿ ವರ್ಣಾದಿಕಾಂಗನೆಯ ಸಂಗಗಳುಳ್ಳ |
ರಾರಾದಡೆಯು ರಾಮನಂ ನೆನೆಯೆ ಭವದೂರರಪ್ಪರಿದು ನಿಗಮೋಕ್ತವು ॥ (36)

ಪಿಸುಣ ಹಿಂಸಾತ್ಮಕ ವಿರುದ್ಧಕರ್ಮಾಚಾರ |
ವಸುಮತೀಸುರಹತಕ ಗೋಹತ್ಯಮುಂ ಚೌರ್ಯ |
ಪೊಸತೆನಿಸುವಾ ಸುರಾಸೇವನಂ ಗುರುತಲ್ಪಗಮನಾದಿಪಾಪನಿಚಯ ॥
ಬೆಸುಗೆಗಾಸ್ಪದನಾದನಾವನಾಗಲಿ ರಾಮ |
ಕುಶಲತೆಯ ಸಿರಿನಾಮಮಂ ನೆನೆದಮಾತ್ರದಲಿ |
ನಶಿಸಿಯಘತತಿಯಾತ ಪೂತಾತ್ಮನಪ್ಪನಿದು ಸಂಸಿದ್ಧ ತ್ರಿಭುವನದೊಳು ॥ (37)

ಎಡೆವಿಡದೆ ಶ್ರೀರಾಮರಾಮರಾಮಾಯೆಂಬ |
ನುಡಿಯ ನಿರ್ಲಜ್ಜೆಯಿಂ ಶ್ರದ್ಧಾನಿಯುಕ್ತದಿಂ |
ದಡಿಗಡಿಗೆ ಜಪಿಸುತಿಹನು ಶ್ವಪಚನಾದೊಡಂ ಸರ್ವರೊಳಗುತ್ತಮನಲೆ ॥
ಪೊಡವಿಯೊಳಗಾತನೇ ವಿರಜ ಶಾಂತಂ ಕುಲಜ |
ಸಡಗರದ ಯೋಗಿ ಸತ್ಯಾಚಾರಸದ್ಧರ್ಮ |
ದೊಡವೆರೆದನೆಂದಖಿಳ ಮುನಿಮತಗಳಾಮ್ನಾಯಮತಮಿದುವೆ ತ್ರಿಜಗದೊಳಗೆ ॥

ಸತತ ಶ್ರದ್ಧಾಭಕ್ತಿಯಿಂದೆ ಸಂಭ್ರಮಗೊಳುತೆ |
ನುತಿಸುತಿರೆ ರಾಮನಾಮಂಗಳನ್ನೆಡೆವಿಡದೆ |
ಸತಿಸುತರೊಳೊಡವೆರೆದು ಬಾಳ್ದರುಂ ನಿಸ್ಸಂಗಿ ನಿಶ್ಚಿಂತನೆನಿಪನಿದುವೆ ॥
ಶ್ರುತಿಮತವು ಕರ್ದಮದೊಳಿರ್ಪ ಕೀಟಕದಂತೆ |
ಕ್ಷಿತಿಯೊಳುಂ ವ್ಯತ್ಯಸ್ತಮಾಗಿ ಜಪಿಸುತೆ ದಿವ್ಯ |
ಯತಿಯಾದ ವಾಲ್ಮೀಕಿಯುದರಿಂದ ಸಾಸಿರಸುನಾಮಕತಿಶಯಮೆನಿಪುದು ॥ (39)

ವ್ಯತ್ಯಸ್ತಮಾಗಲಿ ಸಮಸ್ತಮಾಗೊಪ್ಪಿರಲಿ |
ನಿತ್ಯದೊಳ್ ರಾಮನಾಮವ ಜಪಿಸಲಾ ಪುರುಷ |
ಸತ್ಯಲೋಕಾಧಿಪ ಸನಂದನಾದಿಗಳಿಂದ ಸಂಸೇವ್ಯನೆಂದೆನಿಪನು ॥
ಮೃತ್ಯುವಂ ಪರಿದು ಭುಕ್ತಿಯ ಕೊಡುಗು ರಾಯೆನಲ್ |
ಸತ್ಯಮುಕ್ತಿಯನೀವುದೈಸಲೆ ಮಕಾರ ಮುನಿ- |
ಸ್ತುತ್ಯ ಶ್ರೀರಾಮಶುಭನಾಮಮಭಯಪ್ರದಂ ಮೂಲೋಕಕಿದು ಸಿದ್ಧವು ॥ (40)

ಮನದ ಚಂಚಲಮುಳಿದು ಮಮತೆಯಿಂ ಶ್ರೀರಾಮ |
ನನು ಭಜಿಸಿದಾತ ರಘುನಾಥನಪ್ಪಂ ಮೌನಿ |
ಜನವರ್ಯರಿರ ಕೇಳ್ವುದೆನುತ ಮಗುಳಿಂತೆಂದನಾ ವಸಿಷ್ಠಾಖ್ಯಮೌನಿ ‖
ವನಜಾಕ್ಷನೀ ವಿಷ್ಣುಮಾಸದೊಳ್ಜನಿತನೆಂ |
ದೆನಿಸಿರ್ದ ಕತದೊಳೀತಗೆ ವಿಷ್ಣುನಾಮ ಸಂ |
ಜನಿತಮಾಗಿರಲೆಂದು ಹರುಷದಿಂದೊರೆದನಾ ಯತಿತಿಲಕ ದಾಶರಥಿಗೆ ‖ (41)

ಪರಿಪರಿಯ ನುಡಿಗಳಿಂ ಸದ್ಭಕ್ತಿರಸಗಳಿಂ |
ವರಮೌನಿ ಸಾಸಿರಸುನಾಮಂಗಳಂ ಸ್ಮರಿಸಿ |
ತರಳಭಾವವ ನೋಡಿ ಹಿಗ್ಗುತಾ ಗೃಹದಿಂದ ಪೊರಮಟ್ಟು ಮರುದಿನದೊಳು ‖
ಹರಿಯ ಕರಭರಣಮಾದುದರಿಂದೆ ಭರತನೆಂ |
ದಿರದೆ ನಾಮವನಿಟ್ಟು ತತ್ಪದದ ಲಕ್ಷಣವ |
ಧರಿಸಿರ್ದ ಕತದಿ ಲಕ್ಷ್ಮಣನೆನುತ ಶತ್ರುಹರ ಶತ್ರುಘ್ನನಾಮನೆನುತ ‖ (42)

ಮುನಿನಾಥನೀ ಪರಿಯ ಜನನಕರ್ಮಂಗಳಂ |
ಮುನಿಜನರು ಮೆಚ್ಚುವಂತೆಸಗಲೀಕ್ಷಿಸುತಾಗ |
ಜನನಾಥನಮಿತಸಂತೋಷಾಬ್ಧಿಯೊಳಗಾಳುತಿರಲಿತ್ತ ಮಾನಿನಿಯರು ‖
ವನಜಾಯತಾಕ್ಷಿಯರ್ ಮಣಿಯ ತೊಟ್ಟಿಲುಗಳಿಂ |
ಘನಗಣಾತೀತಮುಳಿದಿರ್ಪ ಪೊಂಗುಣಗಳಿಂ |
ತೊನೆವಪೋಲುತ್ಸವಂಗೈವರನುನುತಿಗೈವರಾನಂದಸಂದಣಿಯೊಳು ‖ (43)

ಶತಕೋಟಕೃತಮಹಾತೊಟ್ಟಿಲ್ಗೆ ಬಳಿಕೈದೆ |
ಚತುರತೆಯೊಳಪಚಿತಿಯ ಗೈದು ಮಿಗೆ ಶುಭಗೀತ |
ನುತಿಗಳಿಂದೈದೆಯರ್ ತಮತಮಗಲಂಕರಿಸಿ ಪರಮಾತ್ಮ ಶ್ರೀರಾಮನ ‖
ಜತನದಿಂದಿಕ್ಕಿ ಬಜೆಬೆಣ್ಣೆಯಂ ಲೌಕಿಕದ |
ಸ್ಥಿತಿಯಂತೆ ತೂಪಿರಿದು ಒಪ್ಪದಿಂ ಮಲಗಿಸಿಯೆ |
ಸತಿಯರುತ್ಸಾಹದಿಂ ಪಾಡುತ್ತೆ ತೂಗಿದರ್ ಕಲಕಂಠಸುಸ್ವರದೊಳು ‖ (44)

ಜೋಜೋ ಜನಾರ್ದನ ಜಗನ್ಮಯ ಪರಾತ್ಪರನೆ |
ಜೋಜೋ ಪರೇಶ ಪಾವನ ಪರಮಪೂರುಷನೆ |
ಜೋಜೋ ಪಲಾಶಕುಲದಾಹಕಬೃಹದ್ಭಾನು ಶಶಿಸೂರ್ಯಸನ್ನೇತ್ರನೆ ‖
ಜೋಜೋ ಸದಾನಂದ ಮೀನ ಕಮಠಾಕಾರ |
ಜೋಜೋ ವರಾಹ ಶ್ರೀನೃಹರಿ ವಾಮನರೂಪ |
ಜೋಜೋ ವಸುಂಧರಾಧಿಪಗರ್ವಗಿರಿಕುಲಿಶಪರಶುಧರ ರಘುನಾಥನೆ ‖ (45)

ಪೊರೆಯೆ ರಘುಕುಲವನುಂ ಧರಣಿಯೊಳಗವತರಿಸಿ |
ಸಿರಿಕರದಯೋಧ್ಯಾಭಿದಾನಪಟ್ಟಣದರಸ |
ಗುರುತರಳನೆಂದೆನಿಸಿ ಪದಿನಾಲ್ಕು ಲೋಕಮಂ ಕಾವ ಕರುಣಾವನಧಿಯೆ ॥
ದೊರೆಗಳ ಶಿರೋರನ್ನ ನೀನೆನಿಸಿ ಬಾಳೆಂದು |
ಪರಸಿ ರಕ್ಷೆಯನಿಟ್ಟು ಪಾಡುತಾರತಿಯೆತ್ತಿ |
ಪರಮಹರುಷದೊಳೈದೆಯರು ನಿಜಾಲಯಕೈದಲಾನೋದಫಲಿತರೆನಿಸಿ ॥ (46)

ನೆರೆದಿಂಗಳಂತೆಸೆವ ನಗೆಮೊಗದರಳ್ಗಣ್ಣ |
ಳರಿದೆರೆದ ಕಿರುನೋಟ ಸುಳಿಗುರುಳ ನುಣ್ಪಣೆಯ |
ಕೊರಳ ಮೂರೇಖೆಗಳ ಕೋಮಳದ ತನುಲತೆಯ ನಳನಳಿಪ ನಳಿತೋಳ್ಗಳ ॥
ಸಿರಿಹಸ್ತನಖರುಚಿಯ ಮಿಂಚಿಡುವ ಮುಷ್ಟಿಗಳ |
ನರಳಿಸುವ ಗಂಭೀರಪಕ್ಕಗಳ ಪೊಕ್ಕುಳಿನ |
ಸರಸಿಜದ ಪೊಸತೆನಿಪ ಕಿಸಲಯಾಂಘ್ರಿದ್ವಂದ್ವಭಂದದಿಂ ಹರಿಮೆರೆದನು ॥ (47)

ತಳಿರಡಿಗಳಿಂದ ತೊಟ್ಟಿಲನೊದೆವನಡಿಗಡಿಗೆ |
ಜಲಧಿಮೇಖಲೆಯ ಬಾಧಿಪ ಪಂಕ್ತಿಕಂಧರನ |
ಗಳಗಳಂ ಕೊಳುಗುಳದೊಳೆಳೆವಂತೆ ಜನನಿಯಂ ನೋಡುತಂ ಸಯನಂಗಳಿಂ ॥
ನಳಿತೋಳುಗಳ ನಲವಿನಿಂದಮುರತತಿಗಭಯ |
ತುಳುಕುವಂದದಿ ಕರಗಳಾಡಿಸುತ ಡಿಂಭಕರ |
ಪೊಳಪಾಂತು ಮೂರುಲೋಕಗಳ ತನ್ನೊಳಗಿಟ್ಟ ಜಗದೀಶ ಬಾಲನಂತೆ ॥ (48)

ಸುರರಿಗಮೃತವನೆರೆದ ಕರಶಾಖೆ ಮಧುಸಾರ |
ಹರಮೆಂದು ವದನಾರವಿಂದದೊಳಗಳವಡಿಸಿ |
ಹರುಷದಿಂ ಚಪ್ಪರಿಸೆ ಸೂಸುವ ಸುಧಾಸಾರಮೆನೆ ಲಾಲ ಕಣ್ಗೆಸೆದಿರೆ ॥
ವರಚತುರ್ದಶಭುವನ ನಿಜಮಾಯೆಯೊಳ್ ಸಿಲ್ಕಿ |
ಕುರಿಗಳಂತರಿತರಿಯದಿಹರೆನ್ನುತೆಳನಗೆಯ |
ಪರಪುತುಗ್ಗುಗ್ಗೆಂದು ಪರಿಪರಿಯ ಲೀಲೆಯಂ ತೋರುವಂ ಮಾತೆ ನಲಿಯೆ ॥ (49)

ನೋಡುತಾನನವನುಂ ಹಿಗ್ಗುವಳ್ ಮಗುಳೆ ಮೊಲೆ |
ಯೂಡಿಸುತ ಮುಂಡಾಡಿ ತೂಪಿರಿದು ಕಣ್ಗಳಿಗೆ |
ಕಾಡಿಗೆಯ ಪೆರೆನೊಸಲಿನಲ್ಲಿ ಕತ್ತುರಿಬೊಟ್ಟನಿಟ್ಟು ಚಪ್ಪಳೆದಟ್ಟುತ ॥
ಆಡಿಸುವಳೆನ್ನಯ್ಯ ಚೆನಯ್ಯ ಬಾರೆನುತ |
ಮೂಡುವಾನಂದದಿಂದಪ್ಪಿ ಗಲ್ಲವನಲುಗಿ |
ಮಾಡುವಳನೇಕದುಪಚಾರಗಳ ಕೌಸಲ್ಯೆಯಾ ವಿಶ್ವಸೂತ್ರಧರಗೆ ॥ (50)

ಕಿರುಗೆಜ್ಜೆ ಕಟಕಮುಂದುಗೆ ಪಾಡಗಂಗಳಂ |
ಚರಣಯುಗಕಳವಡಿಸಿ ಕನಕಕಟಿಸೂತ್ರಮಂ |
ಮೊರೆವ ಕಿಂಕಿಣಿಗಳಂ ಸರಗೊಳಿಸಿ ಹರಿಮಣಿಯ ಪರಿಪರಿಯೊಳಳವಡಿಸುತ ||
ವರಪುಂಡರೀಕನಖ ಪಾಲ್ಮಣಿಗಳೆಣ್ಣೆಮಣಿ |
ವೆರಸಿ ಕಂಬುಗ್ರೀವದೆಡೆಗಲಂಕೃತಿಗೈದು |
ಸಿರಿಕರದ ಸುಪ್ಪಾಣಿಮುತ್ತುಗಳ ಜಂಪುಗಳನಿಟ್ಟಳಾ ಶ್ರುತಿಯುಮಳಕೆ || (51)

ಮುಂಗೈಯ ಮುರುಗಿಯಂ ಮಣಿಪಾಗು ಪೊನ್ನಮಣಿ |
ರಂಗಗಳ ವಿದ್ರುಮಸಮಿಶ್ರದಿಂ ಮಣಿಬಂಧ |
ಕಂಗಳಿಂ ಶೃಂಗರಿಸಿ ತೋಳ್ತಾರೆಯಂ ಕಟ್ಟಿ ಮುತ್ತಿನರಳೆಲೆಯನಿಟ್ಟು ||
ಅಂಗುಲಿಗಳಿಂಗೆ ಪರಲುಂಗುರಗಳಿರಿಸಿ ಕನ |
ಕಾಂಗದಗಳಾದಿ ಬಲ್ತೊಡಿಗೆ ಬಂಗಾರಗಳ |
ಪೊಂಗುವಾನಂದದಿಂ ಶ್ರೀಪತಿಗಲಂಕರಿಸಿ ನೋಡಿದಳ್ ಪ್ರೌಢಿಯಿಂದೆ || (52)

ಮುದದಿಂದ ಮೊಲೆಯೂಡಿ ಮುಂಡಾಡಿ ತೂಪಿರಿದು |
ಪದಪಿಂದ ರಕ್ಷೆಯನ್ನಿಟ್ಟು ಸಂತಸವಟ್ಟು |
ಚದುರಿಂದ ಕದಪುಗಳ ಚಪ್ಪರಿದು ಪಾಡಿಪವಡಿಸಿದಳಾ ಕಾಂತೆ ಮುದದಿ ||
ಉದಕಮೇ ತೊಟ್ಟಿಲೆಂದೆನಿಸಿ ಭುವನತ್ರಯುವ |
ಪದುಳದಿಂದಲಿ ತಾಳ್ದು ದೇಹಿಗಳ ಸುಕೃತೌಘ |
ಮುದಯಗಳ ನೆರೆತೂಗಿ ನೋಳ್ಪಾತ ಬಾಲಕನೊಳೆಸೆದನಾ ತೊಟ್ಟಿಲೊಳಗೆ|| (53)

ಯಮುನಾಥುನೀಜನಕದಮುನಾಸತೇಜಗಳು (?) |
ಸಮಮಲ್ಲದಳುಕುತಿದೆಯೆಂಬುದಂ ಭೂತಳಕೆ |
ಕ್ರಮದಿಂದ ತೋರಿಸಲ್ವೇಳ್ಕೆತ ನರರೂಪಧರಿಸಿಯಚ್ಯುತ ಬೇಗದಿ ||
ವಿಮಲತರ ದೀಪಮಂ ಪಿಡಿಯಲವ್ವಳಿಸುತಿರೆ |
ಮಮತೆಯಿಂದಂ ಮಾತೆ ಮುಂಬಂದು ಮುದದಿ ಕರ |
ಕಮಲಮಂ ಪಿಡಿದಣುಗ ಜೊತ್ತೆಂದು ನಮಿಸೆಂದು ತರಳಂಗೆ ಬೋಧಿಸುವಳು ||

ಮನದೊಳಗೆ ನಿಜಬಿಂಬ ಪೊಳೆದಮಾತುರದಿಂದ |
ತನುವೆನಿಸಿ ಶೈಥಿಲ್ಯಮುಪ್ಪಂತೆ ಮಾಳ್ಪುದಂ |
ವನಧಿಮೇಖಲೆಯೊಳುಳ್ಳರ್ತಿಳಿಯಲೆಂದು ಹರಿಯೀಕ್ಷಿಸುತ ಕೈಪಿಡಿಯನು ||
ತೊನೆದು ನಖದಿಂದ ಶಿಥಿಲಂಗೈಯಲೆಳಸುತಿರೆ |
ಜನನಿ ಕಂಡತಿಹಾಸವೆಸಗಿ ಮೃದುವಾಣಿಯಿಂ |
ತನಯನಂ ತೆಗೆದಪ್ಪಿ ಚುಂಬಿಸುವಳೇನೆಂಬೆ ಕೃತಪುಣ್ಯದತಿಶಯವನು || (55)

ತೃತಿಯಾಬ್ದಮುಂ ತೀವಲಾಗೈದೆ ವೈದಿಕದೊ |
ಳತಿಶಯದಿ ಚೌಲಮಂ ಮಿಗೆ ರಚಿಸಿ ರಾಮಂಗೆ |
ಪೃಥಿವೀಶ ರಾಜ್ಯದುರು ಭಾರಮಂ ಮರೆದೊಡನೆ ಸಾಯುಜ್ಯಪಡೆದಂದದಿ ||
ಶತಪತ್ರಲೋಚನನ ಸುತನೆಂದು ಮನದೊಳಗೆ |
ಜೊತೆಗೊಳಿಸಿಕೊಂಡಮನು ಬಾಲತ್ವಲೀಲೆಯಂ |
ಸತಿಪತಿಗಳೀಕ್ಷಿಸುತ್ತಾನಂದಭರಿತದಿಂದಿರುತಿರ್ದರೇಂ ಧನ್ಯರೊ || (56)

ಬಲುಪುರಾತನನಾಗಿ ಪ್ರತ್ಯಗ್ರನಾಗಿಹಂ |
ಚೆಲುವ ಭಕ್ತರ್ಗೆ ನಿರ್ವಾಣದಾಯಕನೆಂದು |
ಪಲಬಗೆಯಲೊದರುತಿರೆ ಪಳೆವಾತು ಸತತಲದನೀಕ್ಷಿಸದೆ ಪಿತೃಮಾತೃಗಳ್ ||
ನಲವಿನಿಂದ ನವೀನ ಭಕ್ತನಿರ್ವಾಣ ಶುಭ |
ಕಲಿತನೆಂದೆನಿಸಿರ್ದ ಚಿತ್ರಮೆನೆ ಮುರವೈರಿ |
ಸುಲಲಿತದಿ ಸಹವಾಸದಿಂದಿಪ್ಪವೈ ಗುಣದೊಳಭಿವೃದ್ಧಿ ಮಿಗೆ ಪೊಸತೆನೆ || (57)

ನುಡಿಗಗೋಚರನೆಂದು ನುಡಿವರಮುರಾದಿಗಳು |
ಪೊಡವಿಯೊಳ್ಮನಿಜನಂ ಮುಗುಳೆ ಪೊಂಬೊಂಡೆಯ ನೆಂ |
ದಡಿಗಡಿಗೆ ದೂರುತಿಹರಪವಾದ ಪರಿಹರಂ ಗೈವೆನೆಂದಬ್ಜಾಕ್ಷನು ||
ಬೆಡಗಿನ ತೊದಲ್ನುಡಿಗಳಲಿ ತುಡುಕುತಂಬಿಕೆಯ |
ಸಡಗರದೊಳಕ್ಕಕ್ಕ ಬಾರೈಯ ಜೀಯಯೆಂ |
ದೊಡನಕ್ಷಿಗೋಚರಂ ತಾನೆನಿಸಿ ರಾಜಸಿದ ಮಾನವರ ಶಿಶುಗಳಂತೆ || (58)

ಕೃತಸುಕೃತ ಬೆಳಸೆ ತಾಂ ಬಂದಖಂಡಾನಂದ |
ಕ್ಷಿತಿಯೊಳವತರಿಸಿ ಸಂತತ ಜನನಿಜನಕರಿಂ |
ಗತಿಶಯವ ತೋರುತ್ತ ನಲಿನಲಿದು ಕ್ರೀಡಿಸುತ ಡಿಂಭಕನ ಡಂಭದಂತೆ ||
ರತಿಪತಿಯ ಪಿತ ಭಜಕತತಿಯ ಸಂರಕ್ಷಣೆಗೆ |
ಹಿತಮೆನಿಸಲಿಕ್ಷ್ವಾಕುಪತಿಯ ಸುತನೆಂದೆನಿಸಿ |
ಮತಿಯುತರ ಮಾನಸೋನ್ನತಿಯನೆಸಗುತ್ತಿಹಂ ಶ್ರೀ**ರಾಮನಗರಾಧಿಪಂ** || (59)

ಸಂಧಿ 9 ಕ್ಕಂ ಪದಂಗಳ್ 519

---

# ಹತ್ತನೆಯ ಸಂಧಿ

ಸೂಚನೆ॥ ನಿಜಯಾಗಮಂ ಸಲಹಲೆಂದು ವಿಶ್ವಾಮಿತ್ರ |
ನಜಸುತನ ಪೊರೆಗೈದಿ ಯಾಚಿಸಿದ ಮೌನಿಗಳ |
ಭಜನೆಯಂ ಗಣಿಸದಿಹ ತ್ರಿಜಗದಧಿನಾಥರಘುನಾಥನಂ ಪ್ರೀತಿಯಿಂದೆ॥

ಹಿಮಶೈಲಜಾತೆ ಕೇಳ್ನೀರಜಾಕ್ಷಂ ದಿನ-|
ಕ್ರಮದಿಂದ ಲೊಂದೊಂದು ಪರಿಯಾಗಿ ಲೀಲೆಯಿಂ |
ದಮಿತಹರುಷಂಗೊಳಿಸುತಿರ್ದ ಬಾಲಕನಂತೆ ದಟ್ಟಡಿಗಳಿಡುತ ಬರಲು ॥
ಕಮಲಜಭವಾದಿಗಳು ಕಾಣದಿಹ ಚರಣಂಗ |
ಳಮಮ ತನ್ನನು ಪೊಂದೆ ಬಿಡಲಾರೆನೆಂದು ಬಲು | [ದೊಳು॥ (1)
ಮಮತೆಯಿಂ ಕ್ಷಮೆ ಪರೀರಂಭಮೆಸಗಿರ್ಪಳೋಯೆನೆ ತೋರ್ದುದತಿಶಯ

ಶರಣರ ವಿಪದ್ಭಾವಹರಮೆನಿಸುವಂದದಿಂ |
ಹರಿ ವಿಪದ್ಭಾವವನ್ನನುಕರಿಸಿ ಚರಿಸುತಂ |
ವರಪರಿಸ್ತರಣದೊಳಗೊಮ್ಮೊಮ್ಮೆ ನಿಜಗೃಹಸ್ತಂಭಮಂ ಪಿಡಿದು ನಿಲಲು ॥
ಕರಮೆಸೆದುದಾ ಗೃಹಸ್ತಂಭ ಪ್ರಳಯೋದ್ಭವದ |
ಪರಿಕರದ ಪ್ರಹ್ಲಾದನಂ ತೋಷಗೊಳಿಸಿದಾ |
ನರಕೇಸರಿಯ ತೆರದಿ ನರನಾಥಕೌಸಲೆಯರುರುಹರ್ಷ ಪೆರ್ಚುವಂತೆ ॥ (2)

ಮೂರುಲೋಕದೊಳುಳ್ಳ ದೇಹಿಗಳ ಕೃತಕರ್ಮ |
ತೋರನೇಣುಗಳಿಂದ ಬಂಧಿಸಿಯೆ ಸುಖದುಃಖ |
ಕಾರಣಂಗೈದ ಲೀಲಾಮಾತ್ರದಿಂ ನೋಳ್ಪ ವಾರಿಜಾಯತನಯನನು ॥
ದಾರುಮಯಮಾದ ಕರಿಹರಿವೃಷಭಗಳನೈದೆ |
ದಾರದಿಂ ಬಲಿದು ನಲಿನಲಿದು ತನ್ನದೆನುತ್ತ |
ಲೋರಂತೆ ಪಿತಮಾತೆಯರ ಮುಂದೆ ವಿಹರಿಸುವನೇನೆಂಬೆ ಕೌತುಕನನು॥ (3)

ಎಳನಗೆಯ ಮೊಳೆವಲ್ಲ ಸುಳಿಗುರುಳ ಚೆಂದುಟಿಯ |
ಪೊಳೆವ ಕನ್ನಡಿಕದಪ ನಳಿನಾಯತೇಕ್ಷಣದ |
ನಳಿತೋಳು ನಿಡುಪುರ್ಬಿನತಿಶಯದಿ ನಿಟಿಲದೊಳ್ತೊಳಲುವರಳೆಲೆಯ ಬೆಡಗ ॥
ಜಳಧರೋಪಮತನುಚ್ಛಾಯೆಯಿಂದಂಗಣದಿ |
ಸುಳಿಸುಳಿದು ಶುಕವಾಣಿಯಿಂದಲಾನಂದಮಂ |
ಬೆಳಸಿ ವಿಭ್ರಮದಿಂದ ಮೋಹಿಸುವನೆಲ್ಲರಂ ಜಗದೀಶ ಬಾಲರಂತೆ ॥ (4)

ಅರವಿಂದಭವನಮರಮುನಿಮುಖ್ಯರನುದಿನದೊ |
ಳರಸಿ ಕಾಣದನಂತಮಹಿಮನಂ ಸುತನೆಂದು |
ಧರಣಿಪತಿ ಕರಪಿಡಿದು ಶಿರವನಾಘ್ರಾಣಿಸುತ ನಿಜಭೋಜನಾವಸರದಿ ||
ಸುರುಚಿರದ ಪೀಠದೊಳ್ಕುಳ್ಳಿರಿಸಿ ರುಚಿಕರದ |
ಪರಮಾನ್ನಚಿಲಿಪಾಲ್ಗಳೂಡಿಸಲ್ಕುಣುತುಣುತೆ |
ಸಿರಿಕರದಿ ಕವಳನುಂ ಪಿಡಿದೋಡಲಂಗಣಕೆ ಜನನಿ ಜನಿತಾನಂದದೆ || (5)

ಬಾರೆನ್ನಗರ್ಭಾಬ್ಧಿಬಾಲೇಂದು, ರಘುವಂಶ |
ದಾರಾಮು ಗಿಳಿರಾಮು, ಸಾಕೇತಪುರಲಕ್ಷ್ಮಿ |
ಸೌರಕ್ಷಣಾರ್ಥದುರುಹವಿರ್ಮ್ಯಾರ, ಬಾ ಶುಭದ ಭವದೂರ ಮಾರಪಿತನೆ ||
ತಾರಕಾವಳಿಮೂರ್ತಿ ಬಾ ಕಂದ ಮಾಕಂದ |
ದೋರೆವಣ್ಣಿತ್ತಪೆನು ಬಾ, ಗುಮ್ಮನಂಜಿಸುವು |
ದೋರಂತೆಯೆನುತೈದೆ ಬಣ್ಣಿಸುತೆ ಬಾಲನಂ ಬಾಗರೆದಳೊಡನಂಬಿಕೆ || (6)

ಜಿತಕುಮಾರ ಕುಮಾರಪಿತಮಿತ್ರ ಶತಪತ್ರ |
ವಿತತತರುಣಾರುಣಸುನೇತ್ರ ಮಂಗಳಗಾತ್ರ |
ವಿತತ ವಿನತಾತ್ಮಸಂಭೂತಘೋಟಕ ಸದಾ ಪಾಕಾರಿಶೋಕಹರನೆ ||
ರತುನತತಿಚಿತ್ರಿತಕಿರೀಟಕುಂಡಲಯುಗ್ಮ |
ಧೃತಿಯುತಸುಗಂಡಮಂಡಲ ಲಲಿತದೋರ್ದಂಡ |
ಪತಿತಜನಸುರಭೂಜ ರಾಜೇಂದ್ರ ಬಾರೆಂದು ಬಾಗರೆದಳಾತ್ಮಭವನ || (7)

ಉಲಿವ ಕಿರುಗೆಜ್ಜೆಯುಡಿಘಂಟೆಗಳ ನಿನದಮುಂ |
ಲಲಿತಕರಕಂಕಣದ ನಿಕ್ವಣವ ತೋರುತ್ತೆ |
ತಳಿರಡಿಯನೊಂದ ಭೂಮಿಯೊಳಿಟ್ಟು ಮತ್ತೊಂದನೆತ್ತುತಂ ಬರುತಿರಲ್ಕೆ ||
ಬಲಿಯ ಬಂಧಿಸಿ ನೆಲನನಳೆದ ಪರಿಯನ್ನು ಕೌ |
ಸಲೆಗೆ ತೋರಿಸುವಂತೆ ವಿಶ್ವಾತ್ಮ ಕಿಂಕಿಣಿಗ |
ಳುಲಿಸುತಂ ಮೆಲ್ಲಡಿಗಳಿಟ್ಟು ಬರಲಪ್ಪಿದಳ್ ಸುತನೆಂಬ ಮೋಹದಿಂದೆ || (8)

ಶ್ರುತಿತತಿಗಳರಸಿ ಕಾಣದ ದಿವ್ಯವಿಗ್ರಹವ |
ಸತತ ಕುಳ್ಳಿರುವಾಗಲುಣುವಾಗಲುಡುವೆಡೆಯೊ |
ಳತಿಶಯದಿ ತೊಡೆಯಮೇಲಿಟ್ಟು ಮುದ್ದಿಸುತಿರ್ಪಳೆರವಿಲ್ಲದನುನಯದೊಳು ||
ಕ್ಷಿತಿಯೊಳೇಂ ಧನ್ಯರೋ ಕೌಸಲ್ಯೆದಶರಥರ್ |
ಕೃತಿಗಳೊಳ್ ಮಾನ್ಯರೆಂಬುದಕೆ ಸರ್ವಾತ್ಮಕಂ |
ಸುತನೆನಿಸಿ ತನ್ನಿಳಯದೊಳಗಿರ್ಪ ಪರಿಯನುಂ ವರ್ಣಿಸಲ್ಕಳವಪ್ಪುದೆ || (9)

ಎಂತು ರಾಮಂ ಬಾಲಕೇಳಿಯೊಳ್ ವಿರಹಿಸಿದ |
ನಂತೆ ಸೌಮಿತ್ರಿ ತಚ್ಛಾಯಾನುಗುಣದಿಂ ನಿ |
ರಂತರಂ ಕ್ರೀಡಿಸುತಲಿರೆ ಭರತನನುಸರಿಸಿ ಶತ್ರುಘ್ನರಾಜಿಸುತಿರೆ ॥
ಕಾಂತಮೆನಿಪಬ್ಜ ದರ್ಶನದಿಂದ ವಾಹಿನೀ |
ಕಾಂತ ಪೆರ್ಚುವ ತೆರದಿ ಪಿತಮಾತೆಯರು ನಿಜ-|
ಸ್ವಾಂತದಾನಂದದಿಂ ಹಿಗ್ಗಿದರ್ ಶ್ರೀರಾಮನಂ ನೋಡಿನೋಡಿ ಬಳಿಕ ॥ (10)

ಸರಸಿಜಾಸನಮುಖ್ಯಮುನಿಗಳ್ನಿರಂತರಂ |
ಪರಿಪರಿಯ ಯೋಗದಭ್ಯಾಸದಾರಾಧನೆಯ |
ವಿರಚಿಸಲ್ಸಿಕ್ಕದಿಹ ಪರಬೊಮ್ಮಪ್ರೋತನೆಂದಪ್ಪಿ ಚುಂಬಿಸುತ ನಲಿದು ॥
ಹರುಷಾಬ್ಧಿಯೊಳ್ಮುಳುಗಿ ಮರೆವುತಂ ವಿಷಯಗಳ |
ನರಸಿ ಲಾಲಿಸುತಿರ್ದಳಾ ಸುಕೃತಫಲವನೆಂ |
ತೊರೆಯಲಳವಪ್ಪುದಾ ದಶರಥಮಹೀರಮಣನೇಂ ಪುಣ್ಯವಂತನಬಲೆ ॥ (11)

ಈ ರೀತಿಯಿಂ ಮಾನುಷಾಕಾರಮಾಂತಿರ್ಪ |
ವಾರಾಶಿಶಯನ ಡಿಂಭಕತನದ ಕೇಳಿಗಳ |
ನಾರಾದೊಡಂ ಪ್ರೀತಿಯಿಂದ ಬರೆದೋದಿದಡೆ ಸಾಯುಜ್ಯಸಾಮ್ರಾಜ್ಯವು ॥
ಸೇರುವದು ಗಿರಿಜಾತೆಯಾ ಮಹಾಮಹಿಮನವ |
ತಾರವಾಸರವ್ರತವ ಭಕ್ತಿರಸದಿಂ ಮಾಡ |
ಲೋರಂತೆ ಸಂಸಾರಭಯಮುಳಿದು ಸಾಯುಜ್ಯಭೋಜ್ಯರೆಂದೆನಿಸುತಿಹರು ॥ (12)

ಪರಮಶಿವ ಕರುಣದಿಂದೊರೆದ ವಾಣಿಯ ಕೇಳಿ |
ಗಿರಿರಾಜನಣುಗಿ ಮಗುಳಿಂತೆಂದಳೆಲೆ ದೇವ |
ಪರಮಪುರುಷನ ಜನನವಾಸರದ ಮಹಿಮೆಯನ್ನೊರೆಯೆ ಸದ್ಭಕ್ತಿಯಿಂದ ॥
* ವಿರಚಿಸಲ್ ಧನ್ಯಳಹೆನೆನೆ ಮಹಾದೇವ ಶುಭ |
ಚರಿತೆಯಂ ಪ್ರೀತಿಯಿಂ ವ್ರತದನುಷ್ಠಾನಮಂ |
ಗುರುತರ ತ್ರೈದಿವ್ಯಸಾರಮಂ ವಿಸ್ತರಿಸಿ ಪೇಳಿದಂ ಸುರರು ನಲಿಯೆ ॥ (13)

ಹರಿದಶ್ವನುಪರಾಗ ಕೋಟಿಶತನಿಭಮಪ್ಪ |
ದುರತರದ ಚೈತ್ರಸಿತನವಮಿ ಶ್ರೀರಘುವರಂ |
ಪರಬೊಮ್ಮ ಸಂಭೂತನಾದ ವಾಸರಮಾದ ಕತದಿಂದಲಾ ದಿನದೊಳು ॥
ಪರಮಭಕ್ತಿಯೊಳಾವನಾದಡಾರಾಧಿಸಲ್ |
ಹರಿದಪುದು ಭವಬಂಧವಿದು ಸತ್ಯ ನಿಗಮೋಕ್ತ |
ಸರಸಿಜಾನನೆ ರಾಮನವಮಿಯೊಳಗುಪವಾಸಜಾಗರಣೆಗೈದ ಬಳಿಕ ॥ (14)

---

* ಇಲ್ಲಿ ಹೇಳುವ ರಾಮನವಮಿವ್ರತಾನುಷ್ಠಾನದ ವಿಚಾರವು ವಾಲ್ಮೀಕಿರಾಮಾಯಣದಲ್ಲಿರುವುದಿಲ್ಲ.

ಆ ದಿವಸ ಪಿತೃದೇವತಾದಿಗಳಿಗೋಸುಗಂ |
ಸಾದರದಿ ತರ್ಪಣಗಳಿತ್ತು ತದನಂತರಂ |
ಭೂದಿವಿಜಸಂತತಿಯ ಪೂಜಿಪುದು ಪರಬೊಮ್ಮಸಾಯುಜ್ಯದಾಕಾಂಕ್ಷಿತರ್ ||
ಆದಿವಸ್ತುವ ಕುರಿತು ವ್ರತವನನುಸರಗೈಯ |
ದಾದನಾದಡೆ ರೌರವದಿ ಪತಿತನಪ್ಪ ನೀ |
ಮೇದಿನಿಯೊಳೀದಿನದೊಳುಂಡನಾದಡೆ ಕಾಲಸೂತ್ರಭಾಜನನಪ್ಪನು || (15)

ಕುರುಭೂಮಿಯಲಿ ದಿವಾಕರ ಪೂರ್ವಕಾಲದಲಿ (?) |
ವರಮಹಾದಾನಂಗಳಿತ್ತರ್ಗದಾವ ಫಲ |
ಹರಿದಿನಂಗಳ ನೂರನಾಚರಣೆಗೈದರಿಂಗಪ್ಪ ಸತ್ಫಲತತಿಗಳು ||
ದೊರೆದಪುದು ಶ್ರೀರಾಮನವಮೀವ್ರತಾಂತರಿಗೆ |
ಗಿರಿಜಾತೆ ವಿಪ್ರಹತಿಗುಂಟು ನಿಷ್ಕೃತಿವ್ರತಂ |
ಮರೆದು ಭೋಜನಗೈದರಿಂಗೆ ಪ್ರಾಯಶ್ಚಿತ್ತಮಿಲ್ಲಮಿದು ನಿತ್ಯಮುಬಲೆ || (16)

ರಾಮನವಮೀವ್ರತವ ಪ್ರೇಮದಿಂ ಮಾಡಿದ-|
ರ್ಗೀ ಮಹಿಯೊಳುಂ ಜನನಮರಣಬಾಧೆಗಳಳಿದು |
ರಾಮನೆಂದೆನಿಪನಿದು ತಥ್ಯಮೀ ವ್ರತ ನಿತ್ಯನೈಮಿತ್ಯಕಾಮ್ಯಮೆನಲು ||
ಪ್ರೇಮದಿಂದ ಮುಮುಕ್ಷುಜನಸುಧಾನಂದರಸ |
ತಾಮರಸಭವಮುಖ್ಯರದುದಿನಂ ಬಿಡದೆ ನಿ-|
ಷ್ಕಾಮಿತದಿ ಮಾಳ್ಪರದರಿಂ ಸರ್ವಕಾಲದೊಳ್ಮಾಳ್ಪುದೀ ಶುಭವ್ರತವನು || (17)

ಮಧುಮಾಸಸಿತಪಕ್ಷಶುದ್ಧನವಮಿಯೊಳು ತ-|
ನ್ನುದಯಮೆಂದೆನಿಸಿದಂ ಪರಬೊಮ್ಮಶ್ರೀರಾಮ |
ನದರಿಂದಲಾ ದಿನದೊಳುಪವಾಸ ಭೂಸುರರ ಪೋಷಣಂಗೈವುದಬಲೆ ||
ಬುಧರು ಪೇಳ್ದಪರು ಮತ್ತೀ ವ್ರತಂ ದ್ವಿವಿಧ ಮ-|
ತ್ತದರೊಳಗೆ ಸಮಮಧಿಕನ್ಯೂನಸಂಜ್ಞೆಗಳಿಂದೆ |
ವಿದಿತಮಾ ವಿಧ ಶುದ್ಧಸಂಜ್ಞೆಯಲಿ ನಕ್ಷತ್ರಯೋಗವು ವಿಯೋಗದಿಂದೆ || (18)

ಆರು ವಿಧ ಸಂಜ್ಞೆಯವನಲಶುದ್ಧದಿ ಋಕ್ಷ |
ತೋರುತಡಗುವದರಿಂದಾರುವಿಧಮಿದುವೆ ಶ್ರುತಿ |
ಸಾರಮೀ ನವಮಿಯೊಳ್ಪನ್ನೆರಡು ತೆರನೆಂದು ಪೇಳುವರ್ ಬಧರು ನಯದಿ ||
ಚಾರುತರಮಾ ಪುನರ್ವಸುತಾರೆಯೋರಂತೆ |
ನಾರಿ ಕೇಳ್ ಚೈತ್ರಸಿತನವಮಿಯಲ್ಲಾ ತಿಥಿಯ |
ಧೀರರೊರೆದಪರು ಸರ್ವಾರ್ಥದಾಯಿಯೆನುತ್ತೆ ದೇವಿ ಶುಭಕರಮೆನುತ್ತೆ || (19)

ವರ ಚೈತ್ರನವಮಿಯೊಳ್ ಕೂಡಿರೆ ಪುನರ್ವಸುವು |
ಪರಮ ಪಾವಿತ್ರಮಾ ತಾರೆ ಸಂಗಮಕಾಲ |
ಬೆರಕೆಗೊಂಡಿರ್ದಡೆಯು ಪುಣ್ಯತಿಥಿ ಮಾಧ್ಯಾಹ್ನವ್ಯಾಪಿಯೆಂದೆಸಿಸಿರ್ದಡೆ ||
ಪರಮ ಪುರುಷಾರ್ಥದಾಯಕಮೆಂದು ಪೇಳುವರ್ |
ಸುರರು ಮತ್ತಾ ತಾರೆ ಬೆರೆದಿರ್ದಡಾ ವ್ರತವ |
ವಿರಚಿಪುದು ಸರ್ವಸಮ್ಮತ ಮುನೀಷಿಗಳಿಂದಲಿನ್ನೊರೆವೆ ವಿಸ್ತರದಲಿ || (20)

ಗಿರಿಜೆ ಕೇಳಷ್ಟಮಿಯೊಳೊಡವೆರೆದ ನವಮಿಯಂ |
ಪರಿಹರಿಸವೇಳ್ಕು ವೈಷ್ಣವರೆಂದು ಶಾಸ್ತ್ರಮತ |
ಧರೆಯೊಳ್ಮನೀಷಿಗಳ್ ಪೇಳ್ದಪರು ದಶಮಿಯಂ ಲಂಘಿಸಲ್ಬಾರದೆನುತೆ ||
ತೊರೆದು ದ್ವಿವಿಧ ಶುದ್ಧತಿಥಿಯೊಳುಂ ಭಯಭಕ್ತಿ |
ವೆರೆದು ಶ್ರುತಿಮಸ್ತಕದಿ ಪೇಳ್ದಂತೆ ಸದ್ವ್ರತವ |
ವಿರಚಿಸಲ್ ಶ್ರೀರಾಮ ಕರುಣದಿಂದೊಲಿದೀವ ಸಾಯುಜ್ಯಸಾಮ್ರಾಜ್ಯವ|| (21)

ಇಂತು ಸಮ್ಯಗ್ವಿರಾಜಿಸಿ ಮಹಾವ್ರತವನುಂ |
ಸಂತತಂ ಮಾಡುವುದು ವೈಷ್ಣವರು ಜಗತಿಯೊಳ್ |
ಮುಂತೊರೆವೆ ಸದ್ವೈಷ್ಣವರ ಬಗೆಯ ಲಾಲಿಪುದನಂತಗುಣಭಾಗ್ಯನಿಧಿಯೆ ||
ಚಿಂತೆಯಿಲ್ಲದೆ ಯಥಾ ಶಾಸ್ತ್ರೋಕ್ತದಿಂ ಗುರು-|
ಪ್ರಾಂತಮಂ ಸಾರಿ ಸಾಂಗದಿ ಸಮಗ್ರನ್ಯಾಸ |
ಮುಂತೆ ಋಷಿಛಂದಸ್ಸುದೇವತಾಸಹಿತದಿಂ ಸನ್ಮಂತ್ರದೀಕ್ಷೆಯಾಂತು || (22)

ದ್ವಾದಶಾಕ್ಷರ ಷಡಕ್ಷರಮಾವುದಾದೊಡಂ |
ಸಾಧಿಸಿ ಸುಮಂತ್ರಸಧ್ಯಾನದೀಕ್ಷಾಕ್ರಮುವ |
ಭೇದಿಸದೆ ಜಪಿಸುತಿರ್ಪಾತ ವೈಷ್ಣವನಪ್ಪ ಶ್ರೀರಾಮಭಕ್ತಿಯಿಂದ ||
ಮೇದಿನಿಯೊಳಧಿಕ ಸಾಸಿರವರ್ಣಸಂಯುಕ್ತ |
ಮಾದವುದು ಮೂಲವ್ಯೂಹಾದಿಭೇದದ ದೆಸೆಯೊ |
ಳಾದಿಪಂಚಾಯುತನರೂಪಸನ್ಮಂತ್ರಮುನ್ನಾವಾತ ಜಪಿಸುತಿರಲು || (23)

ಶೈಲಸಂಭೂತೆ ಕೇಳವ ಮಹಾವೈಷ್ಣವಂ |
ಶೀಲದಿಂದಂ ಮಹಾವಿಷ್ಣುವಿಂಗತಿಪ್ರಿಯಂ |
ಮೇಲೊರೆವೆ ಪೂಜಾವಿಧಾನಮಂ ಪ್ರೀತಿಯಿಂದಷ್ಟದಳಯೆಡೆಯೆಡೆಯಲಿ ||
ಲೀಲೆಯಿಂ ರಾಮನ ಸುಮಿತ್ರೆಕೇಕಯಸುತೆಯ |
ಬಾಲಕರ ದುರ್ಗಾವಿನಾಯಕರ ಭೈರವರ |
ಸಾಲಿನಲಿ ವಾಣಿಯಂ ಕೋಣಂಗಳಲ್ಲಿರಿಸಿ ಪೂಜಿಸುವುದತಿಭಕ್ತಿಯಿಂ || (24)

ಅದರಗ್ರದಲಿ ಲೋಕಪಾಲರ ತದಸ್ತ್ರಗಳ |
ಮುದದಿಂದ ಪೊರವಳಯದಲ್ಲಿ ಕಲ್ಪಿಸೆ ನಾಮು |
ವಿದಿತಮಂತ್ರವನುಮಾ ಮಂತ್ರ ಪ್ರಣವಾದಿಯಾಗಿರ್ಪಂತೆ ಲಿಖಿಸಿ ಬಳಿಕ ‖
ಪದಿನಾರು ಪರಿಯಲುಪಚಾರಪೂಜೆಗಳೆಸಗಿ |
ಪದುಳದಿಂದೇಕವಿಂಶತಿ ಶಷ್ಕುಲಿಗಳಿತ್ತು |
ಚದುರತರದಾಪೂಪದುಪಹಾರಮಂ ಪೂರ್ವಸಂಖ್ಯೆಯಿಂದರ್ಪಿಸುವುದು ‖ (25)

ಬೇರೆಬೇರೀ ಪರಿಯ ನೇವೇದ್ಯಮನ್ನಿತ್ತು |
ಚಾರುತರದಾಚಮನಮಂ ಸಮರ್ಪಿಸಿ ಬಳಿಕು |
ದಾರನೀರಾಜನಂಗೈದು ವಂದಸಿ ಪೊಗಳಿ ತನ್ಮಂತ್ರಮಂ ಜಪಿಸುತ ‖
ಶ್ರೀರಾಮುವ್ರತಮಹಿಮೆಯಂ ಕೇಳುತಲಿ ರಾಮು |
ನಾರಾಧಕರುಸಹಿತ ಯಾಮಂಗಳಂ ಕಳೆದು |
ಶಾರದಾಬ್ಜಸಮಾನಶಂಖಮಂ ಫಲಗಂಧಪುಷ್ಪಯುತಮಾಗಿ ಪಿಡಿದು ‖ (26)

ವರರಸಾಲಾಶೋಕಕುಸುಮತುಳಸೀದಳವ |
ಕರಗಳಿಂದಲಿ ಪಿಡಿದು ದುರುಳದಶಕಂಧರನ |
ತರಿದು ಧರ್ಮವ ಪೊರೆದು ಕ್ರೂರದುಷ್ಟರ ಕೋಟಿದಾನವರ ಕುಲವನರಿದು ‖
ಕರುಣದಿಂ ಸಾಧುಗಳ ಸಲಹಲವತರಗೈದ |
ಹರಿಯೆ ಶ್ರೀರಾಮು ನಿಜಭ್ರಾತೃಗಳ ಸಹಿತ ಮ-|
ತ್ಪರಿಕರವ ಸ್ವೀಕರಿಪುದೆಂದೆನುತಲರ್ಘ್ಯಮನ್ನಿತ್ತಪುದು ಸದ್ಭಕ್ತಿಯಿಂ ‖ (27)

ರಾಮುನವಮಿಯಲಿ ಪೂಜೆಯ ಮಾಡುತೀ ಪರಿಯ |
ನೇಮದಿಂ ಮರುದಿವಸ ಪಾರಣೆಯ ಮಾಡಿ ಶುಭ |
ನಾಮುಗಳ ನೆನೆವುತ್ತ ಬ್ರಾಹ್ಮಣರ ಭೋಜನಂಗೈಸಿ ವಿತ್ತಂಗಳೀಯೆ ‖
ರಾಮುಸಾಯುಜ್ಯಮಪ್ಪುದು ಸಿದ್ಧ ಮುಂತಪ್ಪ |
ಕಾಮಿತಗಳಪ್ಪುದೇನತಿಶಯಮೆ ದೇವಿ ಕೇ |
ಳೀ ಮಹಾವ್ರತವನಾಚರಿಸಿ ಸುಖಿಯಾಗಿರ್ಪುದನವರತ ಸಂತೋಷದಿ ‖ (28)

ಲಾಲಿಸಿ ಮಹಾಕಥೆಯ ಶೈಲೇಶನಾತ್ಮಭವೆ |
ಶೂಲಪಾಣಿಗೆ ನಮಿಸಿ ಕೇಳ್ದಳು ಸುರೇಂದ್ರಕರ |
ಲಾಲಿತಪದಾಂಭೋಜರಾಮುನಭ್ಯುದಯಮಂ ವಿಸ್ತರಿಸಿ ಹೃದಯದಲ್ಲಿ ‖
ಕೀಲಿಸಿದ ಪಾಪಸಂಚಯದ ಲಯಮಂ ಗೈದು |
ಪಾಲಿಪುದೆನಲ್ಕೆ ಹರನಧಿಕಸಂತೋಷದಿಂ |
ಮೂಲೋಕಕಾನಂದಮಪ್ಪಂತೆ ಒಪ್ಪದಿಂ ಪೇಳ್ದನತಿಶುಭಚರಿತೆಯ ‖ (29)

ತರಳತನದಾಟಮುಂ ತವಕದಿಂ ಪಿತನಾತೆ |
ಯರಿಗೆ ತೋರಿಸುತಬ್ಜಲೋಚನಂ ದಿನದಿನಂ |
ಪರಿಚರ್ಯೆಮುಂ ಮಾಡಿ ಪರುಠವದಿ ರಾಜಿಸಲ್ ಕಂಡು ಕಾಕುತ್ಸ್ಥತಿಲಕ ||
ಕರಿತುರಗದೇರಾಟಮುರುಶಸ್ತ್ರದಭ್ಯಾಸ |
ವರಮಲ್ಲಗಾಳಗಂ ಮೊದಲಾದ ವಿದ್ಯೆಗಳ |
ಪರಿಕರಗಳಭ್ಯಾಸಗೈಸಿದಂ ಸರ್ವಜ್ಞರಿಂದೆನುತ ಮೋಹದಿಂದೆ || (30)

ಉಪನಯುನಕೃತ್ಯಮುಂ ರಚಿಸಿ ಬಾಲಕರಿಂಗೆ |
ತಪನವಂಶಾಗ್ರಣಿ ಚತುರ್ವೇದವೇದಾಂಗ |
ವಿಪುಲತರಶಾಸ್ತ್ರಗಳನಾ ಧನುರ್ವೇದಗಳನೋದಿಸಿದ ನೈಪುಣ್ಯದಿ ||
ಅಪರಿಮಿತಮಹಿಮನನುಜಾತರಿಂದೊಡವೆರೆದು |
ಕೃಪೆಯಿಂದ ಬಾಲಕರ ಲೀಲೆಯಿಂದೆಲ್ಲಮುಂ |
ಪ್ರಪಿತನಾಜ್ಞೆಯೊಳರಿತನೇನೆಂಬೆನಚ್ಚರಿಯ ಸಚ್ಚರಿಯದತಿಶಯಗಳ || (31)

ಊಡುವಲ್ಲುಡುವಲ್ಲಿ ತೊಡುವಲ್ಲಿ ಕ್ರೀಡೆಗಳ |
ನಾಡುವೆಡೆಯಲ್ಲಿ ಶಸ್ತ್ರಾಭ್ಯಾಸಗಳ ನಿರತ |
ಮಾಡುವೆಡೆಯಲಿ ಗಜಸ್ಕಂದಾಶ್ವಪೃಷ್ಠಂಗಳಡರುತಿರ್ಪವಸರದಲಿ ||
ನೋಡದನ್ನವ ಸುಮಿತ್ರಾತ್ಮಸಂಭೂತನೊಡ |
ಗೂಡಿದಲ್ಲದೆ ರಾಮಗೀತನೆ ಬಹಿಪ್ರಾಣ |
ದೀಡೆಂದು ಸರ್ವಜನರಾಡಿಕೊಳೆ ರಘುವೀರ ಭರತನಂ ಶತ್ರುಘ್ನನ || (32)

ಲೋಕಪಾಲೋಪಮಿತಮಾಗಿರ್ದ ರಾಜನ ವಿ |
ಲೋಕನಂಗಳಿಗೆ ಡಿಂಭಕರು ಮಧ್ಯದೊಳಗನು |
ನೇಕಗುಣಗಣಭರಿತ ರಾಮಚಂದ್ರನು ಸಕಲಲೋಕಜನಿತಾನಂದದಿ ||
ಶ್ರೀಕರಧನುರ್ವಿದ್ಯ ಸರ್ವಶಾಸ್ತ್ರಂಗಳನ |
ನೇಕ ಶ್ರುತಿಸಂತತಿಯಲಂಕಾರದಿಂ ತೋರ್ಪ |
ಪಾಕಶಾಸನಮೌನಿನುತನೆನಿಪ ನಾಲ್ಮೊಗನ ಪಿತಾತನೆಂಬಂದದಿ || (33)

ಗಣಿಸಲೆಂತಳವಪ್ಪುದಗಜೆ ರಾಘವನ ಸ-|
ದ್ಗುಣಗಣವ ಪದಿನಾಲ್ಕುಲೋಕದೊಳಗಾರಾದ |
ಡಣುಮಾತ್ರ ಪಡಿಯಿಡಲ್ಕಸದಳಮುದೆಂಬಂತೆ ತೋರಲಾ ರಾಜೇಂದ್ರನು ||
ಪ್ರಣಮಗೋಚರಪಾಕನೆಂದಪ್ಪಿ ಚುಂಬಿಸುತ |
ಕಣುದಣಿಯೆ ನಿಟ್ಟಿಸುತ ಸುಖಪಾರವಶ್ಯದಿಂ |
ದೆಣೆಯಿಲ್ಲದಿರ್ದನೇಂ ಸುಕೃತಿಯೆಂದೊರೆದಪೆಂ ಮತ್ತಾತನುರುತಪಗಳ || (34)

ಸುರಪಸಖನೀ ಪರಿಯ ತರಳನಾಟಂಗಳಂ ।
ಪರಿಪರಿಯೊಳೀಕ್ಷಿಸುತಲಿರಲೊಂದು ದಿವಸದೊಳ್ ।
ಪರಮಹಾಮೌನಿ ವಿಶ್ವಾಮಿತ್ರನೈತಂದನಾ ರಾಜಧಾನಿಯೆಡೆಗೆ ॥
ಚರರು ಕಂಡಾ ಮುನಿಯನರಸನೆಡೆಗೈತಂದು ।
ಭರದಿಂದ ಬಿನ್ನೈಸೆ ಪರಿಕರಂಗಳ ಪಿಡಿದು ।
ಹರುಷದಿಂ ವಿಪ್ರಕುಲತಿಲಕನಂ ಕಾಣ್ಬೆನೆಂಬುತ್ಸವದಿ ನಡೆತಂದನು ॥ (35)

ಗುರುವಸಿಷ್ಠಂವಾಮದೇವಾದಿವಿಪ್ರಕುಲ ।
ನೆರಸಿ ಪುರಜನಪರಿಜನಂಗಳೊಡನೈತಂದು ।
ಸಿರಿಕರದೊಳಾ ತಪೋಧನನ ಪೂಜಿಸುತರ್ಘ್ಯಪಾದ್ಯಂಗಳಿತ್ತು ನಮಿಸಿ ॥
ಪರಮಋಷಿಗಳ ತಪಃ ಕೌಶಲವ ಬೆಸಗೊಳ್ಳ ।
ಉರುತಪೋಧನನವರಮನ್ನಿಸುತಲರಸನಂ ।
ಪರಸಿ ಸದ್ವಿನಯದಿಂ ಗುಣಕೀರ್ತನಂಗೈದ ನೃಪರನ್ನ ನೀನೆನುತ್ತೆ ॥ (36)

ಪೊಡವೀಶ ಯಮಿಶಿಖಾಮಣಿಯ ಸಂಸ್ತುತಿಗೈದ ।
ನೊಡೆಯ ತವದರ್ಶನದೊಳಾಂ ಕೃತಾರ್ಥಂ ಧನ್ಯ ।
ನಡಿದಾವರೆಗಳ ಸಾ ಕಂಡಮಾತ್ರದೊಳಘಂ ಜಾರಿತುರುಸುಖಸಾರಿತು ॥
ನುಡಿವೆನೇಂ ಮದ್ಭಾಗ್ಯದೇಳಿಗೆಯ ಪೀಳಿಗೆಗ ।
ಳಡಿಗಡಿಗೆ ಕೈಸಾರ್ದವಾರ್ದ್ರಹೃದಯದೊಳೆನ್ನ ।
ನೊಡನೆ ರಕ್ಷಿಸಲಮಿತವಾಂಛಲ್ಯದಿಂದೆನ್ನ ಪುರಿಗೆ ಬಿಜಯಂಗೈವುದು ॥ (37)

ಕಮನೀಯಯುವಮೌನಿಯಂ ಕರೆದೊಯ್ದು ನಿಜಗೃಹದೊ ।
ಳಮಿತಮಣಿರಾಜಿ ಸಂರಾಜದಷ್ಟಾಪದೋ ।
ತ್ತಮಪೀಠಮಧ್ಯದೊಳ್ಕುಳ್ಳಿರಿಸಿ ನುತಿಗೈವುತಮಿತಭಯಭಕ್ತಿಯಿಂದೆ ॥
ಅಮರೇಂದ್ರಮಿತ್ರ ಬೆಸಗೊಂಡ ತಾಪಸವರ್ಯ ।
ಸುಮತೆವೆತ್ತೈತಂದ ಕಜ್ಜವ ನಿರೂಪಿಸಲ್ ।
ಕ್ರಮದಿಂದ ಮಸ್ತಕದೊಳಾಂತು ತಂದೊಪ್ಪಗಿಪೆನೆಂದು ವಿಜ್ಞಾಪಿಸಲ್ಕೆ ॥ (38)

ಪ್ರಮಥೇಶನಿಭನೆನಿಸಿ ಪೀಯೂಷಮುಂಕುರಿಸು ।
ತಮರೇಶಧುನಿ ಸೂಸಿತೋಯೆನಲ್ಲೋಷ್ಠವದ ।
ರಮಣೀಯಸತ್ಕಾಂತಿಮುಂಬರಿಯಲಿಂತೆಂದನಾ ಮಹೀನಾಥನೊಡನೆ ॥
ದ್ಯುಮಣಿಕುಲಸಂಭವಂ ದೀನಜನನಿರ್ಝರ-।
ದ್ರುಮಮಧಿಕವಿಕ್ರಮಂ ರಾಜಸಿಂಹಂ ನಿನಗೆ ।
ಸಮನೆನಿಪರಾರ್ಜಗದೊಳತುಲಗುಣಸಂಪನ್ನ ಪೃಥ್ವೀಶಮಕುಟರನ್ನ ॥ (39)

ತುರಗದನ್ವೇಷಣೆಗೆ ತ್ವರಿತಗತಿಯಿಂದೈದಿ |
ಶರಧಿಗಳ ನಿರ್ಮಿಸರೆ ಸಗರಾತ್ಮಸಂಭವರು |
ಗುರುಜನರಿಗುತ್ತಮದ ಪದವಿಯುಂ ಸುರನದಿಯು ತಂದಾ ಭಗೀರಥಾಂಕೆ ||
ಸುರರಾಯನಿಗೆ ಸಹಾಯವನೆಸಗೆ ದಾನವರ |
ತರಿದು ಪಾಕಾರಿಯರ್ಧಾಸನದಿ ಮಂಡಿಸಿದ |
ಧುರವಿಜಯ ನಿನ್ನ ಬಲಸಿರಿಯೆಲ್ಲ ಸಾಧುಗಳ ಪೊರೆವಡಲ್ಲವೆ ನೃಪಾಲ || (40)

ಭಾಸಾನ್ನಿಧಿಯುವಂಶಸಂಭೂತ ನಿನಗಿನ್ನು |
ಪಾಸಟಿಯದಾರಿರ್ಪರನುದಿನ ವಸಿಷ್ಠಮುನಿ |
ವಾಸವನ ಸೇವೆಯಿಂದೆಲ್ಲ ಧರ್ಮವ ಬಲ್ಲ ಕಾರುಣಿಕಹೃದಯನಲ್ತೆ ||
ಲೇಸಾದುದಿಂದೆಮಗಖಂಡಪೌರುಷ ನಿನ್ನ |
ಭಾಸುರದ ಮೃದುವಾಣಿಯಿಂದಲೆಮ್ಮಯ ಮನದ |
ಲಾಸೆಯೊಂದಿರ್ಪುದಾ ಕಾಮಿತವ ಕರುಣಿಪುದು ಸತ್ಯನಿಧಿಯೆಂದೆನಿಪುದು || (41)

ಸಿದ್ಧಾಶ್ರಮದೊಳಾನು ಸಿದ್ಧಿಗೋಸುಗ ನಿಯಮ |
ಬದ್ಧನಾಗಿರಲಿರ್ವರುಂ ಕಾಮರೂಪಿಗಳ್ |
ಬದ್ಧಶತ್ರುತ್ವದಿಂದೈತಂದು ರಕ್ಕಸರ್ ಮಾಂಸಶೋಣಿತದ ಮಳೆಯ ||
ಉದ್ಧುರುಟಿನಿಂ ಸುರಿವುತುಗುಳಿ ಮಲಮೂತ್ರದಿಂ |
ವಿದ್ಧಮೆಂದೆನಿಸಿ ಕ್ರತುಭೂಮಿಯುಂ ಕೆಡಿಸುವರು |
ಪೊದ್ದಲಸದಳರ್ವಲ್ಲವೀ ಪರಿಯ ಬಹುಕಾಲ ಬಾಧಿಸುವರೆನ್ನುಳಿಯದೆ || (42)

ಕತಿಪಯದಿನಂಗಳಾನತಿಕಷ್ಟತರದಿಂದ |
ಕೃತಸಾಧನಂಗಳಂ ಗಳಿಸುತೆಸಗಿದ ಕೃತ್ಯ |
ಹತಮೆನಿಸಿ ಬಸವಳಿದು ಬಿಸುಸುಯ್ವೆನಲ್ಲದಿದನಾರೊಳುಂ ಪೇಳೆ ನಾಣ್ಚಿ ||
ಕ್ಷಿತಿಪ ಕೇಳಾ ರಕ್ಕಸರ ಶಪಿಸಿ ಕೆಡಪುವೆನ-|
ಲ್ಮತಿ ಜನಿತಮಾಗದಾ ದುಷ್ಕೃತಿಗಳಿಂ ಕೋಪ |
ಹಿತಮೆನಿಸದಿಹ ಕತದೊಳುಪಹತಿಯನಾಳ್ವೆನ್ನ ಕ್ರತು ಪಲಾಯನಮಪ್ಪುದು (43)

ರಾಮನಂ ಪರಿಪೂರ್ಣ ಕಾಮನಂ ಸಂಗ್ರಾಮ |
ಭೀಮನಂ ಸತ್ಯಸಂಕಲ್ಪನ ಪರಾಕ್ರಮನ |
ಸೋಮಶತಸಂಕಾಶ ಭವದೀಯ ಜ್ಯೇಷ್ಠಸುತನೆಂದೆನಿಸಿ ರಾಜಿಸುವನ ||
ಪ್ರೇಮದಿಂದೆನ್ನೊಡನೆ ಕಳುಪುವುದು ಬೇಗ ಶುಭ |
ನಾಮನೈತರಲೆನ್ನ ಯಾಗಮುಪ್ಪುದು ಪೋಪ |
ರೈ ಮಹಾಸುರರೆಲ್ಲರೀತನ ಶರಾಹತಕರಾಗಿ ನೆಲ ಸುಖಿಯಪ್ಪುದು || (44)

ಕಾಕಪಕ್ಷಾನ್ವಿತನ ಕಾಕುತ್ಸ್ಥರನ್ನನಂ ।
ನೀ ಕಳುಪೆ ಕರೆದೊಯ್ಯೆ ರಕ್ಕಸರ ಬಾಧೆಗಳು ।
ಸ್ತೋಕದಂದದಿ ಪಾಲಿಸುವ ಶಕ್ತಿಯುಂಟೆನೆಗೆ ನಿಜತಪೋಬಲಗಳಿಂದೆ ॥
ಕಾಕಬಳಸದಿರರಸ ಕೈಗೂಡುವುದು ನಿನ್ನ ।
ಪಾಕಂಗೆ ಸಕಲ ಶ್ರೇಯಸ್ಸಾಧನವು ಮಗುಳೆ ।
ಜೋಕೆಯಿಂದೈತಪ್ಪನಪ್ಪ ಚಿಂತೆಯನುಳಿದು ಕಳುಹು ಸಂತೋಷದಳೆದು ॥ **(45)**

ಕ್ರೂರದಾನವರಿಂದ ಭಯ ನ್ನಿನ್ನ ಕುವರರಂ ।
ಸಾರಲಮ್ಮದು ಯಾಗ ಸಾಂಗಮೆಂದೆನಿಸಿ ಫಲ ।
ಸೇರುವುದು ರಘುಕುಲಾಗ್ರಣಿ ಚಿತ್ತದನುತಾಪಮಾಂತಿರದೆ ಜರದೆ ಬರಿದೆ ॥
ನಾರಾಯಣನೆ ಸಾಧುಗಳ ಪೊರೆಯೆ ಮನುಜರಾ ।
ಕಾರವೆತ್ತುದಯಿಸಿದ ನಿನ್ನಾತ್ಮಭವನೆನಿಸಿ ।
ಈ ರೀತಿಯನ್ನರುಂಧತಿಯರಸನರಿದಿರ್ಪನುರುತಪೋದೃಷ್ಟಿಯಿಂದೆ ॥ **(46)**

ತರಣಿಕುಲಸಂಜಾತ ದೊರೆಗಳಿಂದಾರ್ಜಿಸಿದ ।
ವರಕೀರ್ತಿ ಧರ್ಮ ಸತ್ಯಪ್ರತಾಪಂಗಳುಂ ।
ಸ್ಥಿರಮೆನಿಸಿ ನಿನ್ನೆಡೆಯೊಳಿರ್ಪಡೆಯು ರಾಮನಂ ನಮ್ಮೊಡನೆ ಕಳುಹು ನೃಪತಿ॥
ಗುರುವಸಿಷ್ಠಾದಿಮಂತ್ರಿಗಳೆಲ್ಲರುಂ ನುಡಿಯು ।
ಭರವನಂಗೀಕರಿಸಲಾಲಸ್ಯಮನ್ನುಳಿದು ।
ತ್ವರಿತದಿಂದಪ್ಪಣೆಯನಿತ್ತು ಕಳುಪುವುದರಸ ನಿನ್ನಾತ್ಮಭವರಾಮನ ॥ **(47)**

ಪತ್ತುದಿನಮೆನ್ನಾಶ್ರಮದೊಳಿರ್ದು ಶ್ರೀರಾಮ ।
ಮತ್ತೆ ಪಾಸಟಿಯಿಲ್ಲದಮಿತಶ್ರೇಯಸ್ಸುಗಳ ।
ನೊತ್ತಮಂ ಕೈಕೊಂಡು ಲೋಕವಿಶ್ರುತಕೀರ್ತಿಯೆನಿಸಿ ಮಗುಳೈತರುವನು ॥
ಚಿತ್ತದೊಳ್ ವ್ಯಾಕುಲವ ಪತ್ತಿಸದೆ ಬೇಗ ಭೂ ।
ಪೋತ್ತಮನೆ ತತ್ಸುತನ ಜ್ಯೇಷ್ಠನಂ ದಯದಿಂದ ।
ತತ್ತರವನುಳಿದು ಕಳುಪುವುದತುಳಕೀರ್ತಿಸುಖತತಿ ನಿತ್ಯಮೆಂದೆನಿಪೊಡೆ ॥ **(48)**

ಅತಸಿಸುಮನಿಭಗಾತ್ರನಂಬುಜಾಯತನೇತ್ರ ।
ಶತಮನ್ಯುಮೌನಿಸಂಸ್ತುತಪಾತ್ರಚಾರಿತ್ರ ।
ರತಿಪತಿಯ ಪಿತ **ರಾಮಪುರ**ವಾಸ ಭುವನೇಶ ಈಶಾನಹೃನ್ನಿವಾಸ ॥
ಸುತನೆಂಬ ಮೋಹದಿಂ ಮತಿವಿಕಳಮಾಂತಿರದೆ ।
ಜೊತೆಯೊಳೇ ಕಳುಪು ರಘುಪತಿಯ ಧರ್ಮದ ತತಿಯ ।
ಕ್ಷಿತಿಯೊಳತಿವಿಪುಳತರದಿಂ ಗಳಿಸಿಕೊಳ್ಳುವುದೆನುತ್ತೊರೆದ ಗಾಧಿಸುತನು ॥ **(49)**

ಸಂಧಿ 10 ಕ್ಕಂ ಪದಂಗಳ್ 568

# ಹನ್ನೊಂದನೆಯ ಸಂಧಿ

ಸೂಚನೆ॥ ಗುರುವಶಿಷ್ಠರ ನೇಮದಿಂ ರಾಮಲಕ್ಷ್ಮಣರ ।
ವರತಪೋನಿಧಿ ಕುಶಿಕಸಂಜಾತನೊಡನೆ ಬಂ ।
ಧುರಪ್ರೀತಿಯಿಂದಲಪ್ಪಣೆಗೊಟ್ಟು ಕಳುಪಿದಂ ಪಂಕ್ತಿರಥನೃಪಸತ್ತಮಂ॥

ಮೇದಿನೀಧರಜಾತೆ ಕೇಳ್ಗಾಧಿನಂದನನ ।
ಗಾಧವಾಕ್ಯವ ಕೇಳಿದಾಕ್ಷಣಂ ನೃಪವರ್ಯ ।
ಗಾಧಿ ಸಂಭವಮಾಗಲಾನನಂ ಹಿಮನೀರಜೋಪಮಿತಮೆಂದೆನಿಸಿತು ॥
ಮಾಧವಾಚ್ಯುತಕೃಷ್ಣಯೆಂದೆನುತ ನಿಃಸಂಜ್ಞ ।
ನಾದನರೆನಿಮಿಷ ತದನಂತರದಲೆಚ್ಚತ್ತು ।
ಸಾದರದ ಮೃದುಸರಸ್ವತಿಯಲಾ ಸಂಯಮಿಯೊಳಿಂತೆಂದನತಿವಿನಯದಿ ॥ (1)

ಊನಷೋಡಶವರುಷ ಕ್ಷೀರಕಂದಂ ರಾಮ ।
ದಾನವರ ಜೈಸುವದದೆಂತಕಟ ಸಂಖ್ಯೆಯೊಳ್ ।
ಮ್ಲಾನಮೆನಿಸದ ಶೂರರಹಿತಾಪಹರರಿರ್ಪರೆನ್ನಲ್ಲಿ ಚತುರಂಗವು ॥
ಭಾನುಸಮವಿಕ್ರಮರ ಭವದೀಯ ಪದದೊಡನೆ ।
ಸಾನುಯಾತ್ರೆಗೆ ಬರ್ಪರೀಗ ದುರ್ಮಾರ್ಗಿಗರ ।
ಮಾನವನ್ನಪಹರಿಸಿ ಸವನಾಂತರಾಯಮಂ ಕಳೆದು ಸುಖಿಯಹುದು ಜೀಯಾ ॥

ಬಪ್ಪೆ ನಾಂ ಶರಚಾಪಯುತನಾಗಿ ಪ್ರಾಣಂಗ ।
ಳಿಪ್ಪನ್ನ ಸಮರಮುಖದೊಳ್ಪಣಗಿ ರಕ್ಕಸರ ।
ನೊಪ್ಪಗಿಪೆ ಶಮನಂಗೆ ಶಮನಮಪ್ಪುದು ವಿಘ್ನಮತಿವೇಗ ಕ್ರತುರಾಜಕೆ ॥
ಒಪ್ಪಬೇಹುದು ಜೀಯ ಶ್ರೀರಾಮ ಮತ್ಪ್ರಾಣ ।
ನಪ್ಪನೀ ಸುತರಲ್ಲಿ ನಿಜಕಟಾಕ್ಷವನುಚರ ।
ನಪ್ಪೆ ಭಾಷೆಗೆ ತಪ್ಪೆನೊಪ್ಪುಗೊಳಬೇಕೆನ್ನ ಬಿನ್ನಪವನತಿಹಾರ್ದದಿ ॥ (3)

ಕೂಟಯೋಧಿಗಳು ತಾಟೋಟುಗಾರರ್ದನುಜ ।
ರಾಟಂಗಳೆಂತರಿವ ಬಾಲಕ ಬಲಾಬಲವ ।
ಮಾಟಾದ ಶಸ್ತ್ರಾಸ್ತ್ರ ಸಂದೋಹಮಜ್ಞಾತಮಾಗಿರ್ಪುದೈ ರಾಮಗೆ ॥
ಸಾಟಿಯಲ್ಲವು ಸಂಖ್ಯೆಯದರಿಂದಲಾನದ್ರಿ ।
ಕೂಟಸಮುದಿಭರಥಪದಾತಿಯಿಂದೊಡವೆರೆದು ।
ಮಾಟಡಲ್ಬಪ್ಪೆ ದಾನವರ ರಾಘವನೋರ್ವನಂ ಕಳುಪೆ ಮುನಿವರ್ಯನೆ ॥ (4)

ಬರುವೆ ರಕ್ಕಸಕುಲವ ತರಿದು ಯಾಗವ ಸಲಹೆ |
ತರಳರಾಮನನುಳಿದು ಧರಿಸಲಮ್ಮೆನು ತನುವ |
ಕರೆದೊಯ್ವಡಿಚ್ಛೆಯುಂಟಾದಡೆಯು ಬಾಲಕನ ಮತ್ತಾತನೊಡನೆ ನಾನು ||
ಬರುವೆ ಚತುರಂಗಬಲದೊಡವೆರೆದು ರಕ್ಕಸರ |
ತರಿದು ತದ್ಯಾಗರಕ್ಷಣೆಗೈದು ಭರದಿ ಮ - |
ತ್ಪುರಿಗೆ ತವ ನೇಮದಿಂದೈತಪ್ಪೆ ರಘುಪತಿಯನೋರ್ವನಂ ಕಳುಪೆನನಘ || (5)

* ಅರುವತ್ತು ಸಾಸಿರ ಸುವರ್ಷಕ್ಕೆ ಪುತ್ರರೆಂ |
ದರಿತೆ ನಾ ಬಾಲಕರು ನಾಲ್ವರಲಿ ಶ್ರೀರಾಮ |
ನುರುಪ್ರೀತಿಕಾರಣಂ ಮಜ್ಜೀವನಾಧಾರಮೀತನನ್ನಗಲೆ ಜೀವ ||
ತರಹರಿಸದಯ್ಯ ಮುನಿರಾಯನೆನ್ನೊಳ್ ಪ್ರೀಯ |
ವೆರಸಿ ಕರುಣಿಸವೇಳ್ಕುಮೆಂದು ನೃಪಮೌಳಿ ಬಲು |
ಪರಿಯ ಬಿನ್ನಪಗೈದು ಮುಗುಳೆಂದನಾ ಗಾಧಿರಾಜಸಂಭೂತನೊಡನೆ || (6)

ಆಜಿಯೊಳ್ದಾನವರ ರಾಜಿಯಂ ತರಿದಿಟ್ಟು |
ಮೂಜಗಂ ಮೆಚ್ಚಲಿಂದ್ರಂಗಾಧಿಪತ್ಯ ಸಂ |
ರಾಜಿಪಂತೆಸಗಿದೀ ಪರಿ ತಾವಕೀನ ಶುಭಚರಣಗಳಿಗಜ್ಞಾತಮೆ ||
ಸೋಜಿಗಮದೇನು ದೈತ್ಯರ ಕೆಡಪಿ ಸನ್ಮುನಿಸ |
ಮಾಜಮಂ ರಕ್ಷಿಸುವೆನೆಂದೆನುತ ದೈನ್ಯದಿಂ |
ರಾಜೀವಮಿತ್ರಗೋತ್ರಜನೊರೆಯಲಿಂತೆಂದ ಮುನಿನಾಥ ವಿನಯದಿಂದೆ|| (7)

ವನಜಪೀಠನ ಪೌತ್ರ ವಿಶ್ರವಸುಮೌನಿಗಂ |
ಜನಿಸಿದ ದಶಗ್ರೀವ ವೈಶ್ರವಣನಾವರಜ |
ಘನತಪದಿ ಮೆಚ್ಚಿಸಿದ ನಾಲ್ಮೊಗನ ತತ್ಕರುಣದಿಂದಾದುದಮಿತಬಲವು ||
ತನಗೆ ಹಿತಮೆಂದಾ ಸುಬಾಹುಮಾರೀಚಾಖ್ಯ |
ರನು ಮುನಿಗಳನು ಬಾಧೆಗೈಯಲೆಂದಟ್ಟಲನು |
ದಿನವೆಮ್ಮ ಸತ್ಕರ್ಮನಿರತರಂ ಬಾಧಿಸುವರೇನೆಂಬೆ ದಾರುಣಗಳ || (8)

---

* ಷಷ್ಟಿರ್ವರ್ಷ ಸಹಸ್ರಾಣಿ ಜಾತಸ್ಯ ಮಮ ಕೌಶಿಕ || ೧೦ ||
ದುಃಖೇನೋತ್ಪಾದಿತಶ್ಚಾಯಂ ನರಾಮಂ ನೇತುಮರ್ಹಸಿ ||
ಚತುರ್ಣಾಮಾತ್ಮಜಾನಾಂಹಿ ಪ್ರೀತಿಃ ಪಾರಮಿಕಾ ಮಮ || ೧೧ ||

(ವಾ. ರಾ.—ವಿಂಶಸ್ಸರ್ಗಃ)

ಸುಂದೋಪಸುಂದನಂದನರಿವರ್ ಕನಲಿ ಸಂ |
ಕ್ರಂದನಾದ್ಯಖಿಲದಿಕ್ಪಾಲಕರ ಸಂತತಿಯು |
ಮಂದರೆಂದನಿಸಿ ಗೋವಿಪ್ರಸದ್ಧರ್ಮಗಳ ಕೆಡಿಸುತಂ ಶರ್ಮಗೊಡದೆ ||
ಬಂದಲೆವುತಿಹರರಸ ಬೆದರುವುದು ಮೂಲೋಕ |
ಬಂಧುರದ ಗರ್ಜನೆಗದೇನೆಂಬೆನರಸ ನೀಂ |
ಬಂದು ಮಾಡುವುದೇನು ಬಹುಬಲಾಢ್ಯರು ನೋಡಲಾಶರರು ಭಾಸಯುತರು ||

ತ್ರಿದಶಯಕ್ಷಾದಿಗಳು ಕದನಮುಖದೊಳಗೋಡಿ |
ಮದವಳಿದರೆಂದು ಕೌಶಿಕನೊರೆಯಲಾ ನುಡಿಯ |
ಹದನವಾಲಿಸಿ ಕಕುತ್ಸ್ಥಜ ಚಿಂತೆಯಂ ತಾಳ್ದು ಮುನಿಪನೊಡನಿಂತೆಂದನು ||
ವಿಧಿದತ್ತವರದಿಂದಲಾ ದೈತ್ಯಹತಕರ-|
ಭ್ಯುದಯಪೆರ್ಚುಗೆಯಲೀ ಲೋಕಂಗಳಂ ಸದೆವ |
ರಿದು ಯಥಾರ್ಥಂ ನಿಶಾಚರರೊಳಾಜಿಗೆ ಬರ್ಪರಾರುಂಟು ಭೂಭುಜರೊಳು ||

ಬಲದಿಂದಲೆನ್ನಿಂದಲೇಂ ಪ್ರಯೋಜನ ಜೀಯ |
ನಿಲುವರುಂಟೇ ನಿಶಾಚರರೆಡೆಯ ಸಮರದಲಿ |
ಸುಲಭಮೇ ಕಾಲಾಂತಕನ ಕೆಳೆಯು ಬಾಳ್ವರಿಗೆ ಮೂಲೋಕವಾಸಿಗಳಿಗೆ ||
ಕಲಿತಕಾರುಣ್ಯತತಿ ಬಾಲಕಂ ಶ್ರೀರಾಮು |
ಗೆಲುವನೆಂತಾ ಮಹಾಸುರಖಳರ ನೀ ದಯಾ |
ಕಲಿತ ಗತಿಹೀನರಿಗೆ ನೀನಲ್ಲದನ್ಯರಾರುಂಟು ತಾಪಸವರೇಣ್ಯ || (11)

ಬಲುತಪದಲರುವತ್ತು ಸಾಹಸ್ರವರುಷಕ್ಕೆ |
ಕುಲವರ್ಧನೆಗೆ ಸುತರ ಪಡೆದಿರ್ಪೆ ತಾಪಸರ |
ತಿಲಕ ಮದ್ವಂಶಮುಂ ರಕ್ಷಿಪುದು ಕರುಣದಿಂ ಕರುಣಭಿಕ್ಷವ ಪಾಲಿಸಿ ||
ಜಲಜಾಪ್ತಸಂತಾನಮಿ ನೆಲದೊಳಿರ್ಪಂತೆ |
ಲಲಿತಹೃದಯದಿ ಪರಸವೇಳ್ಕೆಂದು ನೃಪಮೌಳಿ |
ಯಲಘುದೈನ್ಯದೊಳೊರೆಯೆ ಲಾಲಿಸುತ ಕೋಪಶಿಖಿ ಪೆರ್ಚಿತಾ ಯಮಿರಾಜಗೆ ||

ಕೋಪಶಿಖಿ ಮುಂಬರಿಯೆ ಕೋಕನದ ಸಂಕಾಶ |
ದೀಪಿತಗಳಾಗಲಂಬಕ ಕುಣಿಯೆ ಶ್ಮಶ್ರುಗಳ್ |
ಭೂಪಾಲನಾನನವ ನಿಟ್ಟಿಸುತ ಶಮಧನಂ ನುಡಿದನತಿಪರುಷರವದಿ ||
ಈ ಪರಿಯ ದೈನ್ಯಮುನ್ನಾಳಲೇತಕೆ ಕಳುಪ |
ಲಾಪಡೆಯು ರಾಮನಂ ಕುಳುಪಿಲ್ಲದಿರ್ದೊಡಂ |
ಪೋಪೆವಾವ್ ಸುಖಿಯಾಗು ನಿಜಕುಲದ ಧರ್ಮಮಂ ನೀಗಿ ನಿರ್ಮಮತೆಯಿಂದೆ||

ಎನುತ ವಿಶ್ವಾಮಿತ್ರ ಕನಲಿದುದ ನಿಟ್ಟಿಸುತ |
ವನಧಿಮೇಖಲೆಶೈಲತತಿಗಳುರುಕಂಪನವ |
ನನುಕರಿಸಿ ಜಲರಾಶಿ ಭೀತಿಗೊಳೆ ಮೂಲೋಕ ತಳ್ಳಂಕಗೊಳುತಿರಲ್ಕೆ ||
ಅನಿತರೊಳಗೀ ಪರಿಯ ಕಂಡಾ ವಸಿಷ್ಠಮುನಿ |
ಜನಪತಿಯ ಕುಸ್ತರಿಸಿ ಪೇಳ್ದನೀ ವಸುಧೆಯೊಳ್ |
ವನಜಾಪ್ತವಂಶಸಂಭೂತರಾಜನ್ಯರುಂ ಧರ್ಮಮೂರ್ಧನ್ಯರಲ್ತೆ || (14)

ಹುತಮಿರ್ಪ ಸಕಲ ಸದ್ಧರ್ಮಗಳ ಸಂತತಾ |
ಯತನಕೈತಂದ ಭೂಸುರರ ಸಂತುಷ್ಟಿಯಂ |
ಕತಿಪಯಾಂಘ್ರಿಗಳ ಮರೆದಿರದೆ ಸದ್ಧರ್ಮರೆಂದೆನಿಸಿ ರವಿವಂಶಭವರು ||
ಮತಿಯಿಂದಲನುಸರಿಸಿ ಬಾಳ್ವರೀ ಪಟ್ಟಣದಿ |
ಕ್ಷಿತಿಪ ಮತ್ತವರಿನಿಮ್ಮಡಿಯೆನಿಸಿ ವಿಪ್ರಸಂ |
ತತಿಯ ಪಾಲನೆಗೈದೆಯದರಿಂದೆ ಸದ್ಯಶಶ್ಚಂದ್ರಿಕೆಗೆ ನಿಲಯಮಾದೆ || (15)

ಚಿರಕಾಲ ಸಂಪಾದನಂಗೈದ ಸತ್ಕೀರ್ತಿ |
ಪರಿಪಾಲನಂಗೈವುದುಚಿತಮಲ್ಲದೆ ಮುನೀ |
ಶ್ವರನೊಡನೆ ತರಳನಂ ಕಳುಪದಿರಲೆಡೆಗೊಂಬುದೈಸೆ ದುಷ್ಕೀರ್ತಿ ಬಳಿಕ ||
ಉರುಕೋಪದುಷ್ಟದಿಂ ಸಿರಿಬಲಂಗಳಿಗೂನ |
ಬರುವುದಿದು ನಿಶ್ಚಯಂ ಸುರನಾಥಮುಖ್ಯರೀ |
ಪರಿಯ ಕಂಡಳ್ಕುತಿಹರದರಿಂದಲಾನೊರೆವೆನಿದು ಸತ್ಯಮೆಂದೆಣಿಪುದು || (16)

* ಅಕ್ಷಯ ತಪೋಬಲದೊಳಖಿಲನಿಶಿಚರಬಲವ |
ಶಿಕ್ಷೆಗೈದೀ ಮಹಾಧ್ವರದತುಲಕೃತ್ಯಮಂ |
ರಕ್ಷಣೆಯ ಮಾಡಿಕೊಳಲಾಪನಾದರು ನಿನ್ನೊಳತಿಪ್ರೀತಿಯಿಂದೆ ಬಂದು ||
ಲಕ್ಷಿಸಿ ಸಮಾಖ್ಯಾತ ಭೂಭುಜರ ಮಧ್ಯದೊಳ್ |
ಲಕ್ಷಮೆಂದೆನಿಪಂತೆ ಮಾಡಲುಜ್ಜುಗದುತ್ಕ |
ಟಾಕ್ಷದಿಂದೈತಂದರೆಂದರಿತು ತನಯನಂ ಇತ್ತು ಕೃತಕೃತ್ಯನಹುದು || (17)

---

* ತೇಷಾಂ ನಿಗ್ರಹಣೇ ಶಕ್ತ ಸ್ವಯಂ ಕುಶಿಕಾತ್ಮಜಃ ||
ತವಪುತ್ರಹಿತಾರ್ಥಾಯ ತ್ವಾಮುಪೇತ್ಯಾಭಿಯಾಚತೇ || ೨೦ ||

(ವಾ. ರಾ.—ಏಕವಿಂಶಸ್ಸರ್ಗಃ)

* ಪರಮುಗೋಪ್ಯವನೊಂದನೊರೆವೆನಾಲಿಸು ಮೊದಲು |
ಧರೆಯಭಾರವನಿಳುಹಬೇಕೆಂದು ಸುರಮುಖ್ಯ |
ಸರಸಿಜಾಸನಮೌನಿಜನಪ್ರಾರ್ಥನಂಗೈಯೆ ಶ್ರೀಮಹಾವಿಷ್ಣು ಮುದದಿ ||
ಕರುಣಾಕಟಾಕ್ಷದಿಂ ಧರಯೊಳುಂ ನಿನ್ನೊಳವ |
ತರಗೈದನುರಗಚಕ್ರಾಬ್ಜಂಗಳೊಡವೆರೆದು |
ಶರಧಿಶಯನನುಕುಂದನದರಿಂದೆ ತನಯನೆಂದೆಣಿಸದಿರು ನಿಜಚಿತ್ತದಿ || (18)

ಅದಿತಿಕಶ್ಯಪರಿರ್ವರುಂ ನೀನುಕೌಸಲ್ಯೆ |
ಯದುಭುತದ ತಪವನಾಚರಿಸಲ್ಕೆ ಪೂರ್ವದೊಳ್ |
ಸದಯಶ್ರೀಮಹವಿಷ್ಣು ಸಂತೋಷದಿಂದಲೈತಂದು ನಿಮ್ಮಯ ತಪಕ್ಕೆ ||
ಮುದವಾಂತು ವರವ ಬೇಡುವುದೆನಲ್ ದೇವ ಸ- |
ರ್ವದ ಮನುಜರೂಪಿಂದೆ ಮದ್ಗರ್ಭದೊಳಗುದಯಿ |
ಪುದು ಕೃಪೆಯೊಳೆಂದೊಡಂಗೀಕರಿಸಿ ಪಾಲಿಸಿದನಿಷ್ಟವನ್ನಬ್ಜಾಕ್ಷನು || (19)

ಸುರಮೌನಿವಂದಿತಂ ಸತ್ಯಭಾರತಿಯಾದ |
ಪರಿಯಿಂದ ನರರಂತೆ ನಿನ್ನೊಳವತರಿಸಲ್ಕೆ |
ಬರಮಾದುದುರಗೇಶಶಂಖಚಕ್ರಂಗಳಿಂದನುಜಾತರಪದೇಶದೆ ||
ಗುರುತರದ ಗೋಪ್ಯದಿಂ ಮತ್ತಾರೊಳಾದರಿದ |
ನೊರೆಯಬಾರದು ಮನದೊಳಿರಿಸದಿರು ಸುತರೆಂದು |
ವರಮೌನಿಯೊಡನೆ ಕಳುಪುವುದೆಂದರುಂಧತಿಯರಸ ಪೇಳ್ದನೇಕಾಂತದಿ || (20)

ಶತಪತ್ರಮಿತ್ರನಭ್ಯುದಯಮಾಗಲ್ ಶೀತ |
ತತಿ ಮಸುಳನಾಂತಂತೆ ಬೀತುದತುಲಿತಚಿತ್ತ |
ಗತಮಾದ ಚಿಂತೆ ಸಂತಸಗೊಂಡನಾ ನೃಪಂ ಸಕಲಾರ್ಥ ಹಬ್ಬಿದಂತೆ ||
ಯತಿಯೊಡನೆ ಸುತನ ಸಂಗತಿಗೊಳಿಪೆನೆಂದೆನುತ |
ಮತಿಯಳಾಲೋಚಿಸಲ್ಕತಿಹರುಷವಾಂತೊಡು- |
ನ್ನತಿಯಿಂದ ವಿಪ್ರಸಂತತಿ ಪೊಗಳಲಾ ದ್ವಿಜರ್ ಸಂತೋಷದಿಂದ ನಲಿಯೆ || (21)

ಮೂರುಲೋಕವ ಸೃಜಿಪ ಸಾರಸಾಸನತಾತ |
ನೋರಂತೆ ನಿಜತನಯನೆಂಬ ಮೋಹಕದಿಂದೆ |
ಬಾರೆನ್ನ ತಾತ ಶ್ರೀರಾಮ ಬಾರೆಂದೆನುತ ಮುಂಡಾಡಿ ಮಸ್ತಕವನು ||
ತೋರಪ್ರಿಯದಿಂದಂಕಲ್ಲಿಟ್ಟು ಮುನಿವರನು |
ದಾರಯಾಗವ ಸಲಹಿ ಬಪ್ಪುದೆನ್ನುತ ದಿವ್ಯ |
ಸಾರಮೃದುವಾಣಿಯಿಂದುಸುರೆ ಜನಕನ ನೇಮಮಂ ಶಿರದೊಳಾಂತನೊಲಿದು ||

---

* ಇಲ್ಲಿ ಪರಮುಗೋಪ್ಯವೆಂದು ಹೇಳುವ ಈ ವಿಷಯವು ವಾಲ್ಮೀಕಿರಾಮಾಯಣ ದಲ್ಲಿರುವುದಿಲ್ಲ.

ಅಂಬುಜಾಪ್ತಾನ್ವಯಶಿಖಾಮಣಿಯು ಕೌಶಿಕ ಪ |
ದಾಂಬುಜಂಗಳ ಮುದದಿ ಪೂಜಿಸುತ ನಲಿದು ನಿಜ |
ಡಿಂಭಕನ ಕರತಳದೊಳಿತ್ತು ವಂದನೆಗೈದು ಹರುಷವಾಂತಿರೆ ಮುನೀಶಂ |
ತಂಬೆಲರ ಸೂಸುತಂ ತನುವನುಚ್ಚಳಿಸುತಾ |
ಗಂಬುಜಾರಿಯ ಬಿಂಬ ವಿಪ್ರಸನ್ನತೆಯಾಂತ |
ವೆಂಬುದೇನಖಿಳಮುನಿಗಳು ಪೊಗಳಲಾಗಯಿಂತೆಂದ ಮುನಿ ವಿನಯದಿಂದೆ ‖ (23)

ಇರುಳಿರೆಯನುದಯಾಸ್ತಮಯವೆಸನತತಿಗಳಂ |
ತರಳನೆಂಬಭಿಲಾಷೆಯಿಂದಬ್ಧಿಯನುಸರಿಪ |
ಪರಿ ಸಹಜ ಕೈರವಸಮೂಹ ವಾರ್ಧಿಯನಾಳಲೇನು ಸಂಬಂಧ ಬಳಿಕ ‖
ಧರೆಯೊಳಗೆ ಸಾಧುಗಳು ಸಾಧುಗಳ ಸಖತನಂ |
ನಿರತನೇಹವ ಬೆಳೆಸದಿರ್ದಡೆಯು ನಿಶ್ಚಿಂತ |
ಸರಸಿರುಹಸಖವಂಶಭೂಭೃಲ್ಲಲಾಮ ನೀಂ ಸಕಲಾಗಮಜ್ಞನಲ್ತೆ ‖ (24)

ಉದಧಿಯುದರದೊಳುದಿತ ಸುರಧೇನು ಕಲ್ಪತರು |
ಪದುಮ ಕುವಲಯ ರತ್ನ ಕೌಸ್ತುಭ ಕರೀಂದ್ರ ಹಯ |
ವಿಧು ಮೌಕ್ತಿಕಾದಿನಾನಾವಸ್ತುಸಂಚಯುಗಳೆಂಬುದೆಲ್ಲರ್ಬಲ್ಲರು ‖
ವಿದಳಿಸುತ ಸಕಲವಸ್ತುಗಳ ಸಂತತಿಗಳ- |
ಭ್ಯುದಯಮುಂಟದೆ ಕುಮುದಬಂಧುಬಂಧುತ್ವಮಂ |
ಮುದದಿಂದಲಾಂತನೋಷಧಿಯರಸನೇನೆಂಬೆನೀ ಮಹಾಚಿತ್ರತರವ ‖ (25)

ನಿಲಯಕೈತಂದ ದ್ವಿಜಸತ್ತಮರ ಸಂಪೂರ್ಣ |
ಫಲಿತರೆಂದೆನಿಸಿ ಕಳುಹಿದರಖಿಳದೇವರ್ಕಳ |
ಳಲಘು ಪಿತಪೈತಾಮಹಾದಿಗಳು ಸಂತೋಷರಪ್ಪರಿದು ನಿಗಮಾರ್ಥವು ‖
ಸುಲಭಮಲ್ಲವು ಸಕಲದೊರೆಗಳಿಗೆ ನೋಡೆ ನಿಜ |
ಕುಲಶೀಲವಾಂತ ನೃಪಮುಕುಟಲಾಲಿತಚರಣ |
ಜಲಜಾಪ್ತಗೋತ್ರಪಾವಿತ್ರ ಸಚ್ಚಾರಿತ್ರ ಪಂಕ್ತಿರಥ ಭೂಭುಜೇಶ ‖ (26)

ಕೃತವಿದ್ಯನಾಗಲಕೃತಾಸ್ತ್ರಿಯಾಗಲಿ ದೇವ |
ನತಗಾಧಿನಂದನನ ವಶವರ್ತಿಯಾದ ನಿಜ |
ಸುತನ ನಿಟ್ಟಿಸೆ ಫಾಲಲೋಚನಾದಿಗಳಳವೆ ದೈತ್ಯರೇಂ ತುಚ್ಛಜನರು ‖
ಶತಪತ್ರಮಿತ್ರಕರನಿಕರಮಂ ಖದ್ಯೋತ |
ತತಿಗಳೇಂ ಗೈದಪವು ಸುತನೆಂಬ ಮಮತೆಯ |
ನ್ನತಿಗಳೆದು ಯಮಿಚಕ್ರವರ್ತಿಸಂಗಡಿಗರೆಂದೆನಿಸಿ ಕೃತಿಯಪ್ಪುದರಸ ‖ (27)

ಗುರುಸರಸ್ವತಿಯಿಂದ ಪರಿದುಪೋದುದು ಚಿತ್ತ |
ಪರಿತಾಪ ಭೂಪಾಲನಾಗಲತುಲಾನಂದ |
ಪರಮಸಂತೋಷದಿಂದಿತ್ತನಪ್ಪಣೆಯನುಂ ಮುನಿಸಹಿತ ನಿಜಸುತಂಗೆ ||
ಪರಮಋಷಿಗಳು ಮಂತ್ರಿಸತ್ತಮರು ಪಥಕೆ ಶುಭ |
ಕರಬೀಜಮೆನಿಪ ಮಂಗಳವ ರಚಿಸಲ್ಬೇಗ |
ತರಳರನ್ನೊಡಗೊಂಡು ನಡೆದನಾ ಮುನಿವರ್ಯ ತತ್ಪುರವನುಳಿದು ಜವದಿ || (28)

ಸಾಯಕವ ಪಿಡಿದು ಮುನಿರಾಯನೊಳು ಮೂಲೋಕ |
ಪ್ರಿಯನಜನಪೌತ್ರನೈತಂದನಾ ಪೌರಸಮು |
ದಾಯಮೆಡಬಲವಂಕದಲಿ ನುತಿಸುತಿರಲನುರತತಿ ಕರೆಯೆ ಪೂಮಳೆಗಳ ||
ತೋಯಜಾಂಬಕನೊಡನೆ ತೊಳಪ ಸದ್ಭಕ್ತಿಯಿಂ |
ಜೀಯ ಪಾಯವದಾರುಯೆಂದು ಸೌಮಿತ್ರಿಯು ವಿ |
ಡಾಯದಿಂ ಮುಂಗಡೆಯಲೈತರಲ್ಮುನಿಪತಿಯು ಸಂತಸದಿ ಹಿಗ್ಗುವಂತೆ || (29)

*ಶರಚಾಪಪಾಣಿಗಳು ಮಿರುಮಿರುಪ ಖಡ್ಗಿಗಳು |
ಶರಕಲಾಪಿಗಳಮಿತದೀಪ್ತಾಂಗರತಿಬಲರ್ |
ತರುಣಾರ್ಕನಿಭಶೌರ್ಯ ಕಾಕಪಕ್ಷಾನ್ವಿತರ್ ಕಲಭಸದ್ಗಮನಯುತರು ||
ತರಣಿವಂಶೋದ್ಭೂತರಾಮಲಕ್ಷ್ಮಣರಿಂದೆ |
ಪರಮಋಷಿ ಊರ್ಧ್ವಶಿರಮೂರುಳ್ಳ ಪನ್ನಗದ |
ಪರಿಯಂತೆ ವಿಧಿಯೊಡನೆ ಬರ್ಪ‌ರಶ್ವಿನಿಗಳೆನೆ ಕುವರರೆಡಬಲದೊಳೆಸೆಯೆ || (30)

ಮದಗಜಗಳೆಂಬಂತೆ ಮುಂಬರಿದು ಬಹ ತೆರೆಗ |
ಳುದಯದಿಂ ಕ್ರೀಡಿಸುವ ಕಾರಂಡ ಪಂಸೆಗಳ |
ವಿಧವಿಧದ ಚಾರು ನಿಃಸ್ವನದಿಂದ ವ್ಯಾಕೋಚಕಮಲಷಂಡಂಗಳಿಂದ ||
ಚದುರಿಂದಲವಗಾಹನೆಯ ಮಾಳ್ಪ ಲಾವಣ್ಯ |
ಸುದತಿಯರ ದರಹಾಸಚಂದ್ರಿಕಾಮೋದದಿಂ | [ತರಳರೊಡನೆ || (31)
ದಿದಿರೊಳು ವಿರಾಜಿಸುವ ಸರಯೂಮಹಾನದಿಯ ದಾಂಟಿದಂ

---

* ವಿಶ್ವಾಮಿತ್ರೋ ಯಯಾವಗ್ರೇ ತತೋ ರಾಮೋ ಧನುರ್ಧರಃ ||
ಕಾಕಪಕ್ಷಧರೋ ಧನ್ವೀ ತಂಚ ಸೌಮಿತ್ರಿರನ್ವಗಾತ್ || ೬ ||
ಕಲಾಪಿನೌ ಧನುಷ್ಪಾಣೀ ಶೋಭಯಾನೌ ದಿಶೋದಶ ||
ವಿಶ್ವಾಮಿತ್ರಂ ಮಹಾತ್ಮಾನಂ ತ್ರಿಶೀರ್ಷಾವಿವಪನ್ನಗೌ || ೭ ||
ಅನುಜಗ್ಮತುರಕ್ಷುದ್ರೌಪಿತಾಮಹಮಿವಾಶ್ವಿನೌ ||
ತದಾ ಕುಶಿಕ ಪುತ್ರಂತು ಧನುಷ್ಪಾಣೀ ಸ್ವಲಂಕೃತೌ || ೮ ||
(ವಾ. ರಾ.—ದ್ವಾವಿಂಶಸ್ಸರ್ಗಃ)

ಮರೆದೊಮ್ಮೆ ನೆನೆದ ಮಾತ್ರದಿ ಭವಾಬ್ಧಿಯ ತೆರೆಯ |
ಪರಿದು ಸುಖವೀವ ಸತ್ಯಾನಂದ ಸುರಮೂರ್ತಿ |
ಬರುತಿರಲು ತನ್ನೊಡನೆ ನದಿಯನುತ್ತರಿಪುದೇನತಿಶಯವು ಕೌಶಿಕಂಗೆ ||
ಸುರತರುವು ತನ್ನವಶದೊಳಗಿರ್ದಡೆಯು ಬಯಕೆ |
ಸಿರಿ ಪೆರ್ಚಿಬರ್ಪುದೇನತಿಶಯಮೆ ಶ್ರೀರಾಮು |
ಕರಗತನ ಮಾಳ್ಕೆಯೊಳ್ ಸಂಗಡಿಗನೆಂದೆನಿಸೆ ಶ್ರೇಯಸ್ಸುಸುಖಕೆ ಬರವೆ || (32)

ಎಂದು ವೃಂದಾಕರ ಬೃಂದವಾನಂದದಿಂ |
ಪೊಂದಿ ಸನ್ನುತಿಗೈವುತೈತರಲು ಕೌಶಿಕಂ |
ಬಂದು ಸರಯೂನದಿಯ ದಾಂಟುತರೆಯೋಜನದಿ ಪೃಥುಕರನ್ನುಪಚರಿಸುತ ||
ನಿಂದು ನಿಟ್ಟಿಸುತಲಿರಲೆಡಬಲವನನಿತರೊಳ್ |
ಬಂದ ಸಂಕ್ರಂದನನು ಮುನಿಪನೊಡನಿಂತೆಂದ |
ತಂದೆ ಧರೆಯರಸನಂ ಯಾಗರಕ್ಷಣೆಗೆಂದು ಸಂದುದಭಿಲಾಷೆ ನಿನಗೆ || (33)

ಮೊದಲೊಳ್ ಭೃಶಾಶ್ವನಿಂ ನೀ ಕಲಿತ ಮೂಲೋಕ |
ದದುಭುತದ ಶಸ್ತ್ರಾಸ್ತ್ರವಿದ್ಯೆಯಂ ರಾಮುಗ- |
ಭ್ಯುದಯಕೋಸುಗ ಬೇಗನುಪದೇಶಗೈವುದೆನಲಾ ನುಡಿಯ ಕೇಳಿ ಮೌನಿ ||
ಇದು ಸಮಯಮಹುದೆಂದು ಮೃದುಮಧುರವಾಣಿಯಿಂ |
ವಿಧಿಯ ಪಿತ ತಾತ ರಘುವಂಶಸಂಜಾತ ಬಾ |
ಸದಯ ಸತ್ಕೌಶಲಿಯೆನುತ್ತ ರಘುವೀರನಂ ಕರೆದೊರೆದನಧಿಕಪ್ರಿಯದಿ || (34)

ಉಭಯ ವಿದ್ಯೆಗಳಿರ್ಪವೆನ್ನೊಳಗೆ ಮತ್ತವಕೆ |
ಶುಭನಾಮಮೆಸೆವ ಬಲಮತಿಬಲಗಳೆಂದೆನುತ |
ಮುಭಯ ವಿಕ್ರಮ ಶತ್ರುಹರ ದಿವ್ಯಕಾಂತಿಯುಂ ಕ್ಷುತ್ಪಿಪಾಸಾಹರಣವು ||
ವಿಬುಧಮುಖ್ಯಾದಿಗಳು ಸಮನಿಸಿದರತುಲಬಲ |
ವಿಭವ ಸತ್ಕೀರ್ತಿ ಸಂಭವಮಪ್ಪುದಿವ ಜಪಿಸ |
ಲಭವಾದ್ಯರೆಣೆಯಲ್ಲವೀ ವಿದ್ಯ ಪೊಂಬೊಡೆಯನಣುಗರೆಂದರಿವುದಣುಗ || (35)

ಕರಪಾದಗಳ ತೊಳೆದು ಕಲುಷಹರಸತ್ಕೀರ್ತಿ |
ಕರಮಂತ್ರಮುಭಯಮಂ ಕರುಣದಿಂ ಸ್ವೀಕರಿಸು |
ದೊರೆಯಪ್ಪೆ ನೀ ಮೂರು ಲೋಕಕೆನಲಾ ಮಾತ ಲಾಲಿಸುತ ದಾಶರಥಿಯು ||
ಹರುಷದಿಂ ಮೌನಿ ಪೇಳ್ದಂತೆ ಮಂತ್ರಗಳಂ |
ತ್ವರಿತದಿಂ ಸಂಗ್ರಹಿಸಿ ಮತ್ತಾ ತಪೋಧನಗೆ |
ಗುರುಪೂಜೆಯಂಗೈವುತನುಜಸಹ ಬೆಳಗಿದಂ ಕಿರಣಮಾಲೆಗೆ ಮಿಗಿಲೆನೆ || (36)

ಹರಮಹಾದೇವ ಶಂಕರ ದಯಾಪರ ಸರ್ವ |
ಗುರು ಮಾಹಾವಿಷ್ಣು ಕೌಶಿಕನಲ್ಲಿ ವಿದ್ಯವನುಂ |
ಹರುಷದಿಂ ಕಲಿತು ಶುಶ್ರೂಷಂಗೈದನೆಂದೊರೆದರಿದು ನೀಚವುತ್ತೆ ‖
ಸಿರಿಯರಸನೆಲ್ಲಿ ಮತ್ತೀ ವಿಪ್ರ ತಾನೆಲ್ಲಿ |
ಧರೆಯೊಳಿದು ಚೋದ್ಯವಾಗಿಹುದೆಂದು ಬಿನ್ನವಿಸೆ |
ಗಿರಿರಾಜ ತನುಜೆಗಾ ಫಾಲಲೋಚನನೆಂದ ಪೇಲ್ಗತೆಯನತಿಹರ್ಷದಿ ‖ (37)

ನೈಮಿಷಾರಣ್ಯದೊಳ್ಪತ್ತು ಸಾಸಿರವರ್ಷ |
ಭ್ರಾಮುಕತ್ವವನುಳಿದು ಕ್ರೂರತರತಪವ ಮುನಿ |
ಸೋಮವಿಶ್ವಾವಿತ್ರನೆಸಗಿದಂ ಶಶಿಸೂರ್ಯನೇತ್ರನಂ ಪ್ರಾರ್ಥಿಸುತಲಿ ‖
ತಾಮರಸಲೋಚನಂ ತಪಕೆ ಮೆಚ್ಚುತ ನಿಜ-|
ಸ್ತೋಮದೊಡನೈತಂದು ಕರುಣದಿಂ ಕುಸ್ತರಿಸಿ |
ಕಾಮಿತಮದೇನಂಟು ಬೇಡಲಿತ್ತಪೆನೆಂದಡಿಂತೆಂದನಾ ಮೌನಿಯು ‖ (38)

ತಪದಿಂದ ಸುಪ್ರೀತನಾದುದುಂಟಾದಡೆಯು |
ಸಫಲಮೆನಿಸುವೆನೆಂಬ ಕೃಪೆ ನಿಮ್ಮೊಳಿರ್ದೊಡಂ |
ಕಪಟನಾಟಕಸೂತ್ರಧಾರಿ ನೀನೆನ್ನ ತನುಜಾತನೆಂದೆನಿಸೆನಲ್ಕೆ ‖
ವಿಪುಳಮತಿ ವಿಪ್ರಕುಲತಪನ ಕೇಳೀ ನುಡಿಯ |
ಕಪಟಮಲ್ಲವು ನೈಜ ಭೂಭಾರಹರಣಕಂ |
ತಪಸಿಗಳ ಪೊರೆಯಲುಂ ಮನುಜಾವತಾರಮಂ ತಾಳೆಂದು ಪೂರ್ವದಲ್ಲಿ ‖ (39)

ಸಾರಸಾಸನಮುಖ್ಯಸುರರೆಲ್ಲ ಪ್ರಾರ್ಥಿಸಲು |
ಧಾರಿಣಿಯೊಳುದಿಪೆನೆಂದಭಯಮಿತ್ತಿಹ ಕತದೊ |
ಳಾ ರಘೂತ್ತಮವಂಶಸಂಭೂತನೆಂದಿನಿಸಿ ನಿನ್ನಲ್ಲಿ ಬಿಲುವಿದ್ಯದ ‖
ಸಾರಮಂ ಸಂಗ್ರಹಿಸಿ ಶಿಷ್ಯನಹೆ ಜಗದೊಳ್ಕು |
ಮಾರತನುಜಾತರೀ ಮೂವರುಂ ಸಮವೆಂದು |
ಕಾರುಣ್ಯಪಾತ್ರ ಸುತರೆಂದೆನಿಪರೆಲೆ ಧೀರ ಸಾರಹೃದಯರ್ಜಗದೊಳು ‖ (40)

ಶರಣಜನತಾದಯಾಪರ ಸತ್ಯವಾಣಿ ಹರಿ |
ಸುರಪಸಖದಶರಥನ ಕರುಣದಿಂದಲಿ ಸಲಹೆ |
ಧರಿಸಿ ಮನುಜಾಕೃತಿಯ ಬಾಲಲೀಲೆಗಳೆಲ್ಲ ತೋರಿ ನಾನಾಪರಿಯಲಿ ‖
ವರಮೌನಿಗಂ ಪೂರ್ವದತ್ತವರಮಂ ಸಲಿಸಿ |
ಶರವಿದ್ಯೆಯುಪದೇಶಮಂ ತಾಳ್ದು ಮನದೊಳಗೆ |
ತರಳನೆಂಬತಿಪ್ರೀತಿಯಂ ಪುಟ್ಟಿಸಿದನಗಜೆ ಜಗದೀಶ ಪ್ರೇಮದಿಂದೆ ‖ (41)

ಧರಿಸಿದ ಬಲಾತಿಬಲಮೆನಿಪ ವಿದ್ಯೆಗಳೆರಡ |
ನೆರೆದಂ ಸಹಸ್ರರಶ್ಮಿಗಳಿಂ ವಿರಾಜಿಸುವ |
ತರಣಿಯಂದದಿ ರಾಮ ಗಾಧಿನಂದನನಂಘ್ರಿಪಲ್ಲವಗಳಂ ಪೂಜಿಸಿ ||
ಪರಿಪರಿಯಲಾ ಮುನಿಯ ನುತಿಗೈದು ಬೇಗದಿಂ |
ಗುರುಕೃತ್ಯಗಳ ಮಾಡಿ ಮಗುಳೆ ವಂದಿಸಿ ನೋಡಿ |
ಹರುಷದಿಂ ಸತ್ರಾಮಮಿತ್ರಾತ್ಮಜನೊಳೆಂದನತಿಮಧುರಭಾಷೆಯಿಂದೆ || (42)

ನಾಳೀಕನಿಚಯಮರೆಮುಗಿದವಂಬಕಗಳ-|
ನ್ನಾಳಿ ತೆರಳಲ್ಕೆ ಕೈರವಗಳುಂ ಸಾರತಮ |
ಧೂಳಿಯೊಳ್ಪೊರಳಿ ಕ್ರೀಡಿಸುತಿರಲ್ಕ ಕ್ರತತಿ ಮರುಗುತಿರೆ ಮಮತೆಯುಳಿದು ||
ಹೇಳಿಯ ಕರಂಗಳತಿ ರಾಗದಿಂದಂಬರದ |
ಕೇಳೀಗೃಹವನುಳಿದು ವಾರುಣೀನಿಳಯ ಪ್ರ |
ತೋಳೀಸಮಾಗಮದಿ ನಲಿಯುತಿದೆ ಸಮಯಮಿದು ನಿತ್ಯಕರ್ಮವ ಮಾಳ್ಪಡೆ ||

ಎಂದೊರೆಯೆ ವಿಪ್ರ ರಘುನಂದನಂ ಹರ್ಷದಿಂ |
ಬಂದು ಸರಯೂನದಿಯೊಳುದಕಮಂ ನಿಜಕರಗ |
ಳಿಂದೆತ್ತಿ ಹಸ್ತಪಾದಂಗಳಂ ಶುಚಿಗೈದು ರಚಿಸಿ ಸಂಧ್ಯಾಕರ್ಮಮಂ ||
ಇಂದಿರಾವರನಂಘ್ರಿಯುಗಳಮಂ ಧ್ಯಾನಿಸುತ |
ವಂದನಂಗೈದು ಗುರುಕುಶಿಕಾತ್ಮಜಾತನಿಗೆ |
ಬಂಧುರದ ಹರ್ಷದಿಂ ಅನುಜಾತನೊಡವರೆದು ಸಂತೋಷದಿಂದಿರಲ್ಕೆ || (44)

ಕೋಮಲಮೃದೂಕ್ತಿಯಿಂ ನಿರ್ಭರಿತಕಥೆಗಳಂ |
ಪ್ರೇಮದಿಂದೊರೆಯೆ ಮೃದುತೃಣದ ಪಾಸಿಕೆಯಲ್ಲಿ |
**ರಾಮಪುರದರಸ**ಲಕ್ಷ್ಮಣಸಹಿತ ಪವಡಿಸಿದನಂದಿನಿರುಳೊಳ್ಸುಖದಲಿ ||
ಶ್ರೀಮನೋಹರನೊಡನೆ ಸಂಭ್ರಮದೊಳಿರ್ದು ಮುನಿ |
ಸೋಮನಿಹ ಭಾಗ್ಯಮಂ ನಿಟ್ಟಿಸುವೆನೆಂದೆನುತ |
ಸೋಮನತಿರಾಗದಿಂ ಪೌರುಹೂತೀವದನಮಧುರಸವ ಚುಂಬಿಸಿದನು || (45)

ಸಂಧಿ 11 ಕ್ಕಂ ಪದಂಗಳ್ 613

---

# ಹದಿನೆರಡನೆಯ ಸಂಧಿ

ಸೂಚನೆ॥ ಅಂಗಂ ಕರೂಶಮಲದಾದಿದೇಶಂಗಳ ಬೆ ।
ಡಂಗ ನಿಟ್ಟಿಸಿ ತಾಟಕಾಹರಣಗೈದು ಮುನಿ ।
ಪುಂಗವನ ಸಂಗಡಿಗರಾಗಿ ಸಿದ್ಧಾಶ್ರಮಕ್ಕೈತಂದ ರಘುವೀರನು ॥

ತಂಗಾಳಿ ತೀಡೆ ತಾರಕೆಗಳಧಿಪತಿಯೋಡೆ ।
ಭೃಂಗಾಳಿ ಮೊರೆಯೆ ಭುಲ್ಲೈಸಿ ಚಕ್ರಂ ನಲಿಯೆ ।
ಸಿಂಗರದಿ ಮುದ್ದಂಚೆಗಳ್ಕುಣಿಯೆ ಸಲ್ಲಲಿತವಾಗಿ ದ್ವಿಜಗಣಗಳುಲಿಯೆ ॥
ಮುಂಗಡೆಯಲೈಂದ್ರೀಕುಚೋಪಮಿತಮತುಲಿತೋ ।
ತ್ತುಂಗತರಶೈಲಾಗ್ರಶಿಖರದಿಂದೊಗೆದುಂ ಪ ।
ತಂಗನೈತರಲಾದುದೆಚ್ಚರಿಕೆ ಕುಶಿಕಾತ್ಮಭವನಿಗಬ್ಜಾಯತಾಕ್ಷಿ ॥ (1)

ರವಿವಂಶಕಲಶವಾರಿಧಿಚಂದ್ರ ರಾಜೇಂದ್ರ ।
ಧವ ರಾಕ್ಷಸೋತ್ತಮಕರೀಂದ್ರವಂಶಮೃಗೇಂದ್ರ ।
ಕುವಲಯಾಮೋದ ಕರುಣಾಸಾಂದ್ರ ವಿಪ್ರೇಂದ್ರನತ ವಂದಿತಾಮರೇಂದ್ರ ॥
ಶಿವಕರಸುನಾಮ ಶ್ರೀರಾಮ ಮೇಘಶ್ಯಾಮ ।
ನವಪೂರ್ವಸಂಧ್ಯಾರುಣಾನುವರ್ತನೆಯಾಯ್ತು ।
ತವಕದಿಂದುಪ್ಪವಡಿಸಾಹ್ನಿಕಂತರ್ಪಣಗಳಾದಿಗೆ ನೃಪುಂಡರೀಕ ॥ (2)

ಭೂಸುರೋತ್ತಮನತ್ಯುದಾರವಚನವ ಕೇಳಿ ।
ದಾಶರಥಿಗಳ್ ಸ್ನಾನಮಂ ಮಾಡಿ ಬೇಗದಿಂ ।
ಭಾಸಾಧಿಪಂಗರ್ಘ್ಯಮಿತ್ತಾಹ್ನಿಕಕ್ರಿಯೆಯ ರಚಿಸಿ ಮನದಾನಂದದಿ ॥
ಶ್ರೀಶನಂ ನೆನೆದಾ ಮುನೀಶನಂಘ್ರಿಗೆ ನಮಿಸಿ ।
ವಾಸವಕುಮಾರಸನ್ನಿಭನಿದಿರೊಳೊಪ್ಪಿರಲು ।
ಮೇಶಸಂಕಾಶಶಮಧನಿಯತುಲಹರ್ಷದಿಂ ಗಮನಮಂ ನೆನೆದ ಮನದಿ ॥ (3)

ನೃಪಕುಮಾರಕರೊಂದುಗೂಡಿ ಮುನಿಪುಂಗವಂ ।
ವಿಪುಲಪಂಥಾನವನ್ನನುಕರಿಸಿ ಗಮಿಸುತಿರೆ ।
ತಪನವಂಶಾನುವರ್ಧಕಿ ತ್ರಿಪಥಗಾಸರಯುಸಂಗಮಂ ಕಣ್ಗೆಸೆಯಲು ॥
ಅಪರಿಮಿತಮಹಿಮ ರಘುವೀರ ಪುಣ್ಯಾಶ್ರಮಂ ।
ಚಪಲತಾಹರಮಿಲ್ಲಿ ನಿಶಿಯನಪಹರಗೈದು ।
ತಪನು ಪುಟ್ಟಿದ ಬಳಿಕ ಪೋಪಂತೆ ಮಾಳ್ಪುದೆನಲಿಂತೆಂದರಾ ಕುವರರು ॥ (4)

ಮುನಿಪ ಪುಣ್ಯಾಶ್ರಮಮಿದಾರದೀ ನೆಲದಲ್ಲಿ |
ಮನವೊಲಿದುವಾವ ಸಂಯಮಿಯಿರ್ದನಾ ಕಥೆಯ |
ವಿನಯದಿಂ ವಿಸ್ತರಿಸವೇಳ್ಕೆಂದು ಬಿನ್ನವಿಸಲರ್ಭಕರನುಡಿಗೇಳುತ ‖
ಮಿನುಗಿಸುತ್ತೆಳನಗೆಯ ಮುದ್ದಿಸುತ ಶ್ರೀರಾಮ |
ಘನನೀಲಸಂಕಾಶಕಾಯ ಸನ್ಮುನಿಗೇಯ |
ಜನನಾಥವರ್ಯ ಲಾಲಿಸು ಪೂರ್ವಸತ್ಕಥೆಯನಪಹೃತಮನೋವ್ಯಥೆಯನು ‖ (5)

ಶುಕಶೌನಕಾದಿಮುನಿನಿಕರಸೇವಿತಪಾದ |
ಭಕುತವತ್ಸಲ ಮಹಾದೇವ ದೇವೇಶಾನ |
ನಕಲಂಕನಿರ್ಗುಣನಿಜಾನಂದದಿಂ ಪ್ರಮಥಗಣಸೇವ್ಯನೆನಿಸಿ ಮುದದಿ ‖
ಪ್ರಕಟಿತತಪೋನಿಷ್ಠೆಯಿಂದಿರಲ್ಕೆಲಕಾಲ |
ಮಕರಾಂಕನೈತಂದು ದುರ್ವಾರಗರ್ವದಿಂ |
ನಿಖಿಲಸುರರಿಂದ ಬೋಧಿತನಾಗಿ ತನಗಪ್ಪ ಹಾನಿಯಂ ಗಣನೆಗೊಳದೆ ‖ (6)

ಶುಕಮಯೂರಗಳಂಚೆಕೊಂಚೆಸಾರಸಗಳಿಂ |
ಪಿಕ ಮಲಯಪವಮಾನ ವಿಧು ಮಿಳಿಂದಂ ಕಮಲ |
ಮುಕುಳಶರಮಾಂತು ಮೂಲೋಕ ತಲ್ಲಣಗೊಳುವೊಲೈತಂದು ಹರನ ತಪವ ‖
ಸಕಲ ಚತುರೋಪಾಯಗಳನೆಸಗಿ ಪ್ರತ್ಯೂಹ |
ನಿಕಟಮೆಂದೆನಿಸಲಾ ಕಂಕಟೇರಗೆ ಕೋಪ |
ಚಕಚಕಿತವಾಗಿ ಮುಂಬರಿದುದನ್ನೇನೆಂಬೆನಾ ಮಹಾಭೀಕರವನು ‖ (7)

ಈ ತಾಣದಲ್ಲಿ ಪುರಭಿನ್ನಿಟೇಲಾಂತರದಿ |
ಜಾತಾಂಬಕಾಗ್ನಿಯಲಿ ಶಲಭನಂದದಿ ಮನೋ |
ಜಾತನಂಗವನುಳಿದನಂಗನೆಂದೆನಿಸಲ್ಕೆ ಧಾತ್ರಿಯಿಂದೆಲ್ಲ ಜನರಿಂ ‖
ಖ್ಯಾತವಾಗಿಹುದಂಗಸಂಜ್ಞೆಯಲಿ ಜನಪದಂ |
ತಾತ ಮತ್ತೀ ನೆಲದಿ ಹರಿಯನುಂ ಪೂಜಿಪ ವಿ |
ನೀತರಿಗೆ ಭವಭಯಗಳಂಟವದರಿಂದಾವು ಪ್ರೀತಿಯಿಂ ರುಷಿಗಳೊಡನೆ ‖ (8)

ಪರಮಪುಣ್ಯಾಶ್ರಮದೊಳಿರುವ ಜಾಟಾಟೀರ |
ಪರಮರುಷಿಯದರಿಂದಲಾವಿಂದಿನಿರುಳಿರ್ದು |
ವಿರಚಿಸಿಯೆ ಸ್ನಾನಸಂಧ್ಯಾದಿಕೃತ್ಯಂಗಳಂ ನಿರ್ಮಲಾಂತಃಕರಣದಿ ‖
ತರಣಿಯುದಿಸಲ್ ಪೋಪೆವೆಂದು ಭಾಷಿಸುತಿರಲ್ |
ಗುರುತರದ ದೃಷ್ಟಿಯಿಂದೀಕ್ಷಿಸಿ ಮುನೀಶ್ವರರು |
ಹರುಷದಿಂದೈತಂದು ಬಂಧುರಸ್ನೇಹದಿಂದಾ ಪಾರಿಕಾಂಕ್ಷಿಯೆಡೆಗೆ ‖ (9)

ಪೂಜಿಸಿದರರ್ಘ್ಯಪಾದ್ಯಾತಿಥ್ಯಗಳನಿತ್ತು |
ರಾಜೀವಮಿತ್ರಸಮತೇಜ ಕುಶಿಕಾತ್ಮಜನ |
ರಾಜಸುತರನ್ನು ಬಹುಳೋಪಚಾರಗಳಿಂದ ನುತಿಸಿ ಸತ್ಕರಿಸೆ ಬಳಿಕ ||
ಪೂಜೆಯಿಂ ಸಂತುಷ್ಟನಾಗಿ ಕೌಶಿಕಮುನಿಸ |
ಮಾಜದೊಡನಾ ನೃಪಕುಮಾರರೊಡನೈತರಲ್ |
ರಾಜಿಸಿತು ದಿವ್ಯತೇಜೋಭರಿತಮಾಗಿ ವನರಾಜಿ ಕಾಮಾಶ್ರಮದೊಳು || (10)

ಸ್ನಾನಮಂ ರಚಿಸಿ ಸಂಧ್ಯಾಕೃತ್ಯಗಳ ಮಾಡಿ |
ಮೌನಿವರ ಪಾವಕಾರ್ಚನೆಗೈಯೆ ಭೂಭುಜನ |
ಸೂನುಗಳು ವಿರಚಿಸಿದರಾಗಲುದಯೋಚಿತದ ಸತ್ಕೃತ್ಯಮಂ ನಯದಲಿ ||
ಭಾನುವಸ್ತಾಚಲವನುಳಿಯೆ ಪಂಕಜರಾಜಿ |
ಮಾನವಾಗಲ್ಕಂಡು ಬಾಲರನ್ನೊಡಗೊಂಡು |
ಜ್ಞಾನನಿಧಿ ಪೊಕ್ಕು ಕಾಮಾಶ್ರಮದಿ ಪವಡಿಸಿದನಾ ತಪೋಧನರು ನಲಿಯೆ|| (11)

ಪರಮಪಾವಿತ್ರಚಾರಿತ್ರಗಳ ಪೇಳುತು-|
ತ್ತಿರಿಸಿದರು ನಿಶಿಯ ಭಾಸ್ಕರನುದಯಮಾಗಲ್ಕೆ |
ವರಮೌನಿಗಳ್ಬೆರೆದು ಸ್ನಾನಸಂಧ್ಯಾವಂದನಾದಿಕೃತ್ಯಗಳ ರಚಿಸಿ ||
ಸುರುಚಿರದ ಸನ್ಮಹಾಮಂತ್ರಂಗಳಂ ಜಪಿಸಿ |
ಭರದಿಂದ ಗಮಿಸಲುಜ್ಜುಗಗೊಂಡ ಮೌನಿಯಂ |
ಹರುಷದಿಂ ದಿಟ್ಟಿಸುತ ತಾಪಸರ್ತಂದಿಟ್ಟರುಡುಪವಂ ತವಕದಿಂದೆ || (12)

ಯತಿತತಿಯ ಮನ್ನಿಸುತಲುಚಿತಭಾಷೆಗಳಿಂದ |
ವ್ರತಿಶಿಖಾಮಣಿ ರಾಜಸುತರಿಂದ ನಾವೆಯ-|
ನ್ನತಿಶಯದೊಳಡರಿ ದಾಂಟಿದರಾಗ ತಟನಿಯಂ ಪಟುತರದ ವೇಗದಿಂದೆ ||
ಮತಿಯಿಂದ ತರಣಿಯನ್ನತಿಗಳೆದು ಕ್ಷಿತಿಗಿಳಿದು |
ಕತಿಪಯಾಂಘ್ರಿಗಳ ಮೃದುಗತಿಯಿಂದ ನಡೆಯುತಿರ |
ಲತಿಶಯದ ರಾವ ಕೇಳ್ಪಡಿಸಿತಾ ಭೂಭುಜತನೂಜನ್ಮರಿಂಗೆ ಜವದಿ || (13)

ಘುಮಘುಮಿಪ ಮಾಧುರ್ಯ ಕಮಲೋಪಮಿತನಾದ |
ಕಮನೀಯಮಾಗಿ ಕೇಳ್ಪಡುತಿದೆಕೊ ಮುನಿವರ್ಯ |
ಕ್ರಮವ ವಿಸ್ತರಗೈವುದೆನೆ ರಾಮನೊಡನೆಂದನತಿಶಯಮೃದೂಕ್ತಿಯಿಂದ ||
ಕಮಲಭವನುಂ ಮೊದಲು ಕೈಲಾಸಪರ್ವತದಿ |
ವಿಮಲಕರಚಿತ್ರದಿಂ ನಿರ್ಮಿಸಿದ ದೇವತಾ |
ರಮಣ ಮೆಚ್ಚುವೊಲೊಂದು ಕೊಳವ ಮಾನಸವೆಂಬ ಪೆಸರಾಂತುದಿಳೆಗೆ ಬಳಿಕ||(14)

ಸುರಪಿರಿಯನಿಂದ ಪುಟ್ಟಿದ ಕೊಳದ ದೆಸೆಯಿಂದ |
ಪರಿದು ಬಂದಾ ನದಿಯು ನಿಜಪುರಿಯ ಬಳಸಿಹುದು |
ಸರಯುವೆಂದೆಂಬ ಪೆಸರಾಂತು ಗಂಗಾನದಿಯ ಪೊರೆಗೆ ಸಾರಿರ್ಪುದರಸ ||
ಸಿರಿಕರದ ಸನ್ನದಿಯಲೀ ನಾದಮುದ್ಭವಿಸಿ |
ಗುರುಕುತೂಹಲಮೆನಿಪುದತಿಪುಣ್ಯದಾಯಿಯೆಂ |
ದುರುಭಕ್ತಿಯಿಂದ ವಂದಿಸವೇಳ್ಕುಮೆಂದಡಾ ರಾಮಲಕ್ಷ್ಮಣರಿರ್ವರು || (15)

ಯಮಿಯೊರೆದ ತೆರದೊಳ್ಪ್ರಣಾಮುಗೈದಾಗ ಸಂ |
ಭ್ರಮದಿಂದ ದಾಂಟ ದಕ್ಷಿಣತೀರಮುಂ ಸಾರಿ |
ಸಮುದ ಕುಂಜರಗಮನದಿಂ ನಡೆಯುತಿರೆ ತೋರ್ದುದೊಂದು ಕಾನನವು ಮುಂದೆ||
ಕ್ರಮುಕದಾಡಿಮನಾಳಿಕೇರಜಂಬೀರಸಂ |
ಕ್ರಮಿತಕೇಸರಪಾರಿಜಾತಚಂದನಲತಾ |
ಕ್ರಮ ಪಾರಿಯಾತ್ರಪಾಟಲಜಟಾಲಾಧಿಕ್ಯ ಭೂಜಾತನಿಚಯದಿಂದೆ || (16)

ಭೈರವಶ್ವಾಪದವರಾಹವಾರಣಸಿಂಹ |
ದೋರಣವ್ಯಾಘ್ರಕಾಡ್ಕೋಣವೃಕಸಂತತಿಯು |
ದಾರಭೀಕರರವದಿ ನಾನಾಪ್ರಕಾರದಿಂದಲ್ಲಲ್ಲಿ ಸಂಚರಿಸುವ||
ದಾರುಣಪತತ್ರಿಕುಲದಾರುಣಧ್ವನಿಗಳಿಂ |
ತೋರುವೀ ವನಮಾವುದೆಂಬುದಂ ವಿಸ್ತರಿಸಿ |
ತೋರುವುದೆನುತ್ತ ನೃಪತನಯರೆನೆ ಮುನಿವರಂ ಪೇಳ್ದನಾ ವೃತ್ತಾಂತಮಂ || (17)

* ಅಚ್ಚರಿಯನೊರೆವೆ ಲಾಲಿಸು ವತ್ಸ ಪೂರ್ವದೊಳ್ |
ನಿಚ್ಚ ಲಕ್ಷ್ಮೀನಿಲಯಮೆನಿಸಿ ರಾಜಿಸುತಲುಂ |
ಸ್ವಚ್ಛತರದಿಂ ನಾಮ ಮಲದಂ ಕರೂಶಂಗಳಿವು ದೇವನಿರ್ಮಿತವಲೆ ||
ಕೊಚ್ಚೆ ವೃತ್ರಾಸುರನ ಮಸ್ತಕವ ಸುರಪನಂ|
ಮುಚ್ಚಿದುವು ಪಾಪಸಂತಾಪಂಗಳುಭಯಮುಂ |
ಬಿಚ್ಚಲಸದಳಮಲ್ಲಮೇಸು ಘನವೆಂಬೆನಾ ಬ್ರಹ್ಮಹತ್ಯಾಬಲವನು || (18)

---

* ಏತೌ ಜನಪದಾ ಸ್ಫೀತೌ ಪೂರ್ವಮಾಸ್ತಾಂ ನರೋತ್ತಮ ॥
ಮಲದಾಶ್ಚ ಕರೂಶಾಶ್ಚ ದೇವನಿರ್ಮಾಣ ನಿರ್ಮಿತೌ ॥೧೭॥
ಪುರಾ ವೃತ್ರವಧೇ ರಾಮ ಮಲೇನ ಸಮಭಿಪ್ಲುತಂ ॥
ಕ್ಷುಧಾಚೈವ ಸಹಸ್ರಾಕ್ಷಂ ಬ್ರಹ್ಮಹತ್ಯಾ ಸಮಾವಿಶತ್ ॥ ॥೧೮॥
(ವಾ. ರಾ.—ಚತುರ್ವಿಂಶಸ್ಸರ್ಗಃ)

ಬಿಡುಗಣ್ಣ ಜಂಗುಳಿಯು ಜಡೆಯಾಂತ ಪಾರುವರು |
ಪಿಡಿದೆತ್ತಿ ತಂದು ಪಾಕಾರಿಯಂ ಜವದಿಂದ |
ಲೊಡನೆ ಸಾಸಿರಕಲಶದಭಿಶೇಖಮನ್ನೆಸಗಿಹರ್ಬಳಿಕಲೀ ನೆಲದೊಳು ||
ತೊಡಕಿರ್ದ ಪಂಕಿಲ ಕರೂಶಂಗಳೆಂಬೆರಡು |
ಬಿಡುಗಡೆಯನ್ನೈದಲೀ ಪೊಡವಿಗೀವುತ ಶಕ್ರ |
ನುಡುಗಣದ ಮಧ್ಯದೊಳ್ತೊಳಗುವ ಸುಧಾಕರನೊಲೆಸೆದನತಿಹರ್ಷದಿಂದೆ || (19)

[1]ಪುರುಹೂತ ನಿರ್ಮಲಂ ನಿಷ್ಕರೂಶಮನಾಳ್ದು |
ಪರಮಸಂಪ್ರೀತಿಯಿಂದಾ ದೇಶಗಳ ಕುರಿತು |
ಸರಸವಚನದೊಳೆಂದ ಮನ್ಮೂರ್ತಿಸಂಭೂತ ಮಲಕರೂಶಂಗಳನ್ನು ||
ಧರಿಸಿ ಶರ್ಮವನಿತ್ತ ಕಾರಣದಿ ಜನಪದದೊ |
ಳುರುತರಖ್ಯಾತಿಯಂ ಪೊಂದಿ ರವಿಲೋಕದೊಳ್ |
ಸಿರಿಕರದ ಮಲದಂಕರೂಶನಾಮಗಳಿಂದಲೆನುತೊರೆದ ಶಕ್ರ ಮುದದಿ || (20)

ನೋಡಿ ಹಿಗ್ಗಿದುದಖಿಳದೇವತತಿ ಮುಗುಳೆ ಕೊಂ |
ಡಾಡಿದುದು ಜಿಷ್ಣುವಂ ಸುರಿದು ಪೂವಿನ ಮಳೆಯ |
ಸೂಡಿದುವು ಚಿರಕಾಲದಿಂದ ಸಂಪದಗಳಂ ಮಲದಂಕರೂಶನಾಮ ||
ನಾಡುಗಳನೇಕವಿಧದತಿಶಯದೊಳಿರ್ದವಿ—|
ನ್ನಾಡಲೇಂ ಕೆಲಕಾಲಕಿಲ್ಲಿ ಜನಿಸಿದಳೊರ್ವೆ |
ರೂಢಿಗತಿಘೋರರರೂಪಿಣಿ ನಾಗಸಾಹಸ್ರಬಲಕಲಿತ ಯಕ್ಷತನುಜೆ|| (21)

ಸುಂದನರಸಿಯು ತಾಟಕಾನಾಮಮೂಂತವಳ |
ನಂದನಂ ಮಾರೀಚನಾಮರಕ್ಕಸನು ಸಂ |
ಕ್ರಂದನೋಪಮ ಶೌರ್ಯ ವೃತ್ತಬಾಹುಂ ಮಹಾವೀರ ವಿಪುಲಾಸ್ಯಮೂರ್ತಿ ||
ತುಂದಿಲೋದರ ಭೈರವಾಕಾರ ದಾನವಂ |
ಬಂದು ಮತ್ತೀ ನೆಲದೊಳುಳ್ಳ ಮನುಜರನೆಲ್ಲ |
ಕೊಂದು ಭಕ್ಷಣೆಗೈವ ನಿಜಮಾತೆಯೊಡಗೂಡಿ ನಿಲುವರಾರಿಲ್ಲಿದಿರೊಳು || (22)

ದಾರಿಗಾರೆನಿಪ ಹರದಾರಿಯಲಿ ಭೀಕರಾ |
ಕಾರೆ ತಾಟಕಿಯಿರ್ಪಳದರಿಂದ ದೇಶಗಳು |
ಸಾರಿದವು ನಿರ್ಜನತ್ವವ ರಾಮ ನಿಸ್ಸೀಮ ನಿಜಬಲೋದ್ಧತಿಯಲಿವಳ ||
ತೋರಶಿರಮಂ ತರಿದು ತೋರು ಸುಖವನು ಬೇಗ |
ಧಾರಿಣಿಗೆ ಕ್ರೂರದಾನವರ ಭಯದಿಂದ ಸಂ |
ಚಾರಿಸಲ್ಸಲ್ಲ ಪಂಥಾನಂಶುಮಂತನಿಗೆ ಭೂರಿಭಯದುರುಬೆಯಿಂದೆ || (23)

---

1 ಇಮೌ ಜನಪದೌಸ್ಫೀತೌ ಖ್ಯಾತಿಂ ಲೋಕೇ ಗಮಿಷ್ಯತಃ ||
ಮಲದಾಶ್ಚ ಕರೂಶಾಶ್ಚ ಮಮಾಂಗಮಲಧಾರಿಣೌ ||೨೨||
(ವಾ. ರಾ.—ಚತುರ್ವಿಂಶಸ್ಸರ್ಗಃ)

ಎನುತೊರೆಯಲಾ ಮುನಿಯ ಘನವಾಣಿಯಂ ಕೇಳಿ |
ಜನನಾಥತನಯುನಿಂತೆಂದ ಯಮಿಶಾರ್ದೂಲ |
ಎನಗೆ ವಿಸ್ಮಯವಾಗಿ ತೋರುತಿದೆಯಲ್ಪಬಲ ಯಕ್ಷಸಂತತಿ ಲೋಕದಿ ||
ಮಿನುಗಿದುದದೆಂತು ಗಜಸಾಸಿರದ ಬಲವಿೂಕೆ |
ಗೆನೆ ಗಾಧಿನಂದನಂ ಮಗುಳುತ್ತರವನಿತ್ತ |
ಮನುಜಪುಂಗವ ಲಾಲಿಸೊರೆವೆನೀ ತಾಟಕೆಯ ಪೂರ್ವವೃತ್ತಾಂತಗಳನು || (24)

ಯಕ್ಷನೆಂಬೊರ್ವಂ ಸುಕೇತುನಾಮಕ ಸುತಾ |
ಪೇಕ್ಷನಾಗುತ್ತ ನಾಲ್ಮೊಗನ ಪ್ರಾರ್ಥಿಸೆ ಸುರಾ |
ಧ್ಯಕ್ಷಗುರುವಿತ್ತ ವರಮುಂ ಪುತ್ರಿಯಹಳೆಂದು ಸಿಂಧುರಸಹಸ್ರಬಲದಿಂ ||
ಆ ಕ್ಷಣದೊಳುದಿಸಿದಳ್ತಾಟಕಿ ಸುರಾಂಗನಾ |
ಲಕ್ಷಣದಿ ದಿನದಿನಕೆ ಯೌವನಂ ಪೆರ್ಚೆ ನಳಿ |
ನಾಕ್ಷಸುತನಿಗೆ ಪಟ್ಟದಾನೆಯಿವಳೆಂಬಂತದೇಂ ಪೇಳ್ವೆ ಮೋಹನವನು || (25)

ಬಲುತಪದೊಳಾರ್ಜಿಸಿದ ಸುತೆಯಂ ಸುಕೇತು ಮ—|
ತ್ತೊಲಿದಿತ್ತ ಜರ್ಝರನ ತನಯ ಸುಂದಾಖ್ಯಸಿಗೆ |
ಕೆಲಕಾಲಕುದಿಸಿದಂ ಮಾರೀಚನೀಚನುಂ ಮತ್ತವಳ ಜಠರದೊಳಗೆ ||
ಬಲಶೌರ್ಯಸಂಪತ್ಪ್ರಭಾವಸಂಪೂರ್ಣದಿಂ |
ಕಲಿತನಾಗುತೆ ಪೆರ್ಚಿದನು ಧೂಮಕೇತುವೆನೆ |
ಗೆಲುವರಿಲ್ಲಾ ಜಿಯೊಳ್ ಮಾರ್ಮಲೆನರಿಲ್ಲರಸ ಮಗುಳೆ ಲೋಕತ್ರಯದೊಳು || (26)

ಕಾಲವಶನೆನಿಸೆ ಸುಂದಾಖ್ಯನೀ ಮಾರೀಚ |
ಲೀಲೆಯಿಂ ಮಾತೆಯೊಡಗೊಂಡು ಭೂತಳದೊಳಾ |
ಭೀಳಗತಿಯಿಂ ಬಂದನೊಂದುದಿನ ಕಲಶಭವನತುಲಪುಣ್ಯಾಶ್ರಮಕ್ಕೆ ||
ಕೋಲಾಹಲಧ್ವನಿಯುನೆಸಗಿ ಭಕ್ಷಿಸೆ ಬರ್ಪ |
ಮೂಲೋಕದಲ್ಲಣನ ನಿಟ್ಟಸುತ ಕೋಪಶಿಖಿ |
ಮೇಲಕುಚ್ಚಳಿಸಿದುದು ಫಾಲನೇತ್ರಾಗ್ನಿಯುಂತೇನೆಂಬೆನಾ ಮುನಿಪಗೆ || (27)

ದುರುಳರಕ್ಕಸನಾಗೆನುತ್ತ ಮಾರೀಚನಂ |
ಗುರುತರದ ಕೋಪದಿಂ ಶಪಿಸಿ ತಾಟಕಿ ಬರ್ಪ |
ಪರಿಯನೀಕ್ಷಿಸಿ ಕರೀರಜನೆಂದನೆಲೆ ದುಷ್ಟಚಾರಿ ನೀನಿಂದಿನಿಂದೆ ||
ಪುರುಷಾದಿಯಾಗಿ ಘೋರಾಕಾರವೆತ್ತು ಬಲು |
ಖರತರಸ್ವನದಿಂದೆ ದಾರುಣಾಕೃತಿಯೆನಿಸಿ |
ಚರಿಸೆಂದು ಕೋಪದಿಂದುರುಶಾಪಮನ್ನಿತ್ತ ಭೂಸುರವರಾಗ್ರಗಣ್ಯ || (28)

ಅಂದಿನಿಂದಾ ಯಕ್ಷಿಯತಿಘೋರರೂಪಿನಿಂ |
ಬಂದು ಭಕ್ಷಿಸುವಳೀ ನೆಲದೊಳುಳ್ಳಖಿಳರಂ |
ಕಂದ ಕೇಳ್ಗೋವಿಪ್ರಹಿತಮೆಂದು ತಾಟಕಿಯ ಹತಗೊಳಿಪುದುಚಿತ ನಿನಗೆ ||
ಕೊಂದಿಡದೆ ಬಿಟ್ಟಡೆಯು ಮೂರುಲೋಕಂಗಳಂ |
ತಿಂದಲ್ಲದೆಯು ಮಾಣಳೀ ದುಷ್ಟೆಯರಿಯೆ ಸಂ |
ಕ್ರಂದನಾದ್ಯರಿಗಳವೆ ನೀನುಪೇಕ್ಷಣೆಗೈಯೆ ಹರಬೊಮ್ಮರಿಂದಪ್ಪುದೆ || (29)

* ನಾರೀವಧೆಯು ಪಾಪಕಾರಿಯೆಂದೆಣಿಸದಿರು |
ಧೀರ ಚಾತುರ್ವರ್ಣರಕ್ಷಣೆಗೆ ಭೂಭುಜರು |
ಧಾರಿಣಿಯೊಳುಂ ನೃಶಂಸಕರಾಗಲರಿದಪರು ಕರುಣಮುಳಿದರು ಕೋಪದಿ ||
ದಾರುಣದ ದಾರುಣವದೋಷದೋಷಗಳವರ |
ನಾರಾದಡಂ ಶಿಕ್ಷೆಗೈವುದುಚಿತವು ಪ್ರಜಾ |
ಸಂರಕ್ಷಣಾರ್ಥಮಾಗಿರೆ ಮೇದಿನೀಶಮತ ವೃದ್ಧಾನುಸಮ್ಮತವಲೇ || (30)

ವೈರೋಚನಾತ್ಮಭವೆ ಮಂಥರೆ ವಸುಂಧರೆಗೆ |
ತೋರಪಾತಕಮೆಸಗೆ ಖತಿಯಿಂದ ಮಸ್ತಕವ |
ಹಾರಿಸನೆ ಸುರನಾಥ ಕಾವ್ಯನಂಬಿಕೆ ಲೋಕದೊಳಗಿಂದ್ರನಿಲ್ಲದಂತೆ ||
ಹಾರವಿಸೆ ವಿಷ್ಣುವಾ ಭೃಗುಪತ್ನಿಯಂ ತರಿದ |
ಪೂರುವದೊಳೀ ಪರಿಯನೇಕದುರ್ಮಾರ್ಗಿಯರ |
ಚಾರಮನ್ನಡಗಿಸಿದರೈಸೆ ಭೂಭುಜರೆಲ್ಲ ಲೋಕಮಂ ಪಾಲಿಸುವಡೆ || (31)

ವರನೇಹದಿಂ ದುಷ್ಟಮಾರ್ಗವನ್ನನುಸರಿಸಿ |
ಚರಿಪ ಪಾಂಸುಲೆಯರಂ ತರಿದು ಲೋಕವನೆಲ್ಲ |
ಪೊರೆದರರಸುಗಳು ಸದ್ಧರ್ಮಕೀರ್ತಿಗಳಾಳ್ದರದರಿಂದಲೀ ದೈತ್ಯೆಯಂ ||
ಪರಿಹರಿಸೆ ಸ್ತ್ರೀಹತ್ಯ ದೊರೆಯದತುಲಿತಕೀರ್ತಿ |
ಬರುವುದಿದು ನಿಶ್ಚಯಂ ಪದಿನಾಲ್ಕು ಲೋಕಮಂ |
ಪರಿಪಾಲನಂಗೈವುದೆನೆ ಗಾಧಿತನಯನೊಡನಿಂತೆಂದ ರಘುವೀರನು || (32)

ಶೂಲಹಸ್ತೋಪಮ ವಿಶಾಲವಿದ್ಯಾನಿಧಿಯೆ |
ಲಾಲಿಪುದು ಬೊಪ್ಪ ನಿಮಗೊಪ್ಪಿಸಿಹ ಸಮಯದಲಿ |
ಲಾಲಿತ್ಯವಾಣಿಯಿಂದಣುಗ ಬಾರೆಂದೆನ್ನ ಕರೆದುಂ ನಿರೂಪಿಸಿದನು ||
ಪಾಲಿಪುದು ಮುನಿವರನ ವಚನ ಮದ್ವಾಕ್ಯದಿಂ |
ಮೇಲೆಂದು ಕ್ರತುವಿಘ್ನಕರರಾಕ್ಷಸಾಧಮರ |
ಜಾಲಮಂ ಶಿಕ್ಷಿಪುದೆನಲ್ಕಾನು ಮಸ್ತಕದೊಳಾಂತೆನಾ ಭಾರತಿಯನು || (33)

---

* ನಹಿ ತೇ ಸ್ತ್ರೀವಧಕೃತೇ ಘೃಣಾಕಾರ್ಯಾ ನರೋತ್ತಮ ||
ಚಾತುರ್ವರ್ಣ್ಯಹಿತಾರ್ಥಾಯ ಕರ್ತವ್ಯಂ ರಾಜಸೂನುನಾ || ೧೬ ||
(ವಾ. ರಾ.—ಪಂಚವಿಶಸ್ಸರ್ಗಃ)

ತಂದೆಯಾಡಿದ ನುಡಿಗೆ ಬಂದಪುದೆ ದಂದುಗಂ |
ಬಂಧುರವು ಪಿತೃವಚನದತ್ತಣಿಂ ಭವದುಕ್ತಿ |
ಸಂದೇಹವಿಲ್ಲಿದಕೆ ತವನಿರೂಪವನಾಂತು ಗೋದಿವಿಜಭೂಮಿಸುರರ ||
ಬೃಂದಮಂ ಸಲಹೆ ದೇಶಸ್ವಾಸ್ಥ್ಯಕೋಸುಗಂ |
ಕೊಂದಪೆಂ ಸುಂದನಂಗನೆಯ ಮದ್ವಾಕ್ಸತ್ಯ |
ಮೆಂದೆಣಿಪುದನಘ ಭಾಷೆಗೆ ಬಾರದೂಣೆಯಂ ಕಾಕುತ್ಸ್ಥವಂಶಭವನ || (34)

ಎನೆ ಸಂತಸಂಬಟ್ಟು ಮುನಿಕುಶಿಕಸಂಭವಂ |
ಜನನಾಥಸುತನೊಳಾ ರಕ್ಕಸಿಯ ದುಶ್ಚರಿತೆ |
ಯನು ವಿಸ್ತರಂಗೈದು ಪೇಳೆ ಲಾಲಿಸಿ ಕೊಂಡ ಕೋಪದಿಂ ಕೋದಂಡಮಂ ||
ಘನಕಠೋರದ ದೈತ್ಯಗುಣಗಳುಂ ಶ್ರುತಿಘಂಟೆ |
ಕಿನಿಸಿನಿಂ ಚಾಪಗುಣಮುದರಂತೆ ತೋರ್ದುದೋ |
ಎನೆ ಸೆಳೆದು ಸಿಂಜಿನಿಯ ಟಂಕಾರಮೆಸೆಗಿದಂ ಭೂವ್ಯೋಮ ತಲ್ಲಣಿಸಲು || (35)

ಕೇಳಿ ತಾಟಕಿಯ ದುವೃತ್ತಮಂ ಕೋಪಮಂ |
ತಾಳಿ ಕೊಂದಪೆನೆಂದು ಮುನಿಯೊಡನೆ ಪೇಳಿ ಕ |
ಟ್ಟಾಳು ರಘುಪತಿ ತನ್ನ ಚಾಪಮಂ ಪಿಡಿದಲ್ಲಿ ಝೇಂಕಾರಗೈಯೆ ಜವದಿ ||
ಆಳಿದೊಡೆಯನ ವಚನಪೀಠಿಕೆಯಿದೆಂಬಂತೆ |
ಕಾಳರಕ್ಕಸಿಯ ವಧೆಯಂ ಪೇಳಲಾ ಶಬ್ದ |
ಕೋಳುಗೊಂಡುದು ಪತ್ತುದಿಕ್ಕುಗಳನೇನೆಂಬೆನಾ ಘೋರ ಭೀಕರವನು || (36)

ಗುಣದ ರವಮಂ ಕೇಳಿ ರಕ್ಕಸಿಯು ಲವಲೇಶ |
ಗುಣಕರಗಲತಿರೋಷವೆಗ್ಗಳಿಸಿ ಪಲ್ಗಳಂ |
ಕಣಿಖಟಿಲುಖಟಿಲೆಂಬೊಲೊರೆವುತ್ತ ನಾಲ್ದೆಸೆಯನುಂ ಧ್ಯಾನಗೈದು ಬೈದು ||
ಕೆಣಕಿದವನಿವನಾವನೆನ್ನುವಾಮರ್ಷದಿಂ |
ತೃಣಕೆಗಣಿಸದೆ ಮೂರುಲೋಕಗಳ ಭಟಶಿಖಾ |
ಮಣಿಯಿರ್ಪ ತಾಣಕೈತಂದಳೇನೆಂಬೆನಾ ಶಾಕಿನಿಯ ಪೆತ್ತವಳೆನೆ || (37)

ಘುಡುಘುಡಿಸಿ ಕೋಪದಿಂ ಕಿಡಿಗಣ್ಗಳಂ ಕೆದರಿ |
ಸಿಡಿಲಿನಂತೈತರ್ಪ ತಾಟಕಿಯ ಕಂಡು ತ-|
ನ್ನೊಡಹುಟ್ಟಿದನೊಳೆಂದ ಕಾಕುತ್ಸ್ಥಕುಲತಿಲಕ ನೋಡಿದೆಯ ಮಾಯಾವಿಯ ||
ತುಡುಕಲವ್ವಳಿಸಿ ಹುಂಕಾರದಿಂದೈತಪ್ಪ |
ಳಡಿಗಡಿಗೆ ಭೀರುಸ್ವಭಾವಮಾಂತಿಹಳವಳ |
ಬಿಡದೆ ಕಿವಿಮೂಗಗಳನುತ್ತರಿಸಿ ಬಿಡಲದುವೆ ವಧಿಸಿದಂತಪ್ಪುದಣುಗ || (38)

ಅನುಜಾತರಿರ್ವರುಂ ಮಾತಾಡುತಿಹ ವಾಣಿ |
ಯನು ಕೇಳಿ ಯಕ್ಷಿಣಿಯು ಕೋಪದಿಂದಾರ್ಭಟಿಸಿ |
ತಿನಲೆಳಸಿ ಮುಂಬರಿಯೆ ಕಂಡು ವಿಶ್ವಾಮಿತ್ರ ಹುಂಕಾರದಿಂದಲವಳ ||
ಘನತೆಯಂ ನೀಗಿ ರಘುವೀರರ್ಗೆ ಸ್ವಸ್ತಿ ಸಂ |
ಜನಿತಮಾಗಿರಲೆಂದು ಪರಸಲ್ಕೆ ಸಿಂಹಸಂ |
ಹನನಭಟರಾ ರಕ್ಕಸಿಯ ನೋಡಿ ಸಂವರ್ತಮೇಘದೊಲ್ ಗರ್ಜಿಸಿದರು || (39)

ವೀರರಂ ದಿಟ್ಟಿಸಿ ಕಠೋರ ಸಿಡಿಲಿನ ರವವ |
ತೋರಿದಳ್ ಮಗುಳಶ್ಮಸಾರದಿಂದೆಣ್ದೆಸೆಯು |
ತೋರದಂತೆ ಮುಹೂರ್ತಮೆಡೆವಿಡದೆ ಮಾಯೆಯಂ ನೆಗಳಿ ನಾನಾವಿಧದಲಿ ||
ಘೋರರೂಪಿಣಿಯಲೆಯುತಿರೆ ಕಂಡು ಕೋಪದಿಂ |
ನಾರಿಯಂ ಜೀವಡೆದುದಾರಶರದಿಂದ ರಘು |
ವೀರ ಕತ್ತರಿಸಿದಂ ಬಾಹುಗಳ ಮೂಲೋಕತತ್ತರಂ ಪಿಂಗುವಂತೆ || (40)

ತರಿಯೆ ಬಾಹುದ್ವಯವ ದುರುಳರಕ್ಕಸಿ ಕೋಪ |
ವೆರೆದ ಭೈರವನಾದದಿಂದೆ ಧಿಕ್ಕರಿಸುತಂ |
ಪರಿದಳಾಗಸಕೆ ಕಾಣ್ಬಡದಂತೆ ಮಾಯೆಯಂ ನೆಗಳಿ ಶೌರ್ಯೋನ್ನತಿಯೊಳು ||
ಕರೆದು ಕಲ್ಮಳೆಯ ಮುಂಬರಿದು ತರುನಿಕರದಿಂ |
ಪರಿಪರಿಯ ಲಾಗುವೇಗದೊಳಿಟ್ಟಳೇನೆಂಬೆ |
ಧರಣಿ ತಲ್ಲಣಗೊಳಲ್ ಬೆಗಡುಗೊಳೆ ಸುರನಿಕರ ಭೀತಿಗೊಳೆ ಮುನಿಸಂತತಿ|| (41)

ಆವೆಡೆಯೊಳಾ ಯಕ್ಷಿ ಚರಿಸುವಳೊ ಮಗುಳೆ ಬಹು |
ದಾವದೋನ್ನತಿಯಿಂದಲೆಡೆವಿಡದೆ ಕರೆವಳೋ |
ಗ್ರಾವಾವನೀಜಾತವೃಷ್ಟಿಯಂ ನಿಟ್ಟಿಸಲು ರವಿವಂಶಜಾತರಿಂಗೆ ||
ಠಾವು ಗೋಚರಮಾಗದಿರೆ ಕೋಪ ವೆಗ್ಗಳಿಸಿ |
ತೀವಿ ಭಿದುರೋಪಮಿತ ಶಬ್ದವೇಧಿಯ ತೆಗೆದು ||
ರಾವವನ್ನರಿದು ಕೊಂದಪೆನೆನಲು ಭಾವವನ್ನರಿದು ಯಕ್ಷಿಣಿಯು ಜವದಿ|| (42)

ಮುಂಬರಿದು ರಾಮಲಕ್ಷ್ಮಣರಿರ್ವರಂ ಬೇಗ |
ತಿಂಬೆನೆಂಬತಿ ಕ್ರೋಧದಿಂ ಬರಲು ಸೌಮಿತ್ರಿ |
ಯುಂಬಿನಿಂ ಕರ್ಣನಾಸಿಕಗಳಂ ಛೇದಿಸಲ್ಕಾ ಯಕ್ಷಿಯತಿಶೀಘ್ರದಿಂ ||
ಅಂಬರಕ್ಕಡರುತಂತರ್ದಾನಮಾಗಿ ನಿಟ |
ಲಾಂಬಕೋದಿತ ಶಿಖಿಜ್ವಾಲಾಕಲಾಪಗಳ |
ಡೊಂಬಿಯಂ ಸುರಿದಂತೆ ರುಧಿರಾವಸಿಕ್ತದುರುಶಿಲೆಗಳಂ ಮಳೆಗರೆದಳು || (43)

ಮುತ್ತಿತುರುಕತ್ತಲೆಯ ನೊತ್ತಮೆಣ್ದಿಸೆಗಳಂ |
ಬಿತ್ತರದಿ ಚಿತ್ತರದ ಪುತ್ತಳಿಗಳೆನೆ ದೇವ |
ತೋತ್ತಮರು ಚರಿಸುತತಿಭ್ರಾಂತರಂದದೊಳಿರಲ್ ಗರ್ಜನೆಗೆ ನೆಲವದುರಲು ||
ಅತ್ತಿತ್ತ ನೋಡಿ ಕರವೆತ್ತಲ್ಕೆ ವೀರರುಗ |
ಳೆತ್ತೆತ್ತ ಪ್ರಸ್ತರದ ಮುತ್ತಿಗೆಯೆ ಮತ್ತೆ ಮುನಿ |
ಪೋತ್ತಮಂ ನೋಡುತುತ್ತರಮಿತ್ತ ಬಿತ್ತರದೊಳಾ ರಘುಕುಲೋತ್ತಮಂಗೆ || (44)

ಅಸಮೂನವಿಕ್ರಮ ಸುರೇಂದ್ರಸಖನಂದನನೆ |
ಬಿಸಜಾಪ್ತನಸ್ತಮಿಸಲತಿಬಲಂ ಸಂಭವಿಪು |
ದಸಮಾಂಬಕಂಗಾಗಳಳವಲ್ಲ ನಿಶಿಯೊಳುಂ ದಾನವಿಯ ಸಂಹರಿಪಡೆ ||
ಪೊಸಮಸೆಯ ಕಣೆಗಳಿಂದಿಟ್ಟು ಈ ಯಕ್ಷಿಣಿಯ |
ವಸುಧೆಯೊಳ್ಕೆಡಪಿ ಜಯಲಕ್ಷ್ಮಿಯುದ್ವಾಹಮಂ |
ಹಸನಾಗಿ ಕೊಳುವುದೆಂದೊರೆಯೆ ರಘುವೀರನುಂ ಪೂಡಿದಂ ಮಾರ್ಗಣವನು ||

ಗುಡಿಗುಡಿಸಿ ಕಾಲಾಗ್ನಿಯಂತೆ ಕೆಂಗಿಡಿಗಳಂ |
ಕೆಡಪುತ್ತೆ ಪೊಸಮಸೆಯ ಕಣೆ ಬೆಸಸುಬೆಸಸೆನಲ್ |
ತುಡುಕಿ ಕೆಂಗರಿಗೋಲನಾಕರ್ಣಪರಿಯಂತ ಸೆಳೆದು ಯಕ್ಷಿಣಿಯಸುವನು ||
ಕಡಿದು ಕೆಡಪೆಂದಿಡಲ್ ಪೇರುರುವನುಚ್ಚಳಿಸಿ |
ಕೆಡಪಲ್ಕೆ ಸೊಡರಂತೆ ಪೊಳೆವುತಾತ್ಮಜ್ಯೋತಿ |
ನಡೆದುದತಿವೈಭವದೊಳಾಗಸದ ಮಾರ್ಗಮಂ ಪಿಡಿದು ಹರಿಯಿಪ್ಪ ನೆಲೆಗೆ || (46)

ಇದಿರಾಗಿ ಬಂದ ಯಕ್ಷಿಣಿಯಯಳೆದೆಯಂ ಸೀಳಿ |
ಕದನಕರ್ಕಶರಾಮ ಕೆಡಪಲೀಕ್ಷಿಸಿ ಸುರರ್ |
ಮುದದಿಂದ ಕರೆದು ಪೂಮಳೆಯನುಂ ಸಂತಸದಿ ದುಂದುಭಿಯ ಪೊಡೆಸಿ ಬಳಿಕ ||
ಸದಯ ರಘುವೀರ ಜಯಜಯವೆಂದು ನುತಿಗೈದ |
ರದುಭುತವ ನೋಡಿ ತಾಪಸವರ್ಯರೆಲ್ಲರುಂ |
ಚದುರಿಂದ ನಿಗಮಾಗಮೋಕ್ತದ ಸದುಕ್ತಿಯಿಂ ಪೊಗಳಿದರ್ಪರಮೆನ್ನುತೆ || (47)

ಪಾಡಿದರ್ಗಂಧರ್ವರತಿಮನೋಹರದಿಂದ |
ಲಾಡಿದರು ಸುರರ ಸೂಳೆಯರು ಸುಮ್ಮಾನದಿಂ |
ಬೇಡಿದರ್ಮನದಿಷ್ಟಗಳನು ನಾನಾಪರಿಯಲನಿತರೊಳ್ ಗಾಧಿಸುತನು ||
ಮೂಡುವಾನಂದದಿಂ ಮುದ್ದಿಸುತ ಮುಂಡಾಡಿ |
ಕೂಡೆ ಮಸ್ತಕವನಾಘ್ರಾಣಿಸುತ ಸುಖದಳೋ |
ಲಾಡಿದಂ ಮಗುಳೆಮುಗುಳುಪಚರಿಸಿ ಸನ್ನುತಿಸುತಡಿಗಡಿಗೆ ಬೆಡಗಿನಿಂದೆ || (48)

* ಆದುದುತ್ಸವ ಚತುರ್ದಶಲೋಕಗಳಿಗೆಂದು |
ಬಾಧೆಗೊಳಿಸುವ ಸುಂದನರಸಿಯುಳಿಯಲ್ಕೆ ಸ-|
ಮ್ಮೋದದಿಂದೈತಂದು ಪಾಕಶಾಸನ ಪೇಳ್ದ ಕುಶಿಕಸಂಭೂತನೊಡನೆ.||
ಈ ದಯಾಂಬುಧಿರಾಘವೇಂದ್ರಗೆ ಭೃಶಾಶ್ವನಿಂ |
ಸಾದರದಿ ನೀ ಗಳಿಸಿದಖಿಳಾಸ್ತ್ರಸಂತತಿಯ |
ನಾದರಿಸಿ ಕೈಗೈಯವೇಳ್ಕು ಮುನಿನಾಥಯಿದು ಸಮಯ ಕೃತಕೃತ್ಯನಹಡೆ|| (49)

ಎಂದು ಸಂಕ್ರಂದನಂ ಪೇಳೆ ಮುನಿವರ್ಯನಾ |
ನಂದದಿಂ ಕಾಕುತ್ಸ್ಥತಿಲಕ ಕರುಣಾವನಧಿ |
ಬಂಧುರಕಟಾಕ್ಷದಿಂ ಬಂದು ರಕ್ಷಿಸಿದೆ ನೀಂ ಬೇಗ ನೀಂ ಬಾರೆನುತ್ತೆ ||
ಛಂದವಿಂದಂ ಕರೆದು ಪೇಳ್ದನಾ ಮೌನಿ ರಘು |
ನಂದನನೆ ನೀನೆಸಗಿದೀ ಕರ್ಮದಿಂ ಲೋಕ |
ಪೊಂದಿದುದು ಸುಖವನಾಂ ತುಷ್ಟನಾದೆನು ನಿನ್ನ ಸಾಮಿಪ್ಯವಿಭವದಿಂದೆ|| (50)

ಇಂದಿನಿರುಳೀ ಮಹಾವನದೊಳಗೆ ಸುಖಮಿರ್ದು |
ಮುಂದಕೈದುವ ದಿವಾಕರನುದಯಮಾದಬಳಿ |
ಕೆಂದೊರೆಯಲಾ ವಿಪ್ರ ನುಡಿಯಿಂದಲಿಂತೆಂದ ಶ್ರೀರಾಮನತಿಪ್ರೇಮದಿ ||
ತಂದೆ ನೀಂ ಪೇಳಿದವೊಲಾಂ ಪ್ರವರ್ತನೆಗೈದು |
ಪೊಂದಿರ್ಪುದಲ್ಲದೆನಗೇಂ ಸ್ವತಂತ್ರಮೆನಲ್ಕೆ |
ಕುಂದೇಂದುಚಂದ್ರಿಕಾಹಾಸಮುಂ ಪರಪುತಂ ನಲಿದ ಸಂಯುಮಿ ಮೋದದಿ|| (51)

ವಸುರಾಯನೈತಪ್ಪನೆನ್ನ ಗೃಹದೆಡೆಗೆ ಸಂ |
ತಸದಿಂದಲಾತಿಥ್ಯಗೈದುಮಾಂ ಪೂಜಿಸುವೆ |
ಪೊಸತೆನಲು ವಸುಮತೀಜನರೆನುತ ಮಕುಟಾಗ್ರದಲ್ಲಿಡಲ್ಪಾಶಹಸ್ತಂ ||
ನಸುನಗುತಲಂಗನೆಯು ರಾಗಾಂಬರವನುಟ್ಟು |
ಮಿಸುಪ ತಾರಾಹಾರಮುಂ ಧರಿಸಿ ಕಂಗಳಿಂ |
ಗೆಸೆವಂಜನವನಿಟ್ಟಳೆನೆ ರಾಗಮುಡುಗಣಂಕತ್ತಲೆಯು ಮುಂಬರಿದುದು|| (52)

---

* ತೋಷಿತಾಃ ಕರ್ಮಣಾನೇನ ಸ್ನೇಹಂ ದರ್ಶಯ ರಾಘವೇ ||
ಪ್ರಜಾಪತೇರ್ಭೃಶಾಶ್ವಸ್ಯ ಪುತ್ರಾನ್ ಸತ್ಯಪರಾಕ್ರಮಾನ್ ||೨೫||
ತಪೋಬಲಭೃತಾಂ ಬ್ರಹ್ಮನ್ ರಾಘವಾಯ ನಿವೇದಯ ||
(ವಾ. ರಾ.—ಷಡ್ವಿಂಶಸ್ಸರ್ಗಃ)

ತರಣಿ ಚರಮಾಚಲದ ಪೊರೆಗೈದೆ ಕೌಶಿಕಂ |
ಭರದಿ ಸಂಧ್ಯಾಕೃತ್ಯಮುಂ ರಚಿಸಿ ಬಾಲಕ-|
ರ್ವೆರಸಿ ಮತ್ತಾ ಬನದ ಮಧ್ಯದೊಳ್ಪವಡಿಸಿದ ತೃಣರಚಿತಪಾಸಿಕೆಯೊಳು ||
ಪರಿಪರಿಯ ಪಾವನಚರಿತ್ರಗಳ ಪೇಳುತುಪ |
ಚರಿಸಿ ಸುಖನಿದ್ರೆಯನ್ನಾಳ್ದನಾ ಭೂಭುಜರ |
ತರುಣರೆಚ್ಚರದಿಂದ ಪವಡಿಸಿದನಾ ಮೌನಿ ನಿರ್ವಾಣಪರನಂದದಿ || (53)

ರವಿಗರ್ಭದುರ್ಭರವ್ಯಾಕುಲದೊಳೈಂದ್ರಿ ತ-|
ನ್ನವಿರಳದ ಮುಕ್ತಾಸುಹಾರಮುಂ ಕಿಳ್ತಿಡಲ್ |
ಜವದಿಂದ ನೆಲಕುರುಳಲುಳಿದ ಮುತ್ತುಗಳೆಸೆದುವಲ್ಲಲ್ಲಿ ತಾರಕೆಗಳು ||
ನವಕಮೆನಲೆಸೆದಿರಲ್ಕಿರುಳಿರೆಯನೊಳ್ಬರೆದು |
ವಿವಿಧ ಕ್ರಮದಿಂ ಮೂರ್ಛೆಯಾಳ್ದ ಮುಗ್ಧೆಯ ಚಿಕುರ |
ನಿವಹಮೆನಲೆಣ್ದೆಸೆಗ ಪರಪಿರ್ದವೋಯೆನಲ್ನಿಶಿ ಜಾರಿತಲ್ಲಲ್ಲಿಗೆ || (54)

ಸದಯರಘುವೀರನಂ ನೋಡಲ್ಕೆತಹೆನೆಂಬ |
ಮುದದಿಂದ ಉದಯಾದ್ರಿ ದಿವ್ಯಮಾಣಿಕ್ಯವನು |
ಚದುರಿಂದ ಮಕುಟಾಗ್ರದಲ್ಲಿಟ್ಟನೋ ಯೆನಲ್ ತೋರೆ ಭಾಸ್ಕರಬಿಂಬವು ||
ಪದುಮಾಕ್ಷನಾಮು ಬೇಗ(ದೊ)ಳುಪ್ಪವಡಿಸು ರವಿ ।
ಯುದಯಿಸಿದನೆಂದು ಯಮಿ ಬೆಸಸಲೆಚ್ಚರಗೊಂಡು |
ಮಧುಸೂದನಾಚ್ಯುತಾನಂತೋಹಮೆಂದುಪ್ಪವಡಿಸೆ ಶಮಧನನೆಂದನು || (55)

ಅರಸ ಬೇಗದಿ ಪೂರ್ವಸಂಧ್ಯಾವಿಧಿಯ ರಚಿಸಿ |
ತ್ವರಿತದಿಂದೈತಂದಡೀವೆನಸ್ತ್ರದ ಬೀಡ |
ಸುರರಿಗಸದಳಮಾದ ವೀರಲಕ್ಷ್ಮಿಯ ನಾಡನೆನೆ ಜೀಯ ಭಾಪುರೆನುತ ||
ಭರದಿಂದ ಸ್ನಾನಸಂಧ್ಯಾಕೃತ್ಯಗಳ ಮಾಡಿ |
ಹರುಷದಿಂ ಕೌಶಿಕನ ಚರಣಕಾನತರಾಗಿ |
ತರುಣರೆಸೆದಿರಲಿದಿರೊಳಾ ತಪೋಧನ ಬೇಗನಿತ್ತನಸ್ತ್ರಗ್ರಾಮಮುಂ || (56)

ದಂಡಧರ್ಮಂ ಕಾಲವಿಷ್ಣುಚಕ್ರಂಗಳು |
ದ್ದಂಡಮೈಂದ್ರಂ ಶೈವಶೂಲ ಬ್ರಹ್ಮಾಸ್ತ್ರ ಪ್ರ |
ಚಂಡತರ ಬ್ರಹ್ಮಶಿರ ಬಹ್ಮದಂಡಂಗಳನ್ನಿತ್ತಂ ಗದಾಯುಗ್ಮಮುಂ ||
ಖಂಡನೋದ್ಧತಧರ್ಮಕಾಲಪಾಶಂಗಳಂ |
ಮಿಂಡೆದ್ದ ವಾರುಣಂ ಮೋದಕಿಗಳಂ ಶತ್ರು |
ಖಂಡನಂ ಗೈವ ಮೈನಾಕಮುಶನಿದ್ವಯವ ಮರುತಕಾಬೇರಾಸ್ತ್ರಮುಂ || (57)

ನಾರಾಯಣಾಗ್ನೇಯ ಶಿಖರ ವಾಯವ್ಯಾಸ್ತ್ರ ।
ತೋರಾಯ ಪ್ರಮದಾಶ್ವ ಕ್ರೌಂಚ ಶಕ್ತಿದ್ವಯವ ।
ಹೇರಾಳ ಬಲಮುಸಲ ಕಂಕಾಳ ಕಾಪಾಲ ಕಂಕಣ ಸುನಾಮಂಗಳ ॥
ಘೋರಾಸಿರತ್ನ ಗಾಂಧರ್ವ ಪ್ರಸ್ವಾಪನಮು ।
ದಾರಮೋಹನ ಸೌರ ದರ್ಪಣಂ ಶೋಷಣಂ ।
ಚಾರು ಸಂತಾಪಸ ವಿಲಾಪನಂ ನಂದನಂ ವಿಧ್ಯಾಧರಾಸ್ತ್ರಗಳನು ॥ (58)

ಪೈಶಾಚ ಮೋಹನಂ ಸೌಮನಂ ತಾಮಸಂ ।
ನೈಶಾಟಹರ ಮೌಸಲಂ ಸತ್ಯ ದುರ್ಧರ್ಷ ।
ಮಿಾಶಾನ ಸಂವರ್ತ ಮಾಯಾಧರಂ ಪರಂ ಘೋರಸೋಮಂ ಸಿಸಿರಮಂ ॥
ವಾಸಿಯಿಂ ತೋರದಾರುಣ ಮಾನವಂ ಶತ್ಯೆ ।
ರಾಶೀಹತೋತ್ಕರಿಷ ದಿವ್ಯಶಸ್ತ್ರಂಗಳ ರ ।
ಮೇಶ ಕೊಳ್ಳೆಂದಿತ್ತ ಪೂರ್ವಮುಖನಾಗುತ್ತ ಶುಚಿಯಿಂದಲಾ ಮುನಿವರಂ ॥ (59)

ದೇವಾಸುರಾದಿಗಳಿಗಳವಲ್ಲದಮಿತಪ್ರ ।
ಭಾವಶಸ್ತ್ರಗ್ರಾಮಮುತ್ತಮೋತ್ತಮ ಕ್ಷಿತೀ ।
ದೇವ ಕೊಳ್ಳೆನುತಿತ್ತ ಕೌಶಿಕಂ ಸಂಪ್ರೀತಿಯಿಂದ ಕಾಕುತ್ಸ್ಥಮಣಿಗೆ ॥
ಸಾವಧಾನದೊಳಖಿಳಬಾಣಸಂತತಿಗಳಂ ।
ಪಾವನಚರಿತ್ರ ಪರಮೋತ್ಕೃಷ್ಟದಿಂದೀಯ ।
ಲಾ ವರ್ಣಿಯಾ ಮಹಾಮಂತ್ರಂಗಳಾವೃತ್ತಿಗೈದ ಕೌಶಿಕನಿದಿರೊಳು ॥ (60)

ಜಪಿಸಲಾಕ್ಷಣ ಸಕಲ ಮಂತ್ರಾಧಿದೇವತೆಗ ।
ಳಪರಿಮಿತತೇಜಪ್ರಭಾವದಿಂದೈತಂದು ।
ನೃಪವರ್ಯ ನಿನ್ನ ಡಿಂಗರಿಗರಾವ್ಬೆಸನೀವುದೆನುತ ಕೈಮುಗಿದು ನಿಲಲು ॥
ತಪಸಿ ಪೇಳಿದ ರಾಮ ಸರ್ವಾಸ್ತ್ರಗಳು ಬಂದು ।
ಕೃಪೆಗೆ ಪಾತ್ರೀಭೂತರಾಗಿ ನಿಂದಿಹರೈಸೆ ।
ಲಪಿತಮಂ ಪಾಲಿಪುದು ಮಾನಸೊದಳಹುದೆಂದು ಸರ್ವಾಸ್ತ್ರಕಭಯಮಿತ್ತು ॥ (61)

ಎನಲತಿಪ್ರೀತಿಯಿಂದಸ್ತ್ರಗಳನುಪಚರಿಸಿ ।
ಮುನಿಯ ಪದಕಭಿವಾದನಂಗೈದು ಪಂಥಾನ ।
ದನುಸರಣೆಯಿಂದಾತನೊಡನೈದುತಿಂತೆಂದ ತಾಪಸೋತ್ತಮು ಪ್ರೀತಿಯಿಂ ॥
ಎನಗೆ ಪಾಲಿಸಿದಖಿಳಶಸ್ತ್ರದುಪಸಂಹಾರ ।
ವನು ಕೃಪೆಯೊಳೊರೆದಪುದೆನಲ್ಕೆ ವಿಶ್ವಾಮಿತ್ರ ।
ಮುನಿರಾಯನುಸುರಿದಂ ನಿಖಿಳಶರಸಂತತಿಯ ಮರಳಿಸುವ ಸತ್ಕ್ರಿಯೆಯನು ॥

ವ್ಯಾಜಹಾರಂ ಪ್ರತೀಹಾರ ಧೃತಿಮಾನ್ ಶುಚಿಯು ।
ಸೋಜಿಗದ ಸುವ್ರತಂ ಸತ್ಯಕೀರ್ತಿಯು ರಭಸ ।
ಮಾಜಿಗಪ್ರತಿಸವ್ಯನಾಮಧೃಷ್ಟಂ ಮೇಲ್ಪರಾಙ್ಮುಖಾವಾಙ್ಮುಖಗಳ ॥
ರಾಜಿ ಲಕ್ಷ್ಯಾಲಕ್ಷ್ಯ ಸಮವಿಷಮ ಸುನಾಭ ।
ರಾಜಿಪಷ್ಟಾಕ್ಷ ಶತವಕ್ತ್ರ ದಶಶೀರ್ಷದ ಸ ।
ಮಾಜಂ ಶತೋದರಂ ಪದ್ಮನಾಭಂ ಮಹಾನಾಭನಾಮಕದಸ್ತ್ರಮಂ ॥ (63)

ಗುರುದುಂದುನಾಭಂ ಸುನಾಭ ಜ್ಯೋತಿಷ ಕೃಶನ ।
ಮುರುವಿಮಲ ನೈರಾಶ್ಯ ಯೋಗಂಧರಾಭಿದಂ ।
ವರಹರೀಂದ್ರಂ ಸಾರ್ಚಿಮಾಲಿ ಧೃತಿಮಾಲಿಗಳವೃತ್ತಿಮಾನ್ರುಚಿರವೆಸರ ॥
ಕರವೀರಕರ ಪಿತೃಸೌಮನಸ ಧನ ಧಾನ್ಯ ।
ಗುರುಮಕರ ವೈಧೂತ ಕಾಮರುಚಿ ಮೋಹನಂ ।
ಪರಮಾರಣಂ ಕಾಮರೂಪ ಜೃಂಭಕ ಸರ್ವನಾಭ ಸಂತಾನವೆಸರ ॥ (64)

ಶರಗಳಂ ಕೈಗೈದು ಕೊಡಲಾ ಮುನೀಶ್ವರಂ ।
ಪರಮಹರುಷದಿ ಕುಕುತ್ಸ್ಥಾಗ್ರಣಿ ಶಿಖಾಮಣಿಯು ।
ಭರದಿ ಸ್ವೀಕರಿಸಿ ತಜ್ಜಪಗೈಯಲಾ ಕ್ಷಣದಿ ಮೂರ್ತಿಮತ್ತಾಗಿ ಬಂದು ॥
ಮೆರೆದವಿದಿರೊಳು ಧೂಮಮಂಗಾರ ಸೋಮಾರ್ಕ ।
ಸಿರಿಯನೊಳಗೊಂಡತುಲದಿವ್ಯದೀಧಿತಿಯಿಂದೆ ।
ಕರಗಳಂ ಮುಗಿದು ಕಿಂಕರರಾವು ಊಳಿಗವ ನೇಮಿಸಲ್ವೇಳ್ಕುಮೆನುತ ॥ (65)

ಬೆಸಗೊಳ್ಳಲಿಷುಸಮೂಹಂಗಳೀ ಪರಿಯಲ್ಲಿ ।
ನಸುನಗುತೆ ಶ್ರೀರಾಮನವಕುತ್ತರವನಿತ್ತು ।
ಸಸಿನೆ ಮಚ್ಚಿತ್ತನೆಲೆಯಾಗಿರ್ಪುದಾವಾಗ ನೆನೆಯಲ್ಕೈತಹುದೆನ್ನುತ ॥
ಉಸುರಲಸ್ತ್ರಂಗಳತಿಪ್ರೇಮದಿಂದಭಿನಮಿಸಿ ।
ಬೆಸನಾಂತು ತೆರಳಲ್ಕೆ ವರ್ಣಿ ಸಂತಸದಿಂದ ।
ವಸುಮತೀಂದ್ರಕುಮಾರರೊಡಗೊಂಡು ಗತಿವಿಡಿದು ನಡೆದನತಿವೇಗದಿಂದ ॥ (66)

ತಳಿತಭೂರುಹಪಂಕ್ತಿ ಎಳಲತೆಗಳಂ ತೊಂತಿ ।
ಪೊಳೆವ ಪಲ್ಲವದಂತಿಗಳ ದಂತದುರುಪಂಕ್ತಿ ।
ತೊಳಪ ಶಾಕುಂತಗಳ ವಲ್ಗುಭಾಷಣೆಯಿಂದ ವನರಾಜಿ ರಾಜಿಸಿದುದು ॥
ಗಳಿತ ವಿಬುಧಾರ್ತಿ ವಾಮನಕೈತವದ ಮೂರ್ತಿ ।
ಪೊಳಲತರು ಸಾತ್ಯಕಿಗಳಾಕಾಶಮನ್ನಂಟಿ ।
ಘಳಿಲನೀ ಧರೆಯನಳೆವಡೆ ಪೆರ್ಚಿದಂದದಿಂ ರಘುಕುಲೋತ್ತಮನ ಮುಂದೆ ॥ (67)

ಕಂಡುವನಷಂಡಮಂ ಪುಂಡರೀಕಾಕ್ಷ ಕೋ |
ದಂಡಧರರಾಮ ಬೆಸಗೊಂಡ ಮುನಿಶೌಂಡನಂ |
ಕಂಡರಿಯದತಿಚಿತ್ರ ಕೌತೂಹಲಾನ್ವಿತದಿ ಕಾನನಮಿದಾರದೆಂದು ‖
ತಂಡತಂಡದಿ ನಲಿವ ಸೋಗೆಗಳ ಬಳಗದು-|
ದ್ದಂಡಸವಿನುಡಿಯಲಾಡುವ ತಾಮ್ರತುಂಡಗಳ |
ಹಿಂಡುಗಳ ಕಲಹಂಸಗಳ ಭರಿತಮಾಗಿದೆಕೊ ರಮಣೀಯನಂದನದೊಲು‖ (68)

ಆರದಾಶ್ರಮವಾತಮತಿಮನೋಹರಜಾತ |
ಚಾರುಫಲಸುಮಪೂತ ವಿಮಲೋದಕವ್ರಾತ |
ಸೌರಭಾಂಗದೊಳಾಕಲಿತ ಸುಕುಸುಮಸಮೇತ ನೆಲದ ನಂದನಕೆ ನೇತ ‖
ಕಾರುಣ್ಯದಿಂದ ವಿಸ್ತರಿಸಿ ಪೇಳುವುದನಘ |
ಘೋರಾಶರರು ಯಜ್ಞವಿಘ್ನಾಚರಣೆಗೈವ |
ದಾರುಣಮದಾವಾಗ ಭವದೀಯ ವನಕಿನ್ನು ನೆಲೆಯಾವುದುಸುರ್ವುದೆನಲು‖ (69)

ಈ ಮಹಾಪುಣ್ಯೋಪಸದನದಿರವಿದರಲ್ಲಿ |
ಕಾಮಹರಮಿತ್ರ ಯತಿರೂಪಾಂತು ತೋರುವುದ |
ಭೀಮಬಲರಕ್ಕಸರ ಬರವ ಕ್ರತುವಂ ಮಾಳ್ಪ ಕಥೆಯ ವಿಸ್ತರಿಸಿ ಪೇಳ್ವೆ ‖
ರಾಮ ಮಂಗಳನಾಮ ಭಜಕರಘನಿರ್ನಾಮ |
ತಾಮರಸಮಿತ್ರ ಗೋತ್ರಾಬ್ಧಿ ಸಂಭವಸೋಮ |
**ರಾಮಪುರಿ**ಧಾಮ ಸುಪ್ರೇಮದಿಂ ಲಾಲಿಸುವುದನವರತ ವಿನುತಭೀಮ ‖ (70)

ಸಂಧಿ 12 ಕ್ಕಂ ಪದಂಗಳ್ 683

---

# ಹದಿಮೂರನೆಯ ಸಂಧಿ

ಸೂಚನೆ ‖ ಮರುತಾಸ್ತ್ರದಿಂದ ಮಾರೀಚನಂ ಪಶ್ಚಿಮದ |
ಶರನಿಧಿಗೆ ಕೆಡಪುತ ಸುಬಾಹುಮುಖ್ಯರ ತರಿದು |
ಪರಿಪಾಲಿಸಿದ ಗಾಧಿಸುತನಧ್ವರವ ದೇವತತಿ ನಲಿಯೆ ರಘುವೀರನು‖

ಮೇನಕಾತ್ಮಜೆ ಕೇಳು ಮುದದಿಂದಲಾ ಮೌನಿ |
ದೀನರಕ್ಷಣದಯಾಪರ ರಾಮಗಿಂತೆಂದ |
ಕಾನನದ ವೃತ್ತಾಂತಮಂ ಪೇಳ್ವೆ ವಿಸ್ತರದೊಳೆಂದುಜ್ಜುಗಂಗೊಳ್ಳುತ ‖
ಭೂನಾಥ ಕೇಳ್ಪೂರ್ವಯುಗದಿ ಸುರನಾಯಕಂ |
ಜ್ಞಾನನಿಧಿದಿವಿಜ ಬಹುಸಾಸಿರಬ್ದಂಗಳಂ |
ಮಿೂ ನೆಲದಿ ತಪಮೆಸಿಸಿದಾ ವಾಮನಾಶ್ರಮಂ ಸಿದ್ಧಾಶ್ರಮಾಖ್ಯದಿಂದೆ ‖ (1)

ಇಲ್ಲಿ ವೈರೋಚನಿಬಲೀಂದ್ರ ದೇವಾದಿಗಳ |
ನೆಲ್ಲರಂ ಗೆಲ್ದು ಲೋಕತ್ರಯಂಗಳನಾಳ್ದ|
ನೆಲ್ಲ ಜನ ಮೆಚ್ಚುವೋಲನಿತರೊಳ ಯಾಗಮಂ ಮಾಳ್ಪೆನೆಂದಿಚ್ಛೈಸಲು ||
ನಿಲ್ಲುವಡಶಕ್ಯಮಾಗಲ್ಪಾಕಶಾಸನಂ |
ಗೆಲ್ಲ ದೇವತೆಗಳೈತಂದು ಶ್ರೀರಾಜನಂ |
ಸಲ್ಲಲಿತಪಳೆವಾತಿನಿಂದುದಿತವಾಣಿಯಿಂ ನುತಿಗೈದು ಮಗುಳೆಂದರು || (2)

ಬಲಿ ಮಹಾಧ್ವರವನೆಸಗುವ ಮೂರುಲೋಕದೊಳ್ |
ಬಲಕೆ ಪಾಸಟಿಯಿಲ್ಲದಂತಿಪ್ಪನಾದಡೆಯು |
ಗೆಲವು ಸಮನಿಸದಿಂದ್ರಗದರಿಂದ ನೀಂ ವಾಮನಾಕೃತಿಯನನುಸರಿಸುತ ||
ನಲವಿಂದಲಾತನಂ ಯಾಚಿಸುತೆ ಜಯದಿಂದ |
ಕಲಿತನಾದಡೆ ದೇವಕಾರ್ಯಂಗಳೆಲ್ಲ ಸಂ |
ಚಲನೆಯಿಲ್ಲದೆ ವಶವನೈದುವದು ದಯದಿಂದ ಲಾಲಿಸೀ ಬಿನ್ನಪವನು || (3)

* ಅನಿತರೊಳು ಕಾಶ್ಯಪಂ ಪತ್ನಿಯಿಂದೊಡಗೂಡಿ |
ವನಜಾಕ್ಷನಂ ಕುರಿತು ದಿವ್ಯಸಾಸಿರವರುಷ |
ಘನತರದ ತಪವನಾಚರಿಸಿ ಮೆಚ್ಚಿಸಲಾಗ ನಿಖಿಲಾತ್ಮ ಪ್ರೀತಿಯಿಂದೆ ||
ವನಧಿಮೇಖಲೆಗೈದಿ ಒಪ್ಪದಿಂದಿಂತೆಂದ |
ಮುನಿನಾಥ ನೀನದೇಂ ಕಾರಣಂ ತಪಗೈದೆ |
ನಿನಗಾನು ಬೇಡಿದುದನಿತ್ತಪೆಂ ಯಾಚಿಸೆನಲಾ ಮೌನಿ ಬಿನ್ನೈಸಿದಂ || (4)

ವರತಪೋಮಯ ತಪೋರಾಶಿ ತಾಪಸವರ್ಯ |
ಗುರು ತಪೋರೂಪ ತಾಪಸಲೋಕಸಂತಾಪ |
ಹರ ವಿರಿಂಚಿಪ್ರಮುಖನುತಚರಣ ಲಾಲಿಸುವುದೆನ್ನ ವಿಜ್ಞಾಪನೆಯನು ||
ಶರಣರಂ ಪೊರೆಯಲವತರಿಪುದೆನ್ನೊಳು ನೀನೆ |
ತರಳನೆಂದೆನಿಸುತಿಂದ್ರಾವರಜ ನಾಮಮಂ |
ಧರಿಸಿ ಶೋಕಾತುರರ ಸುರರ ರಕ್ಷಿಪುದೆನಲ್ಪುರುಷೇಶನಿಂತೆಂದನು || (5)

---

* ದೇವೀಸಹಾಯೋ ಭಗವಾನ್ ದಿವ್ಯಂವರ್ಷಸಹಸ್ರಕಂ||
ವ್ರತಂ ಸಮಾಪ್ಯ ವರದಂ ತುಷ್ಟಾವ ಮಧುಸೂದನಂ ||೧೧||
ತಮುವಾಚ ಹರಿಃ ಪ್ರೀತಃ ಕಾಶ್ಯಪಂ ಧೂತಕಲ್ಮಷಂ ||
ವರಂ ವರಯ ಭದ್ರಂತೇ ವರಾಹೋऽಸಿ ಮತೋ ಮಮ ||೧೪||
(ವಾ. ರಾ.—೨೯ ನೆಯ ಸರ್ಗ)

ಪಾರಿಕಾಂಕ್ಷಿತ ಬೇಡಿದರ್ಥಮಂ ಕೈಗೈವೆ |
ಕಾರುಣ್ಯದಿಂದಲೆಂದೊರೆದು ಸನ್ಮಾನಿಪ್ಪಂ |
ದಾರಕರ ನಿಟ್ಟಿಸಿದ ಸಾರಸುರಚಾಪಹರಸಾರನು ಕಟಾಕ್ಷದಿಂದೆ ||
ಪೂರುವದೊಳಾ ಕಶ್ಯಪಾದಿತೀಯರಿಗೆ ಸುಕು |
ಮಾರನಹೆನೆಂದಿತ್ತ ವರವದದರಿಂದಲೀ |
ಧಾರಿಣಿಯೊಳವತರಿಸಿ ಬಲಿಯ ಬಂಧಿಸಿ ಪೊರೆವೆನಿಂದ್ರಾದ್ಯರನು ಮುದದಲಿ|| (6)

ಎಂದೊರೆಯಲಖಿಳಬೃಂದಾರಕರ ಸಂದಣಿಯ |
ಮಂದಸಂತೋಷದಿಂದೈದಲಿತ್ತಲು ಹರಿಯು |
ಬಂಧುರಕಟಾಕ್ಷದಿಂ ವಾಮನಾಕೃತಿಯಾಗಿ ಕಶ್ಯಪನೊಳವತರಿಸಿಯೆ ||
ಬಂದು ಬಲಿಯಧ್ವರಕೆ ನಿಖಿಲಭೂಸುರರೆಡೆಯ |
ಲಂದು ಮೂರಡಿ ತಿರೆಯ ಬೇಡಲವನಿಯೊಳಂದು |
ಬಂದು ಈರಡಿಗೈದು ಮೂಲೋಕವೆಲ್ಲಮಂ ಬಲಿಯ ಬಂಧಿಸಿ ಬೇಗದಿ || (7)

ಸಿರಿಯನೆಲ್ಲವನು ಪುರುಹೂತನಿಗೆ ಪಾಲಿಸುತ |
ಮೆರೆದಂದಿನಿಂದಲೀ ಭುವಿಯಲ್ಲಿ ದಿವ್ಯತಪ |
ವೆರಸಿ ಸನ್ಮಾನಿಗಳಿಗುಪದೇಶಗೈವುತ್ತಲಿರ್ಪನನುದಿನ ಬನದೊಳು ||
ಪರಮಪುರುಷನ ವರದೊಳಿದುವೆ ಸಿದ್ಧಾಶ್ರಮದ |
ವರನಾಮಮಾಂತೆಸೆವುದದರಿಂದೆ ಶಮಧನರು |
ತರತರದೊಳಾಶ್ರಯಿಸಿ ನಿಯಮದಿಂದೆಸೆದಿರ್ಪರಿಲ್ಲಿ ಕಾಕುತ್ಸ್ಥತಿಲಕ || (8)

ಇದು ಸಕಲಸಿದ್ಧಿಗಳ ತಾಣಮಾದುದರಿಂದ |
ಲಿದು ನೆಲೆ ಮಹಾಧ್ವರಕೆ ಮಾರೀಚಮೊದಲಾದ |
ಸದಗರಕ್ಕಸರೈದಿ ಯಜ್ಞವಿಘ್ನವ ಮಾಳ್ಪರೆಂದೊರೆದು ಮೋದದಿಂದ ||
ಪದುಮಾಕ್ಷರಾಮಲಕ್ಷಣರನೊಡಗೊಂಡು ಬಂ |
ದದುಭುತದ ಸಿದ್ಧಾಶ್ರಮವ ಪೊಕ್ಕನಾ ಮೌನಿ |
ಚದುರಿಂದ ಪೊಳೆದಂ ಪುನರ್ವಸೂಯುತಚಂದ್ರ ರಾರಾಜಿಸುವ ತೆರದೊಳು|| (9)

ಯತಿರಾಯ ದಶರಥನ ಸುತರನೊಡಗೊಂಡು ಬ-|
ರ್ಪತಿಶಯವ ನಿಟ್ಟಿಸುತಲಾಶ್ರಮಾವಾಸಮುನಿ |
ತತಿಗಳೈತಂದರ್ಘ್ಯಪಾದ್ಯಂಗಳಿತ್ತು ಫಲಮೂಲಂಗಳನ್ನರ್ಪಿಸಿ ||
ಹಿತದಿಂದ ಗಾಧಿಸಂಭವನ ಪೂಜಿಸಿ ಬಳಿಕ |
ಪೃಥುಕರನ್ನುಪಚರಿಸಿ ಕರೆದೊಯ್ದು ಬನದಲು-|
ನ್ನತಮಾಗಿ ನುತಿಗೈದರಾ ತಪೋಮಂದಿರನ ಮಾನವಾತ್ಮಜರ ಮುದದಿ|| (10)

ಅನಿತರೊಳು ರಾಮಲಕ್ಷ್ಮಣರೊಂದು ಮೌಹೂರ್ತ |
ಘನತೆಯಿಂ ವಿಶ್ರಮಿಸಿ ತಕ್ಷಣದೊಳೈತಂದು |
ವಿನಯದಿಂ ಕರಗಳಂ ಮುಗಿದು ಮಗುಳಿಂತೆಂದರಮಿತಸಂತೋಷದಿಂದೆ ||
ಮುನಿನಾಥನೀ ದಿನವೆ ಯಜ್ಞದೀಕ್ಷಿತನಾಗು |
ಬನಕೆ ಸಿದ್ಧಾಶ್ರಮಾಭಿಧವ ನಿಜಮೆಂದೆನಿಸು |
ವನಧಿಮೇಖಲೆಯೊಳುಂ ನಿಜವಾಣಿ ಸತ್ಯಶೌಚಮುಮೆಂದುಮೆನಿಸುವಂತೆ|| (11)

ಎಂದೊರೆಯಲಾಗ ರಘುನಂದನರ ವಾಣಿಯಂ ।
ಛಂದದಿಂದಾಲಿಸುತ ಯಾಗದೀಕ್ಷೆಯ ಮೌನಿ ।
ಹೊಂದಿರಲ್ಕಂಡು ನೃಪಸುತರೀರ್ವರೆಚ್ಚರದೊಳಂದಿನಿರುಳಿರ್ದು ಬಳಿಕ ||
ಬಂಧೂಕನಿಭನಿನಂ ಮೂಡಲುದಯಾಚಲದೊ |
ಳಂದು ಸಂಧ್ಯಾಕೃತ್ಯಮುಂ ರಚಿಸಿ ಬೇಗ ರಘು |
ನಂದನರ್ಬಂದು ವಂದನೆಗೈದು ಬೆಸಗೊಂಡರಾ ಮೌನಿಯಂ ನಗುತಲೆ || (12)

ಧೀರ ಮುನಿಶಾರ್ದೂಲ ಕ್ರೂರರಕ್ಕಸಕುಲವಿ |
ದಾರಣಂ ಗೈವ ಸಮಯವ ಪೇಳ್ವುದೆನಲು ರಘು |
ವೀರನೊಡನಿಂತೆಂದನೆಡಬಲದೊಳೊಪ್ಪಿರ್ದ ತಾಪಸರ್ಬಳಿಕ ಮುದದೀ ||
ವೀರ ಕೇಳಿಂದಿನಿಂದಾರುದಿನ ಪಗಲಿರುಳು |
ದಾರಮುನಿ ಮೌನದಿಂದಿರ್ಪ ದಾನವ ಬಾಧೆ |
ತೋರದಂತೆಚ್ಚರದಿ ಕಾಯ್ದೀ ಮಹಾಧ್ವರವ ಮಾಡಿಸುವುದೆನುತೊರೆದನು|| (13)

ಪರಮಋಷಿಹರ್ಯಕ್ಷರೊರೆದ ಮಾಳ್ಕೆಯೊಳಾವು |
ಶರಚಾಪಸಾಹಾಯ್ಯಮೆನಿಸಿ ಮುನಿಪುಂಗವಂ |
ವಿರಚಿಸುವ ಸಪ್ತತಂತುವನು ಪರಿಪಾಲಿಸುವೆವೆನಲಾಗ ತಾಪಸಿಗಳು ||
* ಪರಪಿ ದರ್ಭೆಗಳ ಸಸ್ರುಕ್‌ಚಮುಸಪುಷ್ಪಂಗ |
ಳಿರಿಸಿ ವೇದಿಯೊಳಗ್ನಿಯನ್ನಿಟ್ಟು ಹುತಗೈದು |
ವರಗಾಧಿಸುತಸಹಿತಲೆಸಗಿದರ್ಕ್ರತುವನತಿಗಳೆಯದಲೆ ಸದ್ವಿಧಿಯಲಿ || (14)

ತಾಪಸೋತ್ತಮ ಯಾಗದೀಕ್ಷೆಯನ್ನನುಕರಿಸ |
ಲಾ ಪರಮಪೂರುಷರು ಚಾಪಬಾಣಂಗಳಂ |
ಕೈಪಿಡಿಯೊಳುಂ ಪಿಡಿದು ಕಾಯ್ದಿರ್ದರಾರುದಿನ ಪಗಲಿರುಳ್ನಿದ್ರೆಯುಳಿದು ||
ಪಾಪಜನರೈತರದ ಮಾಳ್ಕೆಯೊಳ್ ಕಾಯ್ದಿರಲ್ |
ಭೂಪಾಲಕಾತ್ಮಜರ್ ಬಳಿಕ ವಿಶ್ವಾಮಿತ್ರ |
ನೈಪುಣ್ಯಋತ್ವಿಜರ್ವೆರಸಿ ಕ್ರತುವಂ ರಚಿಸಲೆಳಸಿದ ಯಥಾಶಾಸ್ತ್ರದಿಂ || (15)

* ಸದರ್ಭಚಮಸಸ್ರುಕ್ಕಾ ಸಸಮಿತ್ಕುಸುಮೋಚ್ಚಯಾ ||
ವಿಶ್ವಾಮಿತ್ರೇಣ ಸಹಿತಾ ವೇದಿರ್ಜಜ್ವಾಲ ಸರ್ತ್ವಿಜಾ ||೯||
(ವಾ. ರಾ.—೩೦ ನೆಯ ಸರ್ಗ)

ಪರಿಪರಿಯ ವಿಧದಿ ಸ್ವಾಹಾ ಸ್ವಧಾಯೆಂದೆನುತ ।
ಉರುತರದ ಮಂತ್ರದಿಂದಾಹುತಿಗಳನ್ನೀಯೆ ।
ಪರಪಿದಂ ನಾಲ್ದೆಸೆಗೆ ನಿಜಶಿಖೆಗಳನ್ನಗ್ನಿ ಕುಂಡದೊಳ್ ಪ್ರಜ್ವಲಿಸುತ ॥
ಹರಹಿಕೊಳ್ಳಲ್ಘಮವನಾಕಾಶಮಂಡಲದಿ ।
ದುರುಳದಾನವರರಿದು ಹೋಮಸಂಭವದಿವ್ಯ ।
ಪರಿಮಳಮಿದೆಂದುರಗನಂತೆ ಮೊರೆಮೊರೆಯುತ್ತ ಜೊತೆಗೈದು ನಿಜಕುಲವನು॥ (16)

ಕಾಲಮೇಘದ ಬಳಗ ಮೇಲೆ ತಾರಾಪಥವ ।
ಲೀಲೆಯಿಂದಪಹರಿಪ ತೆರದಂತೆ ರಕ್ಕಸರ ।
ಜಾಲವೈತರುತಿರಲ್ಕಾಗಸದೊಳತಿರಭಸಮಾದುದತಿ ಘೋರತರದಿ ॥
ಆಲಸ್ಯಮಿಲ್ಲದತಿಜವದಿ ಕೈಪರೆಗುಟ್ಟೆ ।
ಕೋಳಾಹಳದೊಳಟ್ಟಹಾಸಗಳ ಗೈವುತಾ ।
ಭೀಳದಾನವನಿಚಯ ಕರೆದರಾಗಲ್ ರಕ್ತಪಿಶಿತಖಂಡದ ಮಳೆಗಳ ॥ (17)

ಸುರಿವ ರುಧಿರಾಸಾರದಿಂದಗ್ನಿವೇದಿ ಸಂ ।
ಭರಿತಮಾಗಲ್ ರಾಘವಂ ಕೋಪವೆಗ್ಗಳಿಸಿ ।
ಸರಳತಿರುವುತಲೈದಿ ನೋಡುತಿರೆ ನಾಲ್ದೆಸೆಯನಾಗಸದ ಮಧ್ಯದೊಳಗೆ ॥
ಗಿರಿಮುಗಿಲ ಬಳಗದಂತುರುನಿಬಿಡಕರಮಾಗಿ ।
ಬರುವ ರಕ್ಕಸರಂ ಸುಬಾಹುಮಾರೀಚರಂ ।
ತ್ವರಿತದಿಂದೀಕ್ಷಿಸುತ ಲಕ್ಷ್ಮಣನೊಳಿಂತೆಂದನತಿಪ್ರೀತಿಘನವಚನದಿ ॥ (18)

ಸೌಮಿತ್ರಿ ಕೇಳೀ ಮಹಾಧ್ವರವನಲೆಯಲ್ಕೆ ।
ಕಾಮಚರರೈತಂದರಿವರನೀ ಕ್ಷಣದಲ್ಲಿ ।
ತಾಮಸವನುಳಿದು ಬಲಭಂಗಮಂ ಮಾಡಿದಪೆನೆನುತ ಪಾವನಶರವನು ॥
ಪ್ರೇಮದಿಂದಾಗ ಕರತಾಮರಸದೊಳ್ಪಿಡಿದು ।
ಭ್ರಾಮಕಂಗೈದಿಡಲ್ ಮಾರೀಚರಕ್ಕಸನ ।
ಕೈಮೆಕೊಂಡೊಯ್ದುದಾ ಶರವು ಶತಯೋಜನಕ್ಕೇನೆಂಬೆನದ್ಭುತವನು ॥ (19)

ಶೀತದಿಂ ಮೋಹಿಸಿ ವಿಚೇತನಂಗೊಳಿಸುತ್ತ ।
ಪಾತಕನ ಕೊಂಡೊಯ್ದು ಪಶ್ಚಿಮದ ಕಡಲೊಳಗೆ ।
ವಾತಮಾರ್ಗದಿ ಕೆಡಪಲನಿತರೊಳಗಾಗ್ನೇಯದಿವ್ಯಮಾರ್ಗಣವ ಪಿಡಿದು ॥
ಭೀತಿಗೊಳುವಂತೆ ರಕ್ಕಸಸಂತೆ ಬೇಗ ರಘು ।
ಜಾತ ಭಳಿರೆಂದಿಟ್ಟು ಕೆಡಪಿದ ಸುಬಾಹುವಂ ।
ಶಾತಶರದಿಂದನ್ಯರಕ್ಕಸರ ಕುಲದರಿದ ನಿಮಿಷಾರ್ಧದೊಳಗೆ ಜವದಿ ॥ (20)

ಈ ಪರಿಯ ಕ್ರತುವಿಘ್ನ[1](ಕಾರ)ಕರ ನಾಶನವ ।
ಪ್ರಾಪಿಸುತ ರಘುವೀರ ಮುನಿಜನರ ಮಧ್ಯದೊಳ್ ।
ದೀಪಪ್ರಕಾಶದಿಂದಿರ್ದನಿಂದ್ರನ ತೆರದೊಳಾಗಸದಿ ದೇವತೆಗಳು ॥
ಭಾಷೆನುತ ಕುಸುಮವೃಷ್ಟಿಯ ಸುರಿವುತಡಿಗಡಿಗೆ ।
ಶ್ರೀಪತಿ ನಮೋನಮೋಯೆಂದು ನುತಿಗೈದು ಸ-।
ರ್ವೋಪಚಾರಗಳಿಂದೆ ಪೂಜಿಸಿದರತಿಶಯದಿ ರಘುವರನ ಚಿತ್ತದೊಳಗೆ ॥ (21)

ದಾನವರ ಶಿಕ್ಷಿಸಲ್ ಶ್ರೀರಾಮಚಂದ್ರಮಂ ।
ಮೌನಿಯು ಸಮಾಜದಿಂ ಕ್ರತುಸಮಾಪ್ತಿಯ ಗೈದು ।
ಸಾನಂದದಿಂದಲವಭೃತಮಜ್ಜನವ ಮಾಡಿ ಕೃತಕೃತ್ಯನಾಗಿ ಮುದದಿ ॥
ಭಾನುವಂಶಾಗ್ರಣಿಯೆ ಭಕ್ತತಾಪಾಪಹರ ।
ಶ್ರೀನಿಕೇತನ ಪುರುಷಶಾರ್ದೂಲ ಸಾಧು ಸ-।
ನ್ಮಾನಿತನೆ ಬಾರೆಂದು ಬಿಗಿದಪ್ಪಿ ಮಸ್ತಕವನಾಘ್ರಾಣಿಸುತಲೆಂದನು ॥ (22)

ಗುರುವಚನಮಂ ಸಫಲಮೆನಿಸಿ ಸಿದ್ಧಾಶ್ರಮದ ।
ಸಿರಿಯನನ್ವರ್ಥನಾಮಂಗೈದು ಮಖವ ನೀಂ ।
ಪರಿಪಾಲಿಸುತಲೆನ್ನ ಮನದಿಷ್ಟಮನ್ನಿತ್ತು ಕೃತಕೃತ್ಯಮಂ ಮಾಡಿದೈ ॥
ಕರುಣಾವನಧಿ ಭಕ್ತಸುರದೇನು ದಿವ್ಯಸುಂ ।
ದರಮೂರ್ತಿ ಲೋಕಮಂ ಪೊರೆಯೆ ಮನುಜಾಕೃತಿಯ ।
ಧರಿಸಿದ ಮಹಾವಿಷ್ಣು ಪಾಲಿಸೆಂದೆನುತ ಬಹುನುತಿಗೈದ ಗಾಧಿಸುತನು ॥ (23)

* ಕುಶಿಕಸುತನಧ್ವರವ ನೋಡಲೈತಂದಿರ್ದ ।
ಪಶುಪತಿಗೆ ನೀಕಾಶತಾಪಸೋತ್ತಮರೆಲ್ಲ ।
ಕುಶಲದಿಂ ಪಾರ್ಶ್ವದಲ್ಲಿಹ ರಾಮಚಂದ್ರನಂ ನೋಡಿ ಸಂತೋಷದಿಂದೆ ॥
ನಿಶಿಚರರ ಮರ್ದಿಸಿದ ಶೌರ್ಯಮಂ ಪೊಗಳಿ ಶ್ರೀ ।
ವಶನಾದ ವೈಕುಂಠ ನಿಜಪದ ಬೆಳಸಿಂದ ।
ವಶಮಾದನೆಂದು ಸನ್ನುತಿಗೈದು ಮುನಿವರನೊಳಿಂತೆಂದರಂದದಿಂದೆ ॥ (24)

ಝಡಿದು ರಕ್ಕಸಬೇರ ಲೋಕಗಳ ಪಾಲಿಸಲ್ ।
ಪೊಡವಿಯೊಳ್ಮಾನುಷಾಕೃತಿಯನಂಗೀಕರಿಸಿ ।
ಕೆಡಹಿದಂ ತಾಟಕಿಸುಬಾಹುಮುಖ್ಯರನೆಲ್ಲರನ್ಯರಿಂದಳವಪ್ಪದೆ ॥
ಮೃಡಮಿತ್ರನೀತನಹುದದರಿಂದ ಮೂರ್ತಿಯಂ ।
ಬಿಡದೆ ಮಾನಸದಿ ಪೂಜಿಪ ವಿಧವ ವಿಸ್ತರಿಸಿ ।
ಸಡಗರದಿ ಸಲಹಬೇಕೆಂದು ಮುನಿಗಳ್ಪೇಳಲಿಂತೆಂದ ಗಾಧಿಸುತನು ॥ (25)

---

1 ವಿಘ್ನನಾಶಕರ

* ಇಲ್ಲಿಂದ ಮುಂದಕ್ಕೆ ಈ ಸಂಧಿಯಲ್ಲಿ ಹೇಳುವ ಶ್ರೀರಾಮನ ಉಪಾಸನೆಯ ವಿಚಾರವು ವಾಲ್ಮೀಕಿರಾಮಾಣದಲ್ಲಿ ಇರುವುದಿಲ್ಲ.

ಏಸು ಧನ್ಯರೊ ಮಾನ್ಯರತುಳಕೃತಕೃತ್ಯರಿ-
ನ್ನೇಸು ಸುಕೃತಿಗಳೆಂದು ಪೇಳುವೆಂ ಮುನಿಗಳಿರ ।-
ಸಾಸಿರ ಸುನಾಮಕಗ್ಗಳ ರಾಮಚಂದ್ರಮುನ ದಿವ್ಯಮೂರ್ತಿಯ ಧ್ಯಾನಿಪ ॥
ವಾಸಿ ಪುಟ್ಟಿದುದಧಿಕನಾವನಾದಡು ಹೃದಯ ।
ವಾಸಮೆನಿಸಲ್ ದಶರಥಾತ್ಮಜನು ಯೋಗಿಗಳ ।
ವಾಸಭೂಮಿಯೆನುತ್ತ ಪೇಳ್ದಪವು ಶ್ರುತಿಗಳುಪದೇಶಂಗಳಲ್ಲಿ ಬಿಡದೆ ॥ (26)

ಶ್ರೀರಾಮಚಂದ್ರಮನುದಾರಮೂರ್ತಿಧ್ಯಾನ ।
ಮಾರಿಗಳವಪ್ಪುದತಿವೈರಾಗ್ಯಪರರನುಳಿ ।
ದೋರಂತೆ ಪಾಪಕರ್ಮಿಗಳಿಂಗೆ ಸಿದ್ಧಿಸದು ಸಿದ್ಧವಿದು ಮೌನಿಗಳಿರ ॥
ಧೀರಸಂಗಮದಿಂದಮಿಹರು ದುಷ್ಕರ್ಮಗಳ ।
ಜಾರಿಸುತ ವಿಷಯಮಂ ಚಿತ್ತನಿಗ್ರಹಗೈದು ।
ಚಾರುತರ ಭಕ್ತಿಯಿಂದನುದಿನ ಉಪಾಸನೆಯ ಮಾಳ್ಪುದತಿಮೋದದಿಂದ ॥ (27)

ಭೇದಮೆರಡಾಗಿಹುದಹಂ ಗೃಹ ಪ್ರತೀಕಾಖ್ಯ ।
ವಾದಿ ಸೋಹಂಭಾವ ಸ್ವಾಮಿ ಭೃತ್ಯಾಕಾರ ।
ಸಾದರದಹಂ ಗೃಹಂ ನಿರ್ಗುಣ ಪ್ರತೀಕಾಖ್ಯ ಸಗುಣಮಿದು ಬುಧಸಮ್ಮತ ॥
ಸಾಧುಜನ ವಾಕ್ಯದಿಂದಧಿಕಾರಮುಳ್ಳನಿತ ।
ನಾದಿವಿದ್ಯೋಪಾಸ್ತಿಯಿಂದರಿತು ಸಂತತಂ ।
ಭೇಧಮಿಲ್ಲದೆ ನಿರಂತರಮಿಹುದು ರಾಮೋಹಮೆಂಬ ನಿಶ್ಚಯವ ಪಿಡಿದು ॥ (28)

ವೇದಾಂತನಿಷ್ಠಿತರುಪಾಸನಂಗೈವರಾ ।
ಮೋದದಿಂದಭ್ಯಾಸಬಲದಿಂದಲಂತ್ಯದಿ ವಿ ।
ನೋದದಿಂದಲಿ ನಿರ್ವಿಕಲ್ಪಬ್ರಹ್ಮವ ಬೆರೆದು ಸುಖಿಯಪ್ಪರಿದು ನನ್ನಿಯು ॥
ಆದಡೆಯು ತ್ರಿಪುಟಿಯಿಂ (?) ಪಾಲ್ಬೆರೆದ ವಾರಿಯುಂ ।
ಭೇದಮಾಗದೆ ಕ್ಷೀರ ತೋರುವಂದದೆ ವೃತ್ತಿ ।
ಬಾಧೆಯಿಂ ತೋರುವುದು ಪರಬೊಮ್ಮ ನಿರ್ಮಲಿತಮಾಗಿ ಮಗುಳನ್ಯಮುಳಿದು ॥

ಜಾಗರದ ಕೊನೆ ಸುಪ್ತಿಗಾದಿಸಂಧಿಯ ಪೊಂದಿ ।
ಜಾಗರಂ ನಿದ್ರೆಗಳನಂಟದಲೆ ಮಗುಳೆ ವರ ।
ಭೋಗಕಂ ಬೇರೆನಿಸದಲೆ ಸಾಕ್ಷಿರೂಪದಿಂದಿಹುದು ಪರಬೊಮ್ಮಸುಖವ ॥
ಭೋಗಿಸೆ ಸಮಾಧಿಯಿಂ ಬೋಧಮಯರಪ್ಪರಿದ ।
ಯೋಗಿಗಳು ಬಲ್ಲರದರೊಳು ಮೂರುವಿಧರೂಪ ।
ಮಾಗಿ ವರನುಂ ವರಿಯ ಶುದ್ಧಾತ್ಮವಾರಿಷ್ಠವೆಂಬ ನಾಮಂಗಳಾಂತು ॥ (30)

ಚಿತ್ತದಲಿ ರಾಮೋಽಹಮೆಂಬ ವಿದ್ಯಾವಿಷಯ |
ಕತ್ತಲೆಯ ಪರಿಹರಿಪ ಬೋಧೆ ತನ್ನಿಂ ತಾನೆ |
ಮತ್ತುದಿಸಿ ಸುಖದಲಿರ್ಪಾತನೇ ವರನವಂ ಪರರಿಂದ ಜ್ಞಾನಮುದಿಸಿ ||
ಕತ್ತರಿಸಿ ಮಲಿನಮುಂ ರಘುವೀರ ತಾನೆಂದು |
ಮೆತ್ತಣ ವಿಚಾರಮಂ ಅರಿಯದವ ತಾ ವರ್ಯ |
ಪತ್ತದಲೆ ಪರವ ರಾಮಧ್ಯಾನದಿಂ ವರಿಯನಾದವ ವರಿಷ್ಠನಹನು || (31)

ಯಮಮುಖ್ಯಧಾರಣಾಂತಂ ಸಮಾಧಿಗಳಂಗ |
ಕ್ರಮದಿಂದ ಸಾಧಿಸಿಯೆ ನಿರ್ವಿಕಲ್ಪವ ಪೊಂದ |
ಲಮಿತಸುಖಮಪ್ಪುದದು ನಿರ್ಗುಣಸಮಾಧಿಯದು ಸಗುಣಸಾಧಕವ ಪೇಳ್ವೆ ||
ಕಮಲಾಕ್ಷಮೂರ್ತಿ ಚಿಂತನೆಯನೇಕಂಗಳುಂ |
ಸಮನಿಸಲು ತದುಪಾಸ್ತಿ ನಾಲ್ಕು ವಿಧ ಮೊದಲೊಳುಂ |
ಸಮನಿಪುದು ಶ್ರವಣ ಪೂಜಾಜಪಧ್ಯಾನಂಗಳೆಂದು ಶ್ರುತಿಸಿದ್ಧಾಂತವು || (32)

ಮಾಧವನ ವೇದಶಾಸ್ತ್ರೋಕ್ತಯುಕ್ತಿಗಳಿಂದ |
ಲಾದರಿಸಿ ಪಿರಿಯನೆಂದರಿವುದದು ಶ್ರವಣ ಮಾ |
ತ್ರಾದರದಿ ವೈದಿಕಂ ತಾಂತ್ರಿಕಂ ಮಿಶ್ರಮೆನೆ ತೋರುವುದು ಮೂವಿಧಗಳು ||
ವೇದೋಕ್ತ ವೈದಿಕಂ ತಾಂತ್ರಿಕಂ ಮಗುಳಾಗ |
ಮೋದಿತವು ವೈದಿಕವು ಮೂವಿಧದಿ ಪೂಜೆಯಂ |
ಸಾಧಿಸಲ್ ಭೋಗಮೋಕ್ಷೋಭಯಪ್ರದಮಿದುವೆ ಸಿದ್ಧ ಪೂರ್ವಾನುಮತವು ||

ಜಪವು ನಾಲ್ವಿಧ ಪ್ರೋಚ್ಚ ರಸನಾಧಿಕಮುಪಾಂಶು |
ಗುಪಿತಮಾನಸಮೆಂದು ಸ್ವರನಾಲ್ಕರಿಂ ಬಿಡದೆ |
ಜಪಿಸೆ ವಾಚಕಮೋಷ್ಠಚಾಲನಮುಪಾಂಶುಕವು ಜಿಹ್ವೆಯನ್ನಲುಗಿ ಮಾಳ್ಪ ||
ಜಪವೆ ರಸನಾಧಿಕಂ ಮೌನದಿಂ ಚಿತ್ತದೊಳ್ |
ಲಪಿಸುವುದೆ ಮಾನಸಿಕಮಿೂ ವಿಧದಿ ರಘುವರನ |
ತಪನವಂಶೋತ್ತಮನ ಪ್ರೀತಿಯಿಂ ಸಂಗ್ರಹಿಸಿ ಬೃಸಿಯ ಮಧ್ಯದಿ ಮಂಡಿಸಿ || (34)

ವಿರಚಿಸುತ ಶಾಸ್ತ್ರೋಕ್ತನಿತ್ಯಕರ್ಮಂಗಳಂ |
ಭರದಿ ಪ್ರಾಣಾಯಾಮಗಳ ಮಾಡಿ ನೇತ್ರಂಗ |
ಳರೆಮುಗಿದು ರೇಚಕ ಸುಪೂರಕಂ ಕುಂಭಕದಿ ಬಲಿಯುತ್ತ ಪವಮಾನನ ||
ಹರುಷದಿಂ ಹೃತ್ಕಮಲಮಂ ಊರ್ಧ್ವಮುಖಗೈವು |
ತುರುಪುಂಡರೀಕಮಧ್ಯದಿ ದಿವ್ಯರತ್ನಸಂ |
ಭರಿತಮೆನಿಸಿಹ ಮಂಟಪವ ರಚಿಸಿ ತನ್ಮಧ್ಯ ಕಲ್ಪವೃಕ್ಷವ ನಿರ್ಮಿಸಿ || (35)

ಕುರುವಿಂದ ಶಕಲಸಂಕಲಿತಾಷ್ಟದಳಯುಕ್ತ |
ಸರಸಿಜವ ನೆನೆದು ತನ್ಮಧ್ಯದದಲಿ ವಿದ್ರುಮದ |
ಕರಮೆಸೆಯುವಾ ಸ್ತಂಭಮುಕ್ತಾವಿತಾನಂಗಳಿಂದಲೆಸೆವಾ ಜಗಲಿಯ ||
ಸ್ಮರಿಸಿ ರನ್ನದ ಪಟ್ಟವಣೆಯ ತನ್ಮಧ್ಯದೊಳ್ |
ಮೆರೆವ ದಶರಥನಂಕಗತರಾಮಚಂದ್ರನಂ |
ಸುರರಾಜಮಣಿನೀಲ ಸ್ಮರಕೋಟಿಲಾವಣ್ಯ ಕೋಮಲಾಂಗನ ನೆನೆವುದು || (36)

ತಳತಳಿಪ ಮಣಿಮುಕುಟಕುಂಡಲಂ ಗ್ರೈವೇಯ |
ಪೊಳಪೊಳೆವ ಭುಜಕೀರ್ತಿವಲಯೋರ್ಮಿನಿಚಯುಗಳ |
ನಳನಳಿಪ ಪೀತಕೌಶೇಯ ಹರಿಚಂದನದ ಮಾಲಿಕಾಲಂಕೃತದಲಿ ||
ಸುಳಿಸುಳಿವ ನಿರಿಗುರುಳ ಕೆಳೆಯಾಂತ ಪೆರೆನೊಸಲ |
ಕಳೆಕಳೆಯ ಕತ್ತುರಿಯ ತಿಲಕ ಭ್ರೂಲತೆಗಳಿಂ |
ಜಲಜಾಕ್ಷ ಶ್ರೀರಾಮಮೂರ್ತಿಯಂ ಧ್ಯಾನಿಪುದು ಕಲ್ಪವೃಕ್ಷದ ಮೊದಲೊಳು ||

ಎಡಬಲದಿ ಧರಣಿಸುತೆ ಸೌಮಿತ್ರಿಯೊಪ್ಪಿರ-|
ಲ್ಕೊಡನೆ ಮುಂಗಡೆಯೆ ಮರುತಜರವಿಜರೆಸೆದಿರಲ್ |
ಪಿಡಿದಿರ್ಪ ಕೋದಂಡಬಾಣ ರಂಜಿಪ ಹಸ್ತಯುಗಳದಿಂ ದೀಪ್ಯತೇಜ ||
ಮಿಡುತ ದೇಹಚ್ಛಾಯೆ ಪರಪಿರಲ್ಹ್ಲಾದೆಸೆಯ |
ನಡಿಗಡಿಗೆ ಜೀಯ ಪಾಯವದಾರುರೆನ್ನುತು-|
ಗ್ಗಡಿಪ ಸುರಮೌನಿಗಳ ಗಡಣದಿಂದಲಿ ಮೆರೆದ ರಾಮನಂ ಜಾನಿಸುತಲಿ || (38)

ಧ್ಯಾನಮಾ ವಾಹನಾದ್ಯೌಪಚಾರ್ಯಗಳಿಂದ |
ನಾನಾವಿಧದ ಪುಷ್ಪಪರಿಮಳಂಗಳನೆಲ್ಲ |
ಜ್ಞಾನನಿಧಿಗರ್ಪಿಸಿ ನಿಮೀಲಿತಾಕ್ಷಿಗಳಿಂದ ತನ್ಮಯಾವಸ್ಥೆಯೊಂದಿ ||
ಏನೊಂದನರಿಯದೆಚ್ಚರುದಳೆಯದೀ ಪರಿಯ |
ಸಾನಂದದಿಂದ ಸಾಕ್ಷಾತ್ಕರಿಸಿ ಯೋಗದಿಂ |
ಧ್ಯಾನಿಪರು ತಾಪಸೋತ್ತಮರು ಶ್ರೀರಾಮನಂ ನಿಜಚಿತ್ತನಿಳಯದಲ್ಲಿ || (39)

ಇಂತು ಸುಗುಣೋಪಾಸನೆಯ ಮಾಳ್ಪ ಯಮಿಗಳಿಗ |
ನಂತಜನ್ಮಾಂತರದ ಪಾತಕಂಗಳು ನೀಗಿ |
ಸಂತತಾನಂದಮಯರಪ್ಪರಾತನ ಗೋತ್ರ ಸದ್ಗತಿಗಳಂ ಪಡೆವುದು ||
ನಿಂತ ಭೂಮಿಯೆ ವಾರಣಾಸಿ ನುಡಿಯದೆ ವೇದ |
ಮಂತ್ರ ಪತಿತನೆ ಪಾವನಂ ಎನಿಪ್ಪೀ ಪರಿಯ |
ಮುಂತೆ ಸಾಕಾರಮಂ ನೆನೆದು ನಿರ್ಗುಣವನುಂ ಭಾವಿಪುದು ಮೌನಿಗಳಿರ || (40)

ಮಾನಸದ ಪೂಜೆಯನ್ನೀಪರಿಯಲನುದಿನದಿ |
ಸಾನಂದದಿಂ ಮಾಳ್ಪ ಸಜ್ಜನರ ಮಹಿಮೆಗಳ |
ನೇನೊಂದ ಪೇಳ್ವರಳವಪ್ಪುದು ಚತುರ್ಮುಖಗಸಾಧ್ಯ ಕೇಳ್ಮೌನಿಗಳಿರ ||
ಏನೊಂದು ಕೃತ್ಯಗಳನರಿಯದವನಾದಡ-|
ಜ್ಞಾನಿಯಾದರು ಭಕ್ತಿಯಿಂದ ಸಾಲಗ್ರಾಮ |
ಶ್ರೀನಾಯಕನ ಮೂರ್ತಿಯಂ ಪೂಜಿಸಲ್ವೇಳ್ಕು ಮತ್ತದಂ ವಿಸ್ತರಿಪೆನು || (41)

ಪರಿಪೂಜಿಸುವುದು ಸಾಲಗ್ರಾಮಮಂ ವಿಷಮ |
ಪರಿದು ಸಮವಾಗಿ ಸಂತತವೊಂದು ವಿಷಯ ಮ-|
ತ್ತೆರಡಿರಲ್ಕ್ರಮಮೆಂದು ತಿಳಿದು ಸದ್ಭಕ್ತಿಯಿಂ ಸರ್ವೋಪಚಾರದಿಂದೆ ||
ಎರಡಾರು ಗಂಡಕೀಶಿಲೆಯನರ್ಚಿಪ ಪುಣ್ಯ |
ಕರನ ಭಾಗ್ಯವ ಪೇಳಲಳವೆ ಮತ್ತಾ ನಿಲಯ |
ಸಿರಿಯನೆಂತೆಂದೊರೆಯಬಹುದು ಪೂರ್ವದ ಪುಣ್ಯಲತೆಫಲವು ಮೌನಿಗಳಿರ|| (42)

ನೂರು ಸಾಲಗ್ರಾಮಶಿಲೆಗಳಾವನ ಗೃಹದೊ |
ಳಾರಾಧನೆಯ ಮಾಳ್ಪರದು ವಿಷ್ಣುಮಂದಿರಂ |
ತೋರುವುದು ವೈಕುಂಠಮೆನಿಸಿ ಹರಬೊಮ್ಮಾದಿಸುರರ ನೆಲೆಯೆಂದರಿವುದು ||
ಈರೆರಡು ರಾಮನಾಮಾಂಕಿತ ಸುಮೂರ್ತಿಗಳ |
ನೋರಂತೆ ಪೂಜಿಸಿದಡವನು ಜೀವನುಕ್ತ |
ಕಾರಣಿಕನಿಲಯರಘುವರನಂಘ್ರಿಪಂಕಜಮಿಳಿಂದನಿದು ಸತ್ಯವಚನ || (43)

ಪರಮಸಾಲಗ್ರಾಮಗಳಲಿ ಸೀತಾರಾಮ |
ನುರುಮೂರ್ತಿಯನ್ನಾವ ಪೂಜಿಸಿಯೆ ಶ್ರೀಖಂಡ |
ಪರಿಮಳದ ಸುಮದಿಂದೆ ಪಾಡಿ ಪೊಗಳುತೆ ಮುಂದೆ ಕುಣಿದು ಕೈವಾರಿಸುತ್ತ ||
ನಿರತ ಕೀರ್ತಿಸಿ ನೋಡಿ ನಲಿದು ಪುಳಕಾಂಕುರದಿ |
ಭರದಿಂದ ವಂದಿಸುತ ಭಕ್ತಿಭಾವನೆ ಪೆರ್ಚೆ |
ಮರೆಯದಲೆ ಭಕ್ಷ್ಯಭೋಜ್ಯಾದಿಗಳಿನರ್ಚಿಸುವನಾತನೆ ಕೃತಾರ್ಥನಲ್ತೆ || (44)

ರಾಮನಂ ಪೂಜಿಸುವ ಕರ ಸುಕರ ನೋಡಲ್ಕೆ |
ರಾಮನಂ ನುತಿಗೈವ ರಸನೆ ರಸಗಳ ವಸನೆ |
ರಾಮನಂ ವೀಕ್ಷಿಸುವ ನೋಟ ಮುಕ್ತಿಯೊಳಾಟ ಮಣಿಯೆ ಶಿರ ಸುಖದ ಶಿರವು ||
ರಾಮಾರ್ಪಿತಾನ್ನ ತತ್ಪಾದಶೇಚಿತಜಲವ |
ನೇಮದಿಂ ಕೊಂಬನವ ನಾಲ್ಮೊಗನಿಗಧಿಕತರ |
ಈ ಮಹಾತ್ಮೆಯೊಳೊಂದು ಇತಿಹಾಸಮುಂಟದಂ ಪೇಳ್ವೆನತಿವಿಸ್ತರದೊಳು|| (45)

ವೇದಂಗಳಿಗೆ ನಿಲಯು ಶಾಸ್ತ್ರಂಗಳಿರವು ಮಿ-|
ಕ್ಕಾದ ಕಾವ್ಯಂಗಳಿಗೆ ತವರುಮನೆ ಧರ್ಮಗಳ |
ನೋದಿಸುವ ಮಂದಿರಂ ವಿರತಿಶಮೆದಮೆಗಳಿಗೆ ತಾಣಮೆನಿಪೋರ್ವ ದ್ವಿಜನು ||
ಸಾದರದೊಳೊಂದು ದಿನ ಪಥವಿಡಿದು ಬರುತಿರಲ್ |
ಮಾಧವನ ಮದದಾನೆ ಮದನನರೆಗಿಳಿ ಕಳೆಗ |
ಳಾದಿಯೆನಿಪೊರ್ವೆ ವೇಶ್ಯಾಂಗನೆಯು ಬರುತಿರ್ದಳತಿಮೋಹನದ ಕಣಿಯೊಲು ||

ನೋಡಿದಾಕ್ಷಣ ವಿಪ್ರಗಾದುದತಿ ಚಾಂಚಲ್ಯ |
ವೋಡಿದವು ಶ್ರುತಿಶಾಸ್ತ್ರವಿರತಿಶಮೆದಮೆಗಳುಂ |
ಮೂಡಿದುದು ಮದನಾಗ್ನಿ ನಿರ್ಭೀತ ಲಜ್ಜೆಯಂ ನೀಗುತಾಕ್ಷಣದಿ ಬಂದು ||
ಬೇಡಿದಂ ತರಳೆ ನಿಜದರ್ಶನದಿ ಕಾಮಾಗ್ನಿ |
ಕೂಡಿಹುದು ಚಿತ್ತಮಂ ವಿಪ್ರಕುಲಜಂ ಶ್ರೇಷ್ಠ |
ನೀಡಿ ಪದಯುಗಳಮಂ ಮಕುಟಾಗ್ರಭೂಷಣಂಗೈದು ರಕ್ಷಿಸುವುದೆನುತ || (47)

ಮದನನಾರ್ಗೊಳ್ಳಿದಂ ಮಮತೆಯಿಂದಂ ಶಾಸ್ತ್ರ |
ವಿದಿತ ಸುಜ್ಞಾನಮುಂ ವಿನಿಹತ್ಯ ದುಷ್ಟಪದ |
ಕೊದಗಿಸಿದೆ ಕಾಮಾಂಧರಿಂಗದೆಲ್ಲಿರ್ಪುದೋ ಸುಮತಿ ವಿಪ್ರನ ದಿಟ್ಟಿಸಿ ||
ಸದಯ ನೀಂ ವಿಪ್ರನನಘನಪರಾಗಂ ದೈವ |
ಸದನ ವರ್ಣಶ್ರೇಷ್ಠ ನೀನೆತ್ತಲೀ ನೀಚ |
ಪದವಿ ತಾನೆತ್ತಲಿದು ವೇಶ್ಯಾಸಮಾಗಮಂ ವ್ಯಸನಸಂವರ್ಧಿಯಲ್ತೆ || (48)

ಅರೆನಿಮಿಷ ಸುಖವನಾಶ್ರಯಿಸಿ ದುರ್ಗಮಗಳ್ಗೆ |
ಬರುವುದೇನದರಿಂದ ಧನನಾಶ ವರ್ಣಹರ |
ಮುರುಜಾತಿಪಾತನಂ ದುಷ್ಕೀರ್ತಿಯಾಚಾರನಷ್ಟ ಲೋಕಾಪವಾದ ||
ಕರಮಾನಹಾನಿ ಧರ್ಮಕ್ಕೆ ಲೋಪ ವ್ಯಾಧಿ |
ಭರಿತ ನಿರಯಗ್ರಸ್ತರೂಪಿಣಿಯ ಸಂಗಮಂ |
ಮರುಳೆ ಬಯಸಿದರುಂಟೆ ಮಗುಳೆ ನೀನರಿಯದನೆ ಮರುಳುತನವೇತಕನಘ ||

ಕ್ರಿಮಿಜಾಲಯುತಮಮೇಧ್ಯಂ ಭರಿತ ದುರ್ಗಂಧ |
ವಮಿತಮೇದೋರಕ್ತ ಮಸ್ತಿಷ್ಕಸಂಕಲಿತ |
ವನುವು ಮೂತ್ರಪುರೀಷಪೂರಿತಶರೀರಮಂ ಚೆಲುವೆಂದು ಮೂಢಜನರು ||
ಭ್ರಮೆಗೊಂಡು ಕಾಂಕ್ಷಿಪರು ಧೀರರೀ ಮೂರ್ತಿಯಲಿ |
ರಮಿಸುವರೆ ನಿಜಬೋಧೆ ಪೋದುದೆಲ್ಲಿಗೆ ಭೂಮಿ |
ಯಮರ ದುಷ್ಕಾಂಕ್ಷೆಯನ್ನುಳಿದು ಬಿಜಯಂಗೈವುದತಿಲೇಸು ಸೌಖ್ಯದೊದಗು ||

ರೂಪಜೀವನೆ ವಿವೇಕದಿ ಭೂಸುರೋತ್ತಮಂ |
ಗೀ ಪರಿಯ ಪೇಳುತಿರೆ ಲಾಲಿಸುತ ಮದನಾಗ್ನಿ |
ತಾಪ ವರ್ಧನೆಯಾಗಲತಿಮೋಹವಶನಾಗಿ ಪ್ರಾರ್ಥಿಸುತವಳ್ಗೆ ಮುದದಿ ||
ಸೋಪಾಯದಿಂದಲಾರ್ಜಿಸಿದ ಧನಸಾಸಿರವ |
ಕೈಪೊಗಿಸಿ ಕಾಮುಕೇಳಿಯಲಿ ನೇಹವ ಬೆಳಸಿ |
ಪಾಪಪುಣ್ಯಂಗಳಂ ವೀಕ್ಷಿಸದಲಾ ಸುಖವೆ ಪರಮೆನ್ನುತಿರುತಿರ್ದನು || (51)

ಇರಲು ಕೆಲಕಾಲಕ್ಕೆ ಸರ್ವಸ್ವಮುಂ ಪೋಗೆ |
ನೆರೆಹೊರೆಗಳೊಳ್ ಕಳ್ದು ತಂದಿತ್ತು ಮತ್ತವಳ |
ನೆರೆವುತಿರೆ ಕೆಲಕಾಲ ನಿರ್ಬಂಧಕಿಕ್ಕಿದರ್ ಕಂಡು ತತ್ಪುರವಾಸಿಗಳ್ ||
ದೊರಕದಿರೆ ಚೌರ್ಯದೊಳ್ ತದ್ಗೃಹೋಚ್ಛಿಷ್ಟಮಂ |
ತಿರಿದುಂಡು ಕತಿಪಯ ದಿನಂಗಳಂ ಕಳೆಯುತಿರೆ |
ವಿರಸದಿಂದಾ ಗಣಿಕೆ ಬೈದು ನಿಜಗೃಹದಿಂದ ಪೊರಡಿಸಲ್ಕಾ ವಿಪ್ರನು || (52)

ನಗರದೊಳ್ ಪುಲ್ಕಸೆಪುಳಿಂದೆಚಾಂಡಾಲಾದಿ |
ಬಗೆಬಗೆ ಸ್ತ್ರೀಯರೊಳ್ ರಮಿಸಿ ನಿಶಿಯೊಳ್ ಚೌರ್ಯ |
ಮಿಗೆ ದಿವಾಮೈಥುನವನಾಶ್ರಯಿಸಿ ಮಧುಪಾನಮಾಂಸಭಕ್ಷಣೆಗಳಿಂದೆ ||
ವಿಗಡ ಸಂಚರಿಸುತಿರಲಾ ಪುರದಿ ಪಾತಕನ |
ಮೊಗವ ನೋಡಲ್ಬಾರದೆಂದು ಪೊರಮಡಿಸಲ್ಕೆ |
ಜಗವರಿಯೆ ವಿಪಿನದೊಳಗಾವಾಸಗೈದನಾ ವಿಪ್ರ ಚಾಂಡಾಲಿಯೊಡನೆ || (53)

ಪಥದಿ ಚರಿಸುವ ನರಮೃಗಾದಿಗಳನೆಲ್ಲಮಂ |
ಮಥಿಸಿ ಭಕ್ಷಿಸುತಾ ದುರಾತ್ಮ ಚಾಂಡಾಲಿಯೊಳ್ |
ಪೃಥುಕರಂ ಪಡೆದು ಕತಿಪಯ ದಿನಂಗಳ ಕಳೆಯಲನ್ನೆಗಂ ಮುಪ್ಪಡಸಲು ||
ಪ್ರಥಿತಕಫಪಿತ್ತವಾತಗಳು ಬಂದೆಡೆಗೊಂಡು |
ವ್ಯಥೆಗಿಕ್ಕೆ ದೇಹ ಜರ್ಝರಿತ ಮಾಗಲ್ಕೆ ದು-|
ಷ್ಪಥವಿಡಿದು ಸಂಕಟಂಗೊಳುತ ಬಂದನದೊಂದು ಕಾಸಾರಮಿರ್ಪಲ್ಲಿಗೆ || (54)

ತೊಳಲಿ ಕಾನನವ ಕಾಲ್ಬಳಲಿ ಬಂದಾ ಪತಿತ |
ನಳವಳಿದು ಮತ್ತೊಂದು ಪದ್ಮಾಕರವ ಸಾರಿ |
ಬಳಲ ಪರಿಹರಿಸಿಕೊಳಲುದಕಮುಂ ಕೊಂಬುವಡಶಕ್ತಿಯಿಂ ವಟಭೂಜದ |
ನೆಳಲೊಳೊರಗಿದ ನಿತ್ತಲೊರ್ವ ವಿಪ್ರೋತ್ತಮಂ |
ಘಳಿಲನೈತಂದು ಕೆರೆಯುಂ ನೋಡಿ ಸಂತೋಷ |
ಗೊಳುತೆ ಸ್ನಾನಾದಿಕರ್ಮವ ಗೈವೆನೆಂದೀಕ್ಷಿಸಿದನಾ ತಟಾಕವನ್ನು || (55)

ಕಮಲಕುಮುದಗಳಿಂದ ಕಲ್ಯಾಣಮಯವಾಗಿ |
ವಿಮಲೋದಕಂ ತೋರಲಾ ದ್ವಿಜಂ ಸಂತಸದಿ |
ಶಮನಿವಾರಣೆಗೈದು ಸ್ನಾನಸಂಧ್ಯಾಜಪಸಮಾಧಿಯನ್ನೆಸಗಿ ಜವದಿ ||
ಅಮರಮತಿಯಾಗಲೋಗರವನುಂ ಮಾಡಿಟ್ಟು |
ಕಮಲಾಕ್ಷರಾಮನಂಕಿತದ ಸಾಲಗ್ರಾಮ |
ಸುಮನೋಹರಾಕೃತಿಯ ಪೂಜಿಸಿದ ಭಕ್ತಿಯಿಂ ಪಾಡಿ ಪೊಗಳುತ್ತಲೆರಗಿ || (56)

ಬೇಗಲೌಪಾಸನಂ [1](ವೈಶ್ವ)ದೇವಂಗಳಂ |
ರಾಗದಿಂ ರಚಿಸಿ ಬಲಿಯನ್ನಿಟ್ಟು ಶಿಷ್ಯಸಹ |
ಮಾಗಿ ಮತ್ತತಿಥಿಯೊಡಗೂಡಿ ಭೋಜನಗೈದು ಕರಪಾದಗಳನು ತೊಳೆದು ||
ಶ್ರೀಗುರುವ ನೆನೆದು ರಾಮಾಯಣವ ವಾಚಿಸುತ |
ಸಾಗರಾತ್ಮಜೆಯರಸ ಸತ್ಯ ಸರ್ವಜ್ಞ ಶ್ರೀ |
ಭೋಗಮೋಕ್ಷಪ್ರದನೆ ಸಲಹೆಂದು ನೆನೆವುತಂ ನಡೆದ ಪಥವಿಡಿದು ಮುದದಿ || (57)

ಅನಿತರೊಳು ಕಾಕನೊಂದೈತಂದು ಬಲಿಯನ್ನ |
ವನು ತುಂಡದಿಂ ಪಿಡಿಯೆ ಮತ್ತೊಂದು ವಾಯಸಂ |
ಕಿನಿಸಿನಿಂ ಪಕ್ಷಾಹತಂಗೈಯೆ ಬಿರ್ದುದಾತೀತಮಿರ್ದಾ ವಟದೊಳು ||
ಘನತರದ ಘಾತದಿಂ ಮೌಕುಲಂ ಮೂರ್ಛೆಯ- |
ನ್ನನುಕರಿಸಿ ಕೆಡೆದಿರಲ್ನಾಲ್ಕಾರು ಗಳಿಗೆಗುಂ |
ಜನಿಸಿದುದು ಪ್ರಾಣಮಾತುರಮಾಗಲಾಯುಷ್ಯಬಲದಿಂದಲೇವೇಳ್ವೆನು || (58)

ಹೊಡೆಮಗುಚುತೆಚ್ಚತ್ತು ಬೇಗ ನ್ಯಗ್ರೋಧಮ- |
ನ್ನಡರಿ ಕೊನೆಯೊಳ್ಕುಳಿತು ತನ್ನ ಪಕ್ಕಂಗಳಂ |
ಕೊಡಹಿ ಕೋಟೆಯೊಳಿಪ್ಪ ಕೂಳ ಚಪ್ಪರಿಪಲ್ಲಿ ಜಾರಿದಗುಳಾ ವೃಕ್ಷದ ||
ತಡಿಯೊಳೊರಗಿರ್ದ ಪಾತಕನ ಬಾಯೊಳ್ ಜಲದ |
ಪುಡಿಸಹಿತ ಕೆಡೆದುದರಮಂ ಪೊಕ್ಕಿತನ್ನೆಗಂ |
ಕೊಡಹಿ ತನುವಂ ಜೀವ ಪೊರಮಟ್ಟುದೇನೆಂಬೆನಾ ಸಮಯದೊಳಗಾದುದ ||

ರಾಮತೀರ್ಥಪ್ರಸಾದದ ಮಹಿಮೆಯಿಂ ದಿವ್ಯ |
ಧಾಮರಥವಿಷ್ಣುಚರರೈತಂದು ನುತಿಗೈದು |
ಪ್ರೇಮದಿಂ ಕರೆದೊಯ್ದು ವಿಷ್ಣುಮಂದಿರದಲ್ಲಿ ಸಕಲೋಪಚಾರಗೈದು ||
ಭ್ರಾಮಕವನಳಿಸಿದರ್ ಋಷಿಗಳಿರ ರಘುವರನ |
ನೇಮದಿಂದರ್ಚಿಸುವ ಭಕ್ತರ್ಗೆ ವೈಕುಂಠ |
ಧಾಮಮುಂಗಣಮೆನಿಪುದಿದಕೆ ಸಂಶಯಮಿಲ್ಲ ಬಲ್ಲರಿದನಧಿಕರೆಲ್ಲ || (60)

---

1 ವೈಶ್ಯದೇವಂಗಳಂ

ಪತಿತ ಪಾಪಾಚಾರ ಹತಕ ಶ್ರೀರಾಮನಪ |
ಚಿತಿಗೈದ ತೀರ್ಥಪ್ರಸಾದದುರುಮಹಿಮೆಯಿಂ |
ಯತಿಗಳೈದುವ ದಿವ್ಯಪಥವನಡರಿದ ಸತ್ಯಶೌಚಸದ್ಭಕ್ತನಂತೆ ||
ಸತತ ಪೂಜಿಪರಿಗಹ ಗತಿಯನಭಿವರ್ಣಿಪರೆ |
ಚತುರಾಸ್ಯಗಳವಹುದೆ ಬಾಹ್ಯಪೂಜಾಂತರ-|
ಸ್ಥಿತಿಯನತಿಶಯದಿಂದ ವರ್ಣಿಸಿದೆ ತಿಳಿದನಿತ ಶ್ರುತಿಮತವ ಮೌನಿಗಳಿರ || (61)

ಕಾಮಿತಾರ್ಥವನೀವ ರಾಮಚಂದ್ರನ ದಿವ್ಯ |
ನಾಮಸ್ಮರಣೆಪೂಜೆತೀರ್ಥಪ್ರಸಾದಗಳ |
ಸಾಮರ್ಥ್ಯಮನ್ನೊರೆದನಂದು ವಿಶ್ವಾಮಿತ್ರ ನಿಖಿಲಮುನಿನಿವಹಕೊಲಿದು ||
ಕಾಮಿನೀರನ್ನೆ ಲಾಲಿಸು **ರಾಮಪುರಿ**ಹರಿಯ |
ನೇಮದಿಂದಂತರಂಗದಲಿಟ್ಟು ನಿತ್ಯ ಸುಖ | [ಗಳಿರ || (62)
ಧಾಮಳಾಗಿಹುದೆಂದು ಸೋಮಶೇಖರ ಪೇಳ್ದ ಮುದದಿಂ ಮುಮುಕ್ಷು

ಸಂಧಿ 13ಕ್ಕಂ ಪದಂಗಳ್ 745

---

# ಹದಿನಾಲ್ಕನೆಯ ಸಂಧಿ

ಸೂಚನೆ || ತರುಣೇಂದುಶೇಖರನ ಶರಪೀಠದರ್ಶನಕೆ |
ಕರೆದೊಯ್ವ ಪಂಥಾನದಲಿ ಗಾಧಿನಂದನಂ |
ಸಿರಿಕರದ ಪಾವನಚರಿತ್ರೆಯಂ ವಿಸ್ತರಿಸಿ ಪೇಳಿದಂ ರಘುವೀರಗೆ ||

ತುಹಿನಾದ್ರಿ ಜಾತೆ ಕೇಳೀ ಪರಿಯ ಕೌಶಿಕಂ |
ಬಹುತರ ರಘೂತ್ತಮನ ಸಚ್ಚರಿತ್ರೆಯ ಯೋಗ |
ವಹರಿಗೊರೆವುತಲಿರ್ದನನಿತರೊಳಹಸ್ಕರಗೆ ವಾರುಣಿಯೊಳನುರಾಗವು ||
ವಿಹಿತವಾಗಲ್ಕಾಗ ಸನ್ಮಾರ್ಗ ಜಾರೆ ತ-|
ತ್ಸಹಜಾರೆಯೆನಿಸಿ ದೀಧಿತಿ ದಿಗಂಬರತೆಯಂ |
ವಹಿಸಲ್ಕೆ ಬಂಧುಜನರೀಕ್ಷಿಸಲ್ಪೋಗಿ ಚರಮಾಚಲವ ಸಾರ್ದ ಮುದದಿ || (1)

ಮರುಗಿತೆತ್ತೆತ್ತಲುಂ ಪ್ರಳಯಕಾಲದ ಮೇಘ |
ದುರಗಳೆನೆ ಕಳ್ತಲೆಯನಂತರದಿ ಪಶ್ಚಿಮದ |
ತರುಣಿ ಮುಡಿಯೊಳಗಿಟ್ಟ ಮಲ್ಲಿಕಾಸುಮ ಚೆದರಿ ಚೆಲ್ಲಿದಂದದಿ ತಾರೆಗಳ್ ||
ನೆರೆದಿರಲ್ತಾವರೆಯು ಚಕ್ರಂಗಳಾಕ್ಷಣದಿ |
ಕೊರಗುತಿರೆ ಕಂಡು ವಿಶ್ವಾಮಿತ್ರಮುನಿರಾಯ |
ವಿರಚಿಸಿಯೆ ಸಂಧ್ಯಾಸುಕೃತ್ಯಗಳನರ್ಭಕರೊಳೊಡಗೂಡಿ ಪವಡಿಸಿದನು || (2)

ನಿಶಿಯೆಂಬ ನಂಜು ಮುಂಬರಿದು ಲೋಕವನಂಟೆ |
ವಸುಮತೀಜಂತುಗಳಚೇತನಗಳಾಗಿರಲ್ |
ಕುಸುಮಾಸ್ತ್ರನಯನನಂ ಭಜಿಸಿ ಪಾಕಾಹಿತಂ ದಿವ್ಯರತ್ನವನು ಗಳಿಸಿ ||
ಸಸಿನೆ ಪೂರ್ವಾಚಲಾಗ್ರದೊಳಿಟ್ಟನೋಯೆನಲ್ |
ನಿಶಿಯ ನುಗ್ಗೊತ್ತಿ ದಿನಕರಬಿಂಬ ಕರಮೆಸೆಯ |
ಲಸುವಂತರಾದರಖಿಳರ್ ತಪೋಧನ ಬೇಗಲೆಚ್ಚರಂಗೊಂಡು ಮುದದಿ || (3)

ಅರವಿಂದಮಿತ್ರನುದ್ಭವಿಸೆ ವಿಶ್ವಾಮಿತ್ರ |
ಭರದಿಂದಲೆಚ್ಚತ್ತು ಸ್ನಾನಸಂಧ್ಯಾಕೃತ್ಯ |
ಸುರಪಿರಿಯತೋಷಣಂಗೈದು ಮುನಿಮಂಡಲದಿ ಮಂಡಿಸಿರೆ ರಘುವೀರನು ||
ಸುರುಚಿರದ ಪೂರ್ವಾಹ್ನಿಕಕ್ರಿಯೆಗಳಂ ಮಾಡಿ |
ತ್ವರಿತದಿಂದೈತಂದು ಸಕಲಋಷಿಮಧ್ಯದೊಳ |
ಗಿರುವ ವಿಶ್ವಾಮಿತ್ರನಡಿದಾವರೆಗೆ ನಮಿಸಿ ನಸುನಗುತಲಿಂತೆಂದನು || (4)

ಚರಣಸೇವಕರಾವು ಬಂದಿರ್ಪೆವೆಲೆ ದೇವ |
ಕರುಣದಿಂ ಮುಂದಪ್ಪ ಕಜ್ಜಮಂ ವಿಸ್ತರಿಸಿ |
ವಿರಚಿಸಿವುದೆನೆ ಕೇಳಿ ಸಕಲಭೂಸುರರೆಂದರಾ ನೃಪಕುಮಾರರಿಂಗೆ ||
ಪರಮಋಷಿಕಲ್ಪಂ ವಿದೇಹ ಭೂಭುಜಮೌಳಿ |
ಹರಶರಾಸನವ ಪೂಜಿಸಿ ತನ್ನ ನಂದನೆಯ |
ಪರಿಣಯಂಗೈಯಲಿಚ್ಛೈಸಿರ್ಪನಲ್ಲಿಗಾವ್ ನಿಮ್ಮಂ ಸಹಾಯವೆರಸಿ || (5)

ಪೋಗಿ ಸತ್ಯವ್ರತನೃಪೋತ್ತಮಂ ಮಾಡುತಿಹ |
ಯಾಗಮಂ ವೀಕ್ಷಿಸಿ ತನೂರತ್ನವಂ ಕಾಣ್ಬ |
ವೇಗದಿಂದಿಹೆವರಸ ಕೇಳಾ ಶರಾಸನಂ ಘೋರಮತಿಬಲ ಪೂರ್ವದಿ ||
ಯಾಗದೊಳ್ದಿವಿಜರಿಂ ದತ್ತ ಮತ್ತಲುಗಿಸುವ |
ಡಾಗದು ಸುರಾಸುರನರೋತ್ತಮರ ಭುಜಶೌರ್ಯ |
ಪೋಗುವುದು ನೋಟಮಾತ್ರದೊಳದ್ಭುತಂ ಜಗದೊಳಾರಿಗಳವಡದು ರಾಯ ||

ನಿಖಿಲಾವನೀಪಾಲರೆಲ್ಲರಾಚಾರಮಂ |
ಶಕುತಿಯಿಂದಾರೋಪಗೈದಡತಿಶಯದಿಂದೆ |
ಪ್ರಕಟನಂಗೈದರ್ಪರಾಕ್ರಮಂಗಳ ಚಾಪ ಮಿಸುಕದಿರಲಾಸ್ಯ ಕಂಡಿ ||
ಶಕುತಿಗುಂದಿದರಪ್ರಮೇಯಬಲಕೋದಂಡ |
ಚಕಚಕಿತಮಂ ನೋಡಿ ಬರ್ಪ ಕಾಂಕ್ಷೆಯೊಳಿರ್ಪ |
ಯುಕುತಿಯಿಂ ಕೌಶಿಕನೆನಲ್ಕೆ ಸಮ್ಮತಿಗೊಂಡರಾ ನೃಪತನೂಜನ್ಮರು || (7)

ಆಗ ವಿಶ್ವಾಮಿತ್ರ ವನದ ದೇವತೆಗಳಂ |
ಬೇಗ ಕರೆದಿಂತೆಂದ ನಿಮಗೆ ಕಲ್ಯಾಣಕರ |
ಮಾಗಲಾವ್ ಪೋದಪೆವೆನುತ್ತ ಸಿದ್ಧಾಶ್ರಮವ ಬಲವಂದು ನಮಿಸಿ ಬಳಿಕ ||
ಆ ಗರುವ ಮುನಿಮುಖ್ಯರೊಡಗೊಂಡು ಪೊರಮಟ್ಟು |
ಬೇಗದಿಂ ತುಹಿನಾದ್ರಿಯಿಪ್ಪೆಡೆಗೆ ಬಡಗ ಮುಖ |
ಮಾಗಿ ದಶರಥತನಯರಿಂದ ಪಂಥಾನಮಂ ಅನುಸರಿಸಿ ನಡೆಗೊಂಡನು || (8)

ಬಂದುದಲ್ಲಿರ್ದಖಿಳಮೃಗಗಣಂ ಕೌಶಿಕನ |
ಹೊಂದಿ ಬರೆ ಕ್ರೋಶಾರ್ಧಪರ್ಯಂತ ಬಿಡದೆಯುತಿ |
ಬಂಧುರಸ್ನೇಹದಿಂ ದಿಟ್ಟಿಸಿ ಮುನೀಶ್ವರಂ ಕಳುಪಿದಂ ಸಂತವಿಸುತ ||
ಪಿಂದೆ ಶಕಟೀಶತದಿ ಬಹ್ಮವಾದಿಗಳೈದಿ |
ಮುಂದುವರಿದೈದಲಾ ಮುನಿನಿವಹ ಬೇಗ ರಘು |
ನಂದನರ್ಬೆರೆದು ([1]ಶೋ)ಣಾಕೂಲಮಂ ಸಾರ್ದರಸ್ತಮಿಸುತಿರೆ ಭಾಸ್ಕರಂ ||

ದಿನನಾಥನಸ್ತಮಿಸೆ ಮುನಿನಿಕರಮೆಲ್ಲ ಸ - |
ದ್ವಿನಯದಿಂ ಸ್ನಾನಸಂಧ್ಯಾದಿಗಳ ಮಾಡಿ ಮ - |
ತ್ತನುನಯದೊಳಗ್ನಿ ಹೋತ್ರಂಗಳಂ ರಚಿಸುತ್ತ ವೈದಿಕವಿಧಾನದಿಂದೆ ||
ಮುನಿಗಾಧಿಸುತಸಹಿತ ಕುಳ್ಳಿರ್ದರಾ ತಟದಿ |
ಜನನಾಥಸುತರಾ ದ್ವಿಜರ್ಗೆ ವಂದಿಸಿ ನುತಿಸಿ |
ವಿನಯದಿಂ ಬೆಸಗೊಂಡರೀ ದೇಶವಾರದತಿಕೌತುಕದಿ ರಾಜಿಸುತಿದೆ || (10)

ಎಂದಡಾ ಗಾಧಿಸುತನಿಂತೆಂದ ಕೇಳು ರಘು |
ನಂದನನೆ ಪೂರ್ವದಲಿ ಕುಶನಾಮಬ್ರಹ್ಮಸುತ |
[2]ಕುಂದಿಲ್ಲದತಿತಪೋನಿಷ್ಠೆ ವೈದರ್ಭಿಯಂ ಪರಿಣಯಂ ಗೈದು ಬಳಿಕ ||
ಛಂದದಿಂದಂ ಪಡೆದ ನಾಲ್ವರ್ಕುಮಾರಕರ |
ನಂದದಿ ಕುಶಾಂಬ ಕುಶನಾಭಕನ ಧೂರ್ತರಜ |
ಸೆಂದು ವಸು[3](ವೆಂದಾ) ಸುನಾಮಕರ ರಾಜನ್ಯಧರ್ಮಸಮ್ಮೋದಕರರ || (11)

---

1 ಶ್ರೋಣಾಕೂಲಮಂ

2 ಸಮಹಾತ್ಮಾ ಕುಲೀನಾಯಾಂ ಯುಕ್ತಾಯಾಂ ಸುಗುಣೋಲ್ಬಣಾನ್ ||
ವೈದರ್ಭ್ಯಾಂ ಜನಯಾಮಾಸ ಚತುರಸ್ಸದೃಶಾನ್ ಸುತಾನ್ || ೨ ||
ಕುಶಾಂಬಂ ಕುಶನಾಭಂಚ ಆಧೂರ್ತರಜಸಂ ವಸುಂ ||
ದೀಪ್ತಿಯುಕ್ತಾನ್ ಮಹೋತ್ಸಾಹಾನ್ ಕ್ಷತ್ರಧರ್ಮಚಿಕೀರ್ಷಯಾ || ೩ ||
(ವಾ. ರಾ.—೩೨ ನೆಯ ಸರ್ಗ)

3 ಪೆಸರದ.

ಚತುರಚತುರಾಸ್ಯಸುತ ನೋಡಿಯಾ ಸುತರಿಗಂ |
ದತಿಶಯದಿ ಲೋಕರಕ್ಷಕರಾಗಿ ಧರ್ಮಸಂ |
ತತಿಯ ಪೆರ್ಚುಗೆಗೈವುದೆನೆ ತನಯರಾ ನುಡಿಯ ಕೇಳಿ ಸಂತೋಷದಿಂದ ||
[1]ವಿತತ ಕೌಶಾಂಬಿಯ ಮಹೋದಯಾಭಿಧಕಾಂತಿ |
ಯುತದ ಧರ್ಮಾರಣ್ಯಮಾ ಗಿರಿವ್ರಜನಾಮ |
ದತಿಶಯದ ನಗರಗಳ ನಿರ್ಮಿಸಿದರ್ರೈ ಕ್ರಮದೊಳಮಿತಪ್ರಭಾವದಿಂದೆ || (12)

ಗಿರಿಗಳೈದಿದಿರಿನಲಿ ತೋರುತಿವೆ ತನ್ಮಧ್ಯ |
ಶಿರಿಕರದ ಮಾಲಿಕಾಕಾರದಿ ವಿರಾಜಿಸುವ |
ಪರಮಪಾವನೆ ಸುಮಾಗಧಿಯೆಂಬ ಪೆಸ(ರಿನಾ) ನದಿ ಬೆಳಗಿ ತದ್ರಾಷ್ಟ್ರಮಂ ||
ಪೊರೆವುದೀ ಧರೆಯು ವಸುರಾಯನಾಧೀನಮೆಂ |
ದೊರೆದಪರು ರಘುವೀರ ಕುಶನಾಭರಾಜರ್ಷಿ |
ವರ ಘೃತಾಚಿಯೊಳು ಪಡೆದಂ ಕನ್ಯಕಾಶತವನಂಚೆದೇರನ ಕೃಪೆಯೊಳು || (13)

[2]ಕುವರಿಯರು ಯೌವನಂಮುಂಟಿ ಸದ್ರೂಪು ಸಂ |
ಭವಮಾಗಲಾರಾಮಕೇಳಿಗೈತರೆ ಕಂಡ |
ನವರ ಚಾತುರ್ಯ ಸ್ವರೂಪಮಂ ಸರ್ವಾತ್ಮಸತತಗತಿ ಪ್ರೇಮದಿಂದೆ ||
ನವವಿಲಾಸಕೆ ಮೆಚ್ಚಿ ಮರುಳಾಗಿ ಕಾಮಶರ |
ತವಕದಿಂ ವೇಧಿಸಲ್ಕಿಂತೆಂದನವರೊಡನೆ |
ಕುವಲಯಾಂಬಕಿಯರಿರ ಕೂರ್ಮೆ ನಿಮ್ಮೊಳು ಪುಟ್ಟಿತೆನಗೆ ಕ್ರೀಡಿಸುವೆನೆಂಬ ||

ಅದರಿಂದಲೆನಗೆ ಭಾರ್ಯಾಪ್ರಾಯರೆಂದೆನಿಸ |
ಲುದಯಿಪುದು ದೀರ್ಘಾಯು ದಿವ್ಯಯೌವನರೂಪು |
ಚದುರಿನಿಂ ದೇವತೆಯರಪ್ಪಿರೀ ಮಾನುಷಕ್ಲೇಶಚಯರಹಿತರೆನಿಸಿ ||
ಇದು ನನ್ನಿಯೆನೆ ಹಸನ್ಮುಖರಾಗಿ ಸರ್ವಾತ್ಮ |
ಸದಯ ನೀನರಿಯದುದೆ ಪಿತನಾಜ್ಞೆಯಿಂದಿರ್ಪೆ |
ವುದಯಿಸದು ಸ್ವಾತಂತ್ರ್ಯ ಬೊಪ್ಪನಪ್ಪಣೆಯಿಲ್ಲವಾತನಂ ಯಾಚಿಸುವುದು || (15)

---

1 ಕುಶಾಂಬಸ್ತು ಮಹಾತೇಜಾಃ **ಕೌಶಾಂಬೀ**ಮಕರೋತ್ಪುರೀಂ ||
ಕುಶನಾಭಸ್ತು ಧರ್ಮಾತ್ಮಾ ಪುರಂ ಚಕ್ರೇ **ಮಹೋದಯಂ** || ೬ ||
ಅಧೂರ್ತರಜಸೋ ರಾಮ **ಧರ್ಮಾರಣ್ಯಂ** ಮಹೀಪತಿಃ ||
ಚಕ್ರೇ ಪುರವರಂ ರಾಜಾ ವಸುಶ್ಚಕ್ರೇ **ಗಿರಿವ್ರಜಂ** || ೭ ||

2 ತಾಸ್ಸರ್ವಾ ಗುಣಸಂಪನ್ನಾ ರೂಪಯೌವನಸಂಯುತಾಃ ||
ದೃಷ್ಟ್ವಾ ಸರ್ವಾತ್ಮಕೋ ವಾಯುರಿದಂ ವಚನಮಬ್ರವೀತ್ || ೧೫ ||
(ವಾ. ರಾ.—೩೨ ನೆಯ ಸರ್ಗ)

ಪಿತನಾರಿಗಿತ್ತೊಂಡಂ ಪತಿಯೆಂದು ಭಾವಿಸುವೆ |
ವತಿಶಯದೊಳೆನೆ ಕೇಳಿದಾಕ್ಷಣಂ ಕೋಪಸಂ |
ಯುತನಾಗಿ ತನ್ನಿಯರ ಸರ್ವಾಂಗಭಂಗಮನ್ನೆಸಗಿದಂ ನಿಮಿಷಾರ್ಧದಿ ||
ರತಿಯ ಪೋಲ್ವಾಕಾರಮುಂ ಪೋಗೆ ಬೇಗ ಸಂ |
ಗತಿಯನುಳಿದತಿಲಜ್ಜೆಯಿಂದ ರೋದಿಸುತೈದೆ |
ಕ್ಷಿತಿಯರಸನರಮನೆಯ ಸಾರಿದರದೇನೆಂಬೆ ಕೌತುಕದ ಪರಿಕರವನು || (16)

ವಸುಮತೀಶ್ವರ ನೋಡಿ ಸತೆಯರಾಕಾರಮಂ |
ಬೆಸಗೊಂಡನೇನು ಕಾರಣದಿ ಕುಬ್ಜಾಂಧತ್ವ |
ಮುಸಗಿದುದು ನಿಮಗುಸುರವೇಳ್ಕೆನಲ್ ಭಯದಿಂದ ವಂದಿಸುತಲಿಂತೆಂದರು ||
ವೆಸನದಿಂ ಮಾರುತಂ ಯಾಚಿಸಿದರೊಲ್ಲದಿರೆ |
ಬಸುರೊಳ್ಪ್ರವೇಶಿಸೀ ಪರಿಗೈದನೇವೇಳ್ವೆ |
ವಸುಕರಂ ಸಂಘಟಿತರಸ ಲಾಲಿಪುದೆನಲ್ಕಿಂತೆಂದ ಸಂಭ್ರಮದೊಳು || (17)

ಕುಲವ ಸಂರಕ್ಷಿಸಿದಿರವ್ವ ಕ್ಷಮೆಯಂ ತಾಳ್ದು |
ಜಲಜಾಕ್ಷಿಯರಿಗಲಂಕಾರಮುಪಶಾಂತಿಯುಂ |
ಬಲಮುಳ್ಳ ಪುರಷನಿಗೆ ಸತ್ಕೀರ್ತಿದಾಯಕಂ ಕ್ಷಮೆಯುದಿಪುದರಿದು ಜಗದಿ ||
ಸುಲಭಮಲ್ಲವು ಕ್ಷಮೆಯು ದಾನಯಜ್ಞವ್ರತಂ |
ಲಲಿತಸತ್ಯಂ ಕೀರ್ತಿ ಧರ್ಮ ಕ್ಷಮೆಗಿಂತಧಿಕ |
ನೆಲದೊಳಿನ್ನಾವುದೆಂದೊರೆದು ಕರಣಿಕಮಂತ್ರಿಗಣದೊಳಾಲೋಚಿಸುವಡೆ || (18)

ಪರಬ್ರಹ್ಮವಿದ್ಯಸಂಭರಿತ ಚೂಳೀನಾಮ |
ಧರಮೌನಿ ತಪದಿಂದಲಿರಲೂರ್ಮಿಳಾತನಯ |
ಳುರುತರಗುಣಾಢ್ಯಗಾಂಧರ್ವಿ ಸೋಮದೆಯೆಂಬ ಪೆಸರಾಂತ ಸುದತಿ ಬಂದು ||
ವರತಪೋಧನನನಾಶ್ರಯಿಸಿ ನಾನಾಪರಿಯ |
ಕರುಣಸಂಪಾದನಂಗೈಯಲಾ ವಿಪ್ರ ಮು-|
ತ್ತೊರೆದನೇಂ ಕಾರಣದೊಳೆನ್ನನಾಶ್ರಯಿಸಿರ್ಪ ಪೇಳ್ವುದೆನಲಿಂತೆಂದಳು || (19)

ಪತಿಯಿಲ್ಲ ಪುರುಷಸಂಗತಿಯನೊಲ್ಲೆನು ಮುಂದೆ |
ಯತಿವರ್ಯನೆನಗೆ ಸತ್ಸುತನ ದಯೆಗೈವೇಳ್ಕು |
[1]ಮ(ಥಿ)ತಾರ್ಥಕನ ಬ್ರಹ್ಮವರ್ಣಪೂತಾಂಗನನ್ನೆನೆ ಮೌನಿ ಪ್ರೀತಿಯಿಂದ ||
ಯತಿಯ ನಿಜಮಾನಸೋದ್ಭೂತಸುತನನ್ನಿತ್ತ |
ರತಿಶಯದಿ ಗಾಂಧರ್ವಿ ತರಳನಂ ಕೈಪಿಡಿದು |
ಕ್ಷಿತಿಯೊಳುತ್ತಮಮೆನಿಪ ಕಾಂಪಿಲ್ಯಪಟ್ಟಣದೊಳೆಸೆವ[2](ಳಾದಳ್ನಿ)ಮಿಷದಿ || (20)

---

1 ಮತಿತಾರ್ಥಕನ

2 ಪಟ್ಟಣದೊಳೆಸೆವಳವಗಾಗಿ ಮಿಶದಿ

ಕುಶನಾಭನೊಡನೆ ಮಂತ್ರಿಗಳುಸುರಲೀ ಪರಿಯ |
ಕುಶಲದಿಂದಾ ಬ್ರಹ್ಮದತ್ತನಂ ಕರೆತಂದು |
ಶಶಿಮುಖಿಯರಂ ಕ್ರಮದೊಳುದ್ವಾಹಗೈದಿತ್ತ ಸಾಮಧೇಯಗೆ ವಿನಯದಿ ||
ಪಶುಪತಿಯ ನಿಭಮೌನಿ ಕನ್ಯಾಶತವ ತನ್ನ |
ವಶಮೆನಿಸಿ ಪಾಣಿಯಂ ಕೈಪಿಡಿದ ಮಾತ್ರದೊಳ್ |
ಶಶಲಾಂಛನೋಪಮಿತವಾದುದಾನನ ಪೋದುದೈ[1](ಸೆ) ರುಜೆ ವಾಯುಕೃತದ ||

ನಿರುಜೆಯರ ಸೌಂದರ್ಯ ದಿವ್ಯದೇಹಾನ್ವಿತದ |
ತರಳೆಯರನೀಕ್ಷಿಸುತ ಕುಶನಾಭ ಹರ್ಷದಿಂ |
ಪರಿಪರಿಯ ಭೂಷಣಾಂಬರಗಳನ್ನೊಲಿದಿತ್ತು ಕಳುಪಿದಂ ಮೌನಿಯೊಡನೆ ||
ಕರೆತಂದು ಸತಿಯರಂ ಬ್ರಹ್ಮದತ್ತಂ ಪುರಿಗೆ |
ಸಿರಿಕರದ ಮಾತೆಗೊಪ್ಪಿಸೆ ಸೊಸೆಯರಂ ನೋಡಿ |
ಪರಮಸಂತಸದಿಂದ ಹಿಗ್ಗಿ ಧರಣೀಶನಂ ನುತಿಸಿದಳ್ಗಾಂಧರ್ವಿಯು || (22)

ಹೆಂಗಳ್ಗೆ ಮದುವೆಯಂ ಮಾಡಿ ಮುದದಿಂದ ನರ |
ಪುಂಗವಂ ಪುತ್ರಲಾಭಾರ್ಥಕೋಸುಗ ಬೇಗ |
ಸಂಗತದ ಪೌತ್ರೀಯಮಿಷ್ಟಿಯಂ ವಿರಚಿಸಿದ ನಿಖಿಲಭೂಸುರರ ಬೆರೆದು ||
ರಂಗಿನಿಂದಾ ಯಾಗಸಮಯದೊಳ್ಕುಶದೇವ |
ಪುಂಗವಾತ್ಮಜ ಬಂದು ಮಮತೆಯಿಂದುಸುರಿದ ಬೆ |
ಡಂಗಿನಿಂ ಸುತನಪ್ಪನೆಲೆ ಪುತ್ರಫಲಿತ ನಿನ್ನಾಕಾಂಕ್ಷೆ ಕೈಸಾರ್ದುದು || (23)

ಗಾಧಿನಾಮಕತನಯನಂ ಪಡೆವೆ ಲೋಕದೊಳ |
ಗಾಧಕೀರ್ತಿಯನಾಳ್ವೆಯೆನುತೊರೆದು ಗಮಿಸಲಾ |
ಮೇದಿನೀಧವಗೆ ಕೆಲಕಾಲ[2](ಕು)ದಿಸಿದಮತ್ತ ಧರ್ಮಿಷ್ಠಗಾಧಿಯೆಂಬ ||
ಮೇದುರದ ಸದ್ಯಶೋವಂತ ಮತ್ಪಿತ ರಘುಜ |
ಸಾದರದಿ ಕುಶವಂಶಜನ್ಮನಾದುದರಿಂದ |
ಲಾದುದೀ ನಾಮ ಕೌಶಿಕನೆಂದು ಮತ್ತೊರೆವೆನಾ ಪುಣ್ಯಚಾರಿತ್ರೆಯ || (24)

ಸುಗುಣೆ ಸುವ್ರತೆ ಪತಿವ್ರತೆ ಸತ್ಯವತಿಯೆಂದು |
ಭಗಿನಿ ತನಗಿಂ ಪೂರ್ವಜಾತೆಯಿರ್ದಳು ರಾಮ |
ಜಗತಿಯೊಳು ತಾಪಸೋತ್ತಮ ರುಚಿಕನೆಂಬಾತನರ್ಧಾಂಗಿಯೆನಿಸಿ ತರಳೆ ||
ಭಗವಂತರುಚಿಕ ಸಗ್ಗವನ್ನೈದಲಾ ಸುದತಿ |
ಮಿಗೆ ಪತಿವ್ರತೆಯಾದ ಕತದಿಂದಲಗ್ನಿಯಂ |
ಪೊಗಲಾತನೊಡವೆರೆದು ಲೇಖಾಸಮೂಹಮಂ ಸಂತೋಷಗೊಳಿಸಿ ಮುದದಿ ||

---

1 ಪೋದುದೈದೆ

2 ಕೆಲಕಾಲಮುದಿಸಿದಮತ್ತ

ಆ ಮಹಾಪುಣ್ಯಚಾರಿತ್ರೆ ಲೋಕವ ಪೊರೆಯೆ |
ಹೈಮಂತಶೈಲತಟದೊಳಗೆ ಕೌಶಿಕಿಯೆಂಬ |
ನಾಮದಿಂ ಪುಣ್ಯನದಿಯೆನಿಸಿ ರಾರಾಜಿಸಿದಳರಸ ಮದ್ಭಗಿನಿ ಮುದದಿ ||
ಆ ಮಹಿಮಳಿಂದೆನಗೆ ಪ್ರೇಮವೆಗ್ಗಳದಿಂದ |
ಹೈಮಗಿರಿಯೊತ್ತಿನೊಳಗೀ ನದೀ ತೀರದಲಿ |
ಭ್ರಾಮಕವನುಳಿದು ಸುಖದಿಂದಿರ್ಪೆನೆಡೆವಿಡದೆ ಸರ್ವರ್ಷಿಸಮುದಯದೊಳು ||

ಸಿದ್ಧಾಶ್ರಮವ ಸಾರಿ ಭವದೀಯ ತೇಜದಿಂ |
ಸಿದ್ಧನಾದೆನು ರಾಮ ಪರಮಮಂಗಳನಾಮ |
ಪೊದ್ದಿತು ನಿಶೀಥ ತರುಜಾಲ ನಿಷ್ಪಂದತೆಯನಾಂತವು ಶಕುಂತನಿಚಯ ||
ಸದ್ದಿಲ್ಲದಂತೆ ತರುಕೋಟರ ಕುಲಾಯಗಳ |
ಹೊದ್ದಿದವು ರಘುವೀರ ತಾರಕಾನಿಚಯಗಳು |
ಮುದ್ದಾಗಿ ತೋರುತಿವೆ ವಿಧುಬಿಂಬಮೈಂದ್ರಿಯಂ ಚುಂಬಿಸಿತ್ತನುರಾಗದಿ || (27)

ರಕ್ಕಸರು ಯಕ್ಷದಾನವಪಿಶಾಚಾದಿ ಮೃಗ |
ಪಕ್ಕಿಗಳು ಕಗ್ಗತ್ತಲೆಯೊಳು ಚರಿಸುತಲಿವೆಕೊ |
ಸಕ್ಕದಾಭಾಸಭಾಷಣೆಗಳಿಂ ಕ್ರೀಡಿಸುವರೆಳಸಿ ಫಲಭೋಕ್ತೃಜನರು ||
ಸೊಕ್ಕು ನಿದ್ರಾಸಮಯವತಿಗಳೆಯದೆಲೆ ರಾಮ |
ಪೊಕ್ಕು ಕೆಂದಳಿರ ಪಾಸಿಕೆಯಲ್ಲಿ ಪವಡಿಸ-|
ಲ್ಕಕ್ಕುದೆಂದುಸುರಲ್ಕೆ ಸಕಲಮುನಿಜನ ನಲಿದುದತಿಮಧುರವಾಣಿಯಿಂದೆ || (28)

ಕೌಶಿಕಸುಗೋತ್ರಮತಿಧರ್ಮವಿಗ್ರಹಿ ಕೇಳ್ಮ |
ನೀಶನಿಭರೆಲ್ಲರುಂ ದಿವ್ಯತೇಜೋಬಲರು |
ಮೇಶನಂತವತರಿಸಿ ನೀಂ ಸಕಲಲೋಕಮಂ ಪೊರೆಯಲಾಯತ್ತನಾಗಿ ||
ಶ್ರೀಶವಿಕ್ರಮರಾಮನೊಡಗೊಂಡು ಬಂದು ಶುಭ |
ಕೋಶ ಕೌಶಿಕಿಯತುಲ ಚಾರಿತ್ರೆಯಿಂದ ಭವ |
ಪಾಶಹರಮೆನಿಸಿದೆ ಮಹಾತ್ಮನೆಂದಾತನಂ ಪೊಗಳಿದರು ಮೌನಿಜನರು || (29)

ರಾಮಸೌಮಿತ್ರಿಯೊಡಗೂಡಿ ಸಂತಸಗೊಂಡು |
ಪ್ರೇಮದಿಂ ಸುಖನಿದ್ರೆಯಾಂತು ಮತ್ತಾಲಿಸಿ ವಿ |
ರಾಮಮಾಗಲ್ ಕುಶಿಕನಂದನಂ ರಘುವೀರಗಿಂತೆದ ವಿನಯದಿಂದೆ ||
ಸೋಮನಸ್ತಮಿಸಿದಂ ಪೂರ್ವಶೈಲಾಗ್ರಮಂ |
ನೇಮದಿಂದೇರ್ದ ಭಾಸ್ಕರ ಪೂರ್ವಸಂಧ್ಯಾಭಿ |
ರಾಮಮಾಗಿದೆ ಬೇಗಲೆಚ್ಚತ್ತು ಗಮಿಸವೇಳ್ಕೆನಲು ನುಡಿಗೇಳಿ ಜವದಿ || (30)

ರಚಿಸಿ ಪೂರ್ವಾಹ್ನಿಕಕ್ರಿಯೆಯ ಮುನಿರಾಯನೊಳ್ |
ವಚಿಸಿದಂ ಶೈವಲಿನಿಯಂ ದಾಂಟಿ ಪಂಥಾನ |
ರಚನೆಗೈದಪುದೆನಲು ಪೇಳಿದಂ ಕೌಶಿಕತಪೋಧನಂ ರಾಮನೊಡನೆ ||
ಶುಚಿರೂಪಮೌನಿಗಳು ನಡೆವ ಮಾರ್ಗವ ನೋಡು |
ಪ್ರಚುರವಾಗಿದೆಯೆನಲ್ಕುತ್ತರಿಸುತಾ ನದಿಯ |
ನಚಲೇಂದ್ರನಂದನೆಯ ತೀರಮಂ ಸಾರಿದರ್ ಮಧ್ಯಾಹ್ನಸಮಯದಲ್ಲಿ || (31)

ಘುಳುಘುಳಿಸಿ ಬರ್ಪ ಪೆರ್ದೆರೆಗಳಿಂ ನೊರೆಗಳಿಂ |
ತಳತಳನೆ ಪೊಳೆವ ಕೆವ್ಮೀನ್ಗಳಿಂ ಸಾಲ್ಗಳಿಂ-|
ಸುಳಿಸುಳಿದು ನಟಿಸುತಿರುವಂಚೆಯಿಂ ಕೊಂಚೆಯಿಂ ಶಾಡ್ವಲಿತವಾಗಿ ತೋರ್ಪ ||
ಪೊಳೆಪೊಳೆವ ಶೈವಾಲ ಚಕ್ರದಿಂ ನಕ್ರದಿಂ |
ನಳನಳಿಪ ಸಾರಸಸುಸಾರದಿಂ ತೋರದಿಂ |
ಘಳಘಳನೆ ಜಗಿವ ಶೀಕರಗಳಿಂ ಶರಗಳಿಂ ಸುರನದಿಯು ಕಂಗೆಸೆದುದು || (32)

ಕಂಡು ರುಷಿಗಳ್ ಹರ್ಷಗೊಂಡು ಸ್ನಾನವನೆಸಗಿ |
ತಂಡತಂಡದಿ ಪಿತೃಗಳಂ ತುಷ್ಟಿಗೊಳಿಸುತು - |
ದ್ದಂಡಪಾವಕನರ್ಚನೆಯ ಮಾಡಿ ರೂಢಿಯಿಂ ದಿವ್ಯಹ[1](ವಿಯುಂಡು) ಮುದದಿ ||
ಕುಂಡಲಾಕಾರದಿಂ ಕುಳ್ಳಿರ್ದರಾಗ ಮುನಿ |
ಶೌಂಡನಂ ಬಳಸಿ ಮುನಿಪತಿಯವರ ನಡುವೆ ಕೋ |
ದಂಡಧರನಾಗ ಸಂತಸದಿಂದ ಕುಳಿರ್ದು ಬೆಸಗೊಂಡ ಗಾಧಿಸುತನ || (33)

ಈ ಮಹಾನದಿಯು ತ್ರಿಪಥಗೆಯೆನಿಸಿತಾರಿಂದೆ |
ಭೂಮಿಗೈತಂದು ಜನರಘಪಾಪಮಂ ನೀಗಿ |
ಪ್ರೇಮದಿಂದುದಧಿಯಂ ಪೊಕ್ಕ ಕಜ್ಜಮದೇನು ವಿಸ್ತರಿಸವೇಳ್ಕುಮೆನಲು ||
ಆ ಮೌನಿಯುಸುರಿದಂ ಹಿಮನಗೇಂದ್ರನ ಧರ್ಮ |
ಭಾಮಿನಿಯ ಮೇನೆಯುದರಾಬ್ಧಿಯಿಂ ಜನಿಸಿದರು |
ಸೀಮಂತಿನೀಮಣಿಗಳಿರ್ವರದರೊಳು ಪಿರಿಯಳೀ ಗಂಗೆಯುಮೆ ಕಿರಿಯಳು|| (34)

ಸರಸಿಜಭವೇಂದ್ರಾದಿ ಸುರಮುನಿಗಳೈತಂದು |
ಗಿರಿರಾಜನಂ ಭಜಿಸಿ ನಾನಾಪ್ರಕಾರದಿಂ |
ಕರೆದೊಯ್ದರಾ ದಿವಿಗೆ ಪಾಪಸಂಹಾರಿಯಂ ಗಂಗಾಭಿಧಾನಸುತೆಯಂ ||
ಹರನ ಪ್ರಾರ್ಥಿಸಿ ತಪವನಾಚರಿಸಲುಮೆ ಮೇನೆ |
ಯರಸ ಫಾಲೇಕ್ಷಣಂಗಿತ್ತನಾ ಕುವರಿಯಂ |
ವರಚತುರ್ದಶಲೋಕವಂದಿತೆಯ ಕಾಮಹರಚಿತ್ತಾನುರಂಜಿತೆಯೆನು || (35)

---

1 ಹಯುಧಯೂಡಿ— ತತಸ್ನಾತ್ವಾ ಯಥಾ ನ್ಯಾಯಂ ಸಂತರ್ಪ್ಯ ಪಿತೃದೇವತಾಃ ||೯||
ಹುತ್ವಾಚೈವಾಗ್ನಿಹೋತ್ರಾಣಿ **ಪ್ರಾಶ್ಯಚಾಮೃತವದ್ಧವಿಃ**||
(ವಾ. ರಾ.—೩೫ ನೆಯ ಸರ್ಗ)

ಕಾಣುತ ಭವಾನಿಯುಂ ಕಾಮುನುರುಕೇಳಿಯಿಂ |
ಸ್ಥಾಣು ಬೆರೆಯಲ್ದಿವ್ಯಶತವರ್ಷ ಸುರರದಂ |
ಕಾಣುತ್ತ ಭಯಗೊಂಡು ಕಮಲಜಾಮರರಾಜಮುಖ್ಯರೈತಂದು ನಮಿಸಿ ||
ಜಾಣತನದಿಂ ದೀನವಾಚಿಕದೊಳರುಪಿದರ್ |
ಕೇಣಮಿಲ್ಲದೆ ಭವತ್ತೇಜಮುಂ ಧರಿಸುವಡೆ |
ಕ್ಷೋಣಿಯೊಳಗಾರಿಗಳವಹುದಕಟಮಿದನುಳಿದು ಚರಿಸು ನೀಂ ಬ್ರಹ್ಮತಪದಿ ||

ಶರಣಾಗತತ್ರಾಣ ಕರುಣಾಕರ ಮಹೇಶ |
ಧರೆಯಪಾಲಿಸಲು ನಿಜತೇಜಮಂ ತೇಜದೊಳ್ |
ಧರಿಯಿಸುವುದೆನೆ ಸುರರ ವಾಣಿಯುಂ ಲಾಲಿಸುತ ದಯದಿಂದ ನಿಟಲಾಕ್ಷನು ||
ಭರದಿಂದ ಪೇಳ್ದ ತೇಜವ ತೇಜದೊಳ್ಧರಿಪೆ |
ಸುರರು ಭೂತಳಮೆಲ್ಲ ಸುಖದಿಂದಲಿರ್ಪುದೆಂ |
ದೊರೆದು ಮತ್ತೇಜದಿಂದಲಿ ಕ್ಷುಭಿತಮಾದವನನಾರ್ಧರಿಪುದುಸುರ್ವುದೆನಲು ||

ಶಿವಮಹಾದೇವ ಶಂಕರ ದಿವ್ಯತೇಜಮು - |
ನ್ನವನಿ ಧರಿಸುವಳೆನ್ನುತಖಿಲರುಂ ಬಿನ್ನೈಸೆ |
ಕುವಲಯಾಪ್ತೋತ್ತಂಸ ಸುರರ ನುಡಿಯಿಂ ಬಿಟ್ಟಡದು ವ್ಯಾಪಸಲ್ಧರೆಯನು ||
ಕವಿದು ನುಂಗುತ ಬರಲು ಕಂಡು ಸುರರೆಲ್ಲರುಂ |
ತವಕದಿಂದಗ್ನಿಯೊಡನಿಂತೆಂದರೆಲೆ ದೇವ |
ಭವವೀರ್ಯಮುಂ ವಾಯುಸಹಮಾಗಿ ಪೊಕ್ಕಿದಂ ಶಾಂತಿಗೊಳಿಸುವುದೆನಲ್ಕೆ|| (38)

ಬಂದಗ್ನಿ ವ್ಯಾಪಿಸಲ್ಸಂಜಾತದಾ ಶ್ವೇತ |
ಕುಂದರೋಪಮ ಶೈಲಮಾಗಲಾದಿತ್ಯನಿಭ |
ಮೆಂದೆನಿಪ ಪಾವಕೋಪಮ ಶರಾವದೊಳಿಟ್ಟು ಶಾಂತವೆಂದೆನಿಸಿ ಮುದದಿ ||
ಇಂದುಶೇಖರನನುಮೆಯುಂ ಪೂಜೆಗೈದು ನಲ |
ವಿಂದ ನುತಿಗೈದ ದೇವರ್ಕಳಂ ವೀಕ್ಷಿಸುತ |
ಲಂದು ಕಡುಗೋಪದಿಂ ತುಹಿನಾದ್ರಿಸಂಭೂತೆಯೆಂದಳತಿಕ್ರೂರದಿಂದೆ || (39)

ಸುತಲಾಭಕೆಂದಾನು ಪತಿಯೊಡನೆ ರಮಿಸುತಿರೆ |
ಮತಿವಿಕಲದಿಂ ಬಂದು ಮುದಭೀಷ್ಟಮುಂ ಕೆಡಿಸಿ |
ದತಿಕ್ರೂರಕರ್ಮಿಗಳ್ ನೀವೆಲ್ಲ ನಿಜಪತ್ನಿಯರಲಿ ಸುತರಂ ಪಡೆಯದೆ ||
ಹತಮನೋರಥನೆನಿಪುದಿಂದಿನಾರಭ್ಯದಿಂ |
ಸತಿಯರುಗಳತಿಬಂಜೆತನದಿಂದಲೊಪ್ಪಿರಲಿ |
ಕ್ಷಿತಿಗೆ ಬಹುಪತಿಗಳಾಗಿರಲೆಂದು ಶಪಿಸಿದಳ್ ಕ್ರೋಧತಾಮ್ರಾಕ್ಷಿಯಾಗಿ || (40)

ಸುರರೆಲ್ಲ ನಾಣ್ಚಿ ತಲೆಗುತ್ತಿರಲ್ ಕಂಡಾಗ |
ಗಿರಿರಾಜಸುತೆಗೂಡಿ ವರುಣಪಾಲಿತೆದಿಶಾ |
ಗಿರಿಯೆಡೆಗೆ ನಡೆತಂದು ಪರಮತಪದಿಂದಿರ್ದ ದೇವಿಸಹಿತೀಶಾನನು ‖
ಹರತಪಕೆ ಗಮಿಸಲ್ಕೆ ಸುರರೆಲ್ಲ ವೇಗದಿಂ |
ಸರಸಿಜಾಸನನೆಡೆಗೆ ಬಂದು ವಂದಿಸಿ ದೇವ |
ಕರುಣಾವನಧಿ ನೀನೆ ಗತಿಯಲ್ಲದೆಮಗಾರು ರಕ್ಷಿಪ ಸಮರ್ಥರರಸ ‖ (41)

ಮೊದಲು ನೀನಿತ್ತೆ ಸೇನಾಪತಿಯು ಸತಿಸಹಿತ |
ಪದುಳದಿಂ ತಪವನಾಚರಿಸಿರ್ಪ ಮುಂದೆಮಗೆ |
ಮುದದಿ ಕರುಣಿಪ ಚಮೂನಾಥನಂ ಪಾಲಿಸುವುದೆನೆ ಬೊಮ್ಮನಿಂತೆಂದನು ‖
ಮದನಾರಿಯರಸಿ ಸುರಸತಿಯರಲಿ ಸಂತಾನ |
ಮುದಯಿಸಿದ ತೆರದಿ ಶಾಪವನಿತ್ತಳಿದು ಸತ್ಯ |
ಚದುರನೀಯಗ್ನಿಯಾಕಾಶಗಂಗೆಯೊಳೊರ್ವ ಸುತನ ಪಡೆದೀವ ನಿಮಗೆ ‖ (42)

ಆತನೆ ಚಮೂನಾಥನಪ್ಪನವನಿಂದ ಮಿಗೆ |
ಜಾತಮಪ್ಪುದು ಮುದಂ ಪೆತ್ತೀಯೆ ಶೈಲೇಂದ್ರ |
ಜಾತೆ ದಿವ್ಯಕುಮಾರನೊರ್ವನಂ ಪೋಗಿರೆನೆ ಕಮಲಭವನಾಜ್ಞೆಯಿಂದ ‖
ಜಾತಸಂತೋಷದೊಳಗೈದಿದರ್ ಸುರರೆಲ್ಲ |
ವೀತಿಹೋತ್ರನ ಪೊರೆಗೆ ದೇವ ಸುರಕಾರ್ಯಕ್ಕೆ |
ನೀ ತಳುವದೈದಿ ಶಿವತೇಜಮಂ ಗಂಗೆಯೊಳ್ ಬಿಟ್ಟು ರಕ್ಷಿಸುವುದನಘ ‖ (43)

ಎನೆ ಹುತಾಶನನಾಗ ವಿನಯದಿಂದೈತಂದು |
ಘನತರದ ಮೃದುವಾಣಿಯಿಂ ತರಂಗಿಣಿಯನುಂ |
ಮನಮೆಚ್ಚುವಂತೆ ಪ್ರಾರ್ಥನೆಗೈದು ಪೇಳಿದಂ ದೇವಿ ಸುರಕಾರ್ಯಮಿದನು ‖
ಅನುಕರಿಸಿ ಗರ್ಭಮಂ ತಳೆದಪುದೆನಲ್ಕೈದೆ |
ಸನುಮತಿಸಲಗ್ನಿ ಶಿವವೀರ್ಯಮಂ ಗಂಗೆಯೊಳ್ |
ಬಿನದದಿಂ ಬಿಡಲು ಸರ್ವಸ್ರೋತಸಂಪೂರ್ಣಮಯವಾಯಿತೇನೆಂಬೆನು ‖ (44)

ಧರಿಸಲಾರದೆ ಗರ್ಭವಂ ಕರೆದು ಪಾವಕನ |
ತರಹರಿಸಲಳವಲ್ಲಮಿದಕೇನುಪಾಯಮೆನ |
ಲೊರೆದ ಹಿಮಶೈಲದೆಡೆಯಲ್ಲಿಟ್ಟು ಗರ್ಭಮಂ ಬಹುದೆಂದು ನೇಮಿಸಿದನು ‖
ಸುರರಗ್ರಭವನುಸುರ್ದ ತೆರದಿಂದಲಾ ಗಂಗೆ |
ವರಗರ್ಭಮಂ ತುಹಿನಗಿರಿಯ ಪಾರ್ಶ್ವದೊಳಿರಿಸೆ |
ಪರಿದು ಭೂತಳಮೆಲ್ಲ ಕಾಂಚನಾತ್ಮಕಮಾದುದೇನೆಂಬೆ ಕೌತುಕವನು ‖ (45)

ತಂದಿಟ್ಟಮಾತ್ರದಿ ಸುವರ್ಣರಜತವುತಾಮ್ರ ।
ಛಂದದಿಂದುದಿಸಿದುವು ತನ್ಮಲದಿ ತ್ರಪುಸೀಸ ।
ವೆಂದಾದುದಂದಿನಿಂ ಜಾತರೂಪಾಭಿದಂ ಸ್ವರ್ಣಕ್ಕೆ ರಘುನಂದನ ॥
ಹೊಂದಿದುದು ತೃಣಗುಲ್ಮತರುಲತಾದಿಗಳೆಲ್ಲ ।
ಬಂಧುರಹಿರಣ್ಮಯವನಾ ಕುಮಾರನ ಕಂಡು ।
ಬಂದೊರೆದರಖಿಳದೇವರ್ಕಳುಂ ತರಳಂಗೆ ಸ್ತನ್ಯಪಾನಾರ್ಥಮಾಗಿ ॥ (46)

ದೇವತಾಸಮುದಯದ ನುಡಿಗೇಳಿ ಕೃತ್ತಿಕಾ ।
ದೇವಿಯರು ನಡೆತಂದು ಸ್ತನ್ಯಪಾನಂಗೊಟ್ಟು ।
ಸಾವಧಾನದಿ ಸಲಹಲಂದಿನಿಂದಾತಂಗೆ ಕಾರ್ತಿಕೇಯಾಭಿಧಾನ ॥
ಮೋವಿದುದು ಸ್ಕಂದಗರ್ಭೋದ್ಭೂತನದರಿಂದ ।
ದೇವಿಯಲಿ ಸ್ಕಂದಾಖ್ಯಮಾಂತನಾ ತರಳನುಂ ।
ಪಾವಕೋಪಮ ಷಡಾನನನಾಗಿ ಕೃತ್ತಿಕಾಸುದತಿಯರು ಮೊ[1]ಲೆಯೂ(ಡಲು) ॥

ಕ್ಷೀರಪಾನಂಗೈದ ಮಾತ್ರದಲಿ ಸುಕುಮಾರ ।
ಚಾರುತನುವಂ ತಾಳಿ ದೈತ್ಯಗಣಮಂ ಸವರಿ ।
ಧೀರನೆಸೆದಿರಲಗ್ನಿಮುಖ್ಯದೇವತೆಗಳುಂ ಸೇನಾಪತಿತ್ವಪದಕೆ ॥
ಆರಿಸಿದರೀ ಕುಮಾರನ ಚರಿತೆಯಂ ಧರೆಯೊ ।
ಳಾರು ಬರೆದೋದಲಾಯುಷ್ಯಸಿರಿಸಂತಾನ ।
ಸಾರೂಪ್ಯಮೊದಗುವುದು ರಘುಜ ವಿಸ್ತರಿಸುವೆಂ ಗಂಗಾವತರಣಕಥೆಯ ॥ (48)

ತರಣಿಕುಲದಿರವೆನಿಪಯೋಧ್ಯಾಭಿದಾನಪುರ ।
ದರಸು ಸಗರಾಭಿದಗೆ ಧರ್ಮಪತ್ನಿಯರಿರ್ದ ।
ರುರುಗುಣಾಢ್ಯರು ಪತಿವ್ರತೆಯರವರೊಳ್ ಜ್ಯೇಷ್ಠೆ ಕೇಶಿನಿ ವಿದರ್ಭಜಾತೆ ॥
ಕಿರಿಯವಳರಿಷ್ಠನೇಮಿಯ ತನುಜೆ [2](ಸುಮತಿಗಾರ್) ।
ಸರಿಯಿಲ್ಲ ಸೌಂದರ್ಯದಿಂ ವಿರಾಜಿಸುತಿರ್ದ ।
ಳರಸ ಸುತರಿಲ್ಲದಿರಲವರೀರ್ವರಿಗೆ ನೃಪತಿ ಮನನೊಂದು ಚಿಂತೆಯಿಂದ ॥ (49)

---

1 ಮೊಲೆಯೂಡಿದಂ

2 (ಲೋಕದೊಳ್)— ಅರಿಷ್ಟನೇಮಿದುಹಿತಾ ರೂಪೇಣಾಪ್ರತಿಮಾ ಭುವಿ॥
ದ್ವಿತೀಯಾ ಸಗರಸ್ಯಾಸೀತ್ಪತ್ನೀ **ಸುಮತಿಸಂಜ್ಞಿತಾ** ॥೪॥
(ವಾ. ರಾ —೩೮ನೆಯ ಸರ್ಗ.)

ಸತಿಯರನ್ನೊಡಗೊಂಡು ಸಾರಿ ಹಿಮಶೈಲಮಂ |
ಮತಿವಂತರೊಳ್ಪಿರಿಯಭೃಗುಮುನಿಯಂ ಕುರಿತು |
ಕ್ಷಿತಿಪ ಶತವತ್ಸರ ನಿರಾಹಾರ ಕರ್ಮದುರುತಪವನಾಚರಣೆಗೈಯೆ ||
ಯತಿಕುಲೋತ್ತಮನು ವರಗಳನಿತ್ತ ನೃಪತಿಗಂ |
[2]ದತಿಶಯದ (ವಂಶಕರನೊರ್ವನಂ) ವೈದರ್ಭಿ |
ಸುತನ ಪಡೆವಳ್ಸುಮತಿಗರುವತ್ತು ಸಾಸಿರ ಕುಮಾರರಹರೆಂದೆನುತ್ತ || (50)

ಮುದದಿಂದ ಸಗರ ಸುತರುದಯಮಂ ಕೇಳುತ್ತ |
ಸುದತಿಯರೊಳೊರೆದು ಸುಮ್ಮಾನದಿಂ ನಡೆತಂದು |
ಚದುರಿಂದ ನಗರಮಂ ಸಾರಿ ಸುಖದಿಂದಿರಲ್ಕೆಲಕಾಲಕಾಯ್ತು ಗರ್ಭ ||
ಉದಿಸೆ ಕೇಶಿನಿಯೊಳಸಮಂಜಸಂ ಸುಮತಿಗ-|
ಭ್ಯುದಯಮಾಗಲ್ತನಯರರುವತ್ತು ಸಾಸಿರಂ |
ಪದುಳಗೈದರ್ಧಾತ್ರಿಯರು ಶಿಶುಗಳನ್ನೆಣ್ಣೆಗೊಪ್ಪರಿಗೆಯೊಳ್ ಪ್ರೇಮದಿ || (51)

ಬಾಲಕರು ದಿನದಿನಕೆ ಪೆರ್ಚಿದರ್ ತೈಲದೊಳ್ |
ಶೀಲಬಲವಿಕ್ರಮಗುಣಾಧಿಕ್ಯಚೆಲುವಿನಿಂ |
ಲಾಲಿತ್ಯರೆಂದೆನಿಸಿ ಸರ್ವಜನ ಸಮ್ಮತದೊಳಿರ್ದರಸಮಂಜ ಪುರಿಯ ||
ಬಾಲಕರ ಪಿಡಿದು ಸರಯೂನದಿಯೊಳುಂ ಬಿಸುಟು |
ಮೇಲಿರ್ದು ನಗುತಿರಲ್ ಪ್ರಜೆಯೆಲ್ಲರಾ ಭೂಮಿ |
ಪಾಲಂಗೆ ಮೊರೆಯಿಡಲ್ ಕೋಪದಿಂ ಪೊರಡಿಸಿದ ನಿಜತನಯನಂ ಬೇಗದಿ ||

ಅಸಮಂಜಸುತನಂಶುಮಂತನಾಮಕಧೀರ |
ವಸುಮತೀಪ್ರಿಯನೆನಿಸಿ ಸರ್ವಜನಪಾಲನೆಯ |
ನೆಸಗುತಿರೆ ಸಗರಭೂಪಾಲಕಂ ಸಪ್ತತಂತುವ ಮಾಳ್ಪರಾ ಸಮಯದಿ ||
ಬಿಸಜಭವವಿಪ್ರರುಗಳೊಡಗೂಡಿ ವಿಂಧ್ಯಗಿರಿ |
ಯುಸಮತುಹಿನಾಚಲದ ಮಧ್ಯಪ್ರದೇಶದೊಳ್ |
ಪೊಸತೆನಿಪ ಯಾಗಪ್ರವರ್ತನೆಯ ಮಾಡಿದಂ ನರವರಶ್ರೇಷ್ಟ ನಯದಿ || (53)

ತುರಗರಕ್ಷಣೆಯಂಶುಮಂತನಿಗೆ ನೇಮಿಸುತ |
ನರದೇವ ದೀಕ್ಷೆಯನ್ನನುಕರಿಸೆ ಪವಣಿನೊಳು |
ಮುರುದೈತ್ಯವೇಷದಿಂದಿಂದ್ರನಪಹರಿಸಿದಂ ಯಾಜ್ಞೀಯವಾಜಿಯನ್ನು ||
ಅರಿತುಪಾಧ್ಯಾಯಾದಿವಿಪ್ರರುಗಳೈತಂದು |
ತುರಗಾಪಹರ್ತನನ್ನರಿತು ಮರಳಿಸಿ ತಂದು |
ವರಯಾಗಮಂ ರಚಿಸವೇಳ್ಕೆಂದು ನೃಪತಿಯೊಳಗೊರೆದರನುನಯದೊಳೊಲಿದು ||

---

2 (ಕೀರ್ತಿಕಾಗುಣಯುತನ)—ಏಕಂ ಜನಯಿತಾ ತಾತ ಪುತ್ರಂ **ವಂಶಕರಂ** ತವ ||
ಷಷ್ಟಿಂ ಪುತ್ರ ಸಹಸ್ರಾಣಿ ಅಪರಾ ಜನಯಿಷ್ಯತಿ ||೮||
(ವಾ. ರಾ.—೩೮ನೆಯ ಸರ್ಗ)

ಸಾರುವರ ನುಡಿಗೇಳಿ ಪಾವನಚರಿತ್ರನು ಗ |
ಭೀರನುಡಿಯಿಂ ತನ್ನ ಪುತ್ರರೆಲ್ಲರ ಕರೆದು |
ವಾರುವಂ ಪೋದ ಗತಿಯಂ ಕಾಣದುದರಿಂದೆ ಯಜ್ಞಾಂತರಾಯಮುಹುದು ‖
ಧಾರಿಣಿಯನೆಲ್ಲಮುಂ ಶೋಧಿಸುವುದಶ್ವಮಂ |
ತೋರುವನ್ನಕ ಖನನಗೈದಪುದು ಜನಕೊಂದು |
ದಾರಯೋಜನಮೆಂದೆನುತಲಪ್ಪಣೆಗೊಟ್ಟು ಬಳಿಕೆಂದ ತನಯರೊಡನೆ ‖ (55)

ತರಿದು ರಕ್ಕಸರಸುವ ತುರಗಮುಂ ಸ್ವೀಕರಿಸಿ |
ಮರಳಿ ಬಪ್ಪನ್ನಕಂ ನೊಮ್ಮನೊಡನೀ ವಿಪ್ರ |
ಗುರುಜನಂಗಳು ಸಹಿತ ದೀಕ್ಷೆಯೊಳಗಿಹೆನೆಂದು ಪೇಳಿ ಬೀಳ್ಕೊಡಲು ಬಳಿಕ ‖
ಅರುವತ್ತುಸಾಸಿರ ಕುಮಾರಕರು ಕುಲಿಶಸಮ |
ಕರಗಳಿಂದಲಿ ಬಗಿದು ಧರಣಿಯಂ ಹಲಶೂಲ |
ಖರತರಾಯುಧಗಳಿಂ ಖನನಗೈದರದೇನಪೇಳ್ವೆ ರಘುವೀರ ಭರವ ‖ (56)

ತೋಡುವೆಡೆಯೊಳು ಕಂಡ ದನುಜನಾಗಾದಿಗಳ |
ನಾಡೊಡೆಯರಲ್ಲಿ ಮರ್ದಿಸುತ ಖೇದನಗೈದ |
ರೀಡಿಲ್ಲದುರುಬಲದೊಳರುವತ್ತುಸಾಸಿರ ಸುಯೋಜನದ ಲೆಕ್ಕದಿಂದೆ ‖
ಜೋಡಿಸಿಲು ಶೈಲಸಂಬಾಧ ಜಂಬೂದ್ವೀಪ |
ನಾಡನೆಲ್ಲವ ಬಳಸುತಿರೆ ದೇವತತಿ ಭಯದೊ |
ಳೋಡಿ ಸರಸಿಜಪೀಠನೆಡೆಗೆ ಬಿನ್ನಪಗೈದರತಿದಾರುಣಕ್ರಿಯೆನು ‖ (57)

ಸಗರಸುತರೆಲ್ಲರುಂ ಬಗಿದೀ ಮಹೀತಳವ |
ಮೊಗವ ಕಂಡವರುಗಳ ನುಗ್ಗುಗೈದಪರೆನಲ್ |
ಸುಗುಣಚತುರಾನನಂ ಪೇಳ್ದ ವೃಂದಾರಕರ ಸಂದೋಹಕತಿಪ್ರೀತಿಯಿಂ ‖
ವಿಗಡಬಲರಿವರ್ಕೈದಿ ಪಾತಾಳಲೋಕಮಂ |
ಮಿಗೆ ವಿಷ್ಣುಕಪಿಲಮುನಿಯುರುಕೋಪಸಂಭೂತ |
ದಗಿನಿಯೊಳ್ ಕೆಡೆದಪರ್ ಭಯಬೇಡ ಪೋಗೆಂದು ಬೀಳ್ಕೊಟ್ಟ ದೇವರ್ಕಳಂ ‖

ತೋಡಿದರು ಭೂಮಿಯಂ ಬಳಸಿ ನಾಲ್ದೆಸೆಯನುಂ |
ನೋಡಿ ಹಯಚೋರನಂ ಕಾಣದೈತಂದು ಕೈ |
ನೀಡಿ ಪಿತನಂಭ್ರುಗಂ ನಮಿಸಿ ಬಿನ್ನವಿಸಿದರು ನಡೆದೆಲ್ಲ ವೃತ್ತಾಂತವ ‖
ರೂಢಿಯೊಳ್ತುರಗಮದು ಕಾಣ್ಬಡದೆನಲ್ಕೆ ನೃಪ |
ಮೂಡಿಬಹ ರೋಷದಿಂದಿಂತೆಂದ ಕಾರ್ಯಕ್ಕೆ |
ಗೂಡುವನ್ನಕ ನೋಳ್ಪುದೆನೆ ಹಸಾದಮೆನುತ್ತಲೈತಂದರಾ ಪುತ್ರರು ‖ (59)

ತುರಗ ಕೈವಶಮಪ್ಪ ಪರಿಯಂತ ಭೂಮಿಯಂ |
ಭರದಿಂದ ಭೇದಿಪುದೆನಲ್ಕೆ ಪಿತನಾಜ್ಞೆಯಿಂ |
ತ್ವರಿತದಿಂದೈತಂದು ಪೊಕ್ಕರು ರಸಾತಳವನಗೆದರತಿಶೌರ್ಯದಿಂದ ||
ಪುರುಹೂತದಿಕ್ಕಿನ ಮಹಾಗಜ ವಿರೂಪಾಕ್ಷ |
ಧರಣಿಯಂ ಪೊತ್ತಿರಲ್ಕಂಡದಕೆ ವಂದಿಸುತ |
ತಿರುಗಿ ದಕ್ಷಿಣಕಡೆಯಲರಸಿದರು ಭೂಮಿಯಂ ಭೇದಿಸುತ ತೋಷದಿಂದೆ || (60)

ನೆಲನ ಸೀಳುತಲೈದಲಾ ಕುಮಾರಕರಿದಿರ |
ಲಲಘುದಿಗ್ಗಜ ಮಹಾಪದ್ಮಾಭಿಧಾನದಿಂ |
ಬಲುಬಲದಿ ಭೂಮಿಯಂ ಪೊತ್ತಿರಲ್ಕಂಡದಕೆ ನಮಿಸಿ ಪಶ್ಚಿಮಕೆ ಮರಳಿ ||
ನಿಲುವಿಲ್ಲದೆಲೆ ರಸಾತಲವ ಭೇದಿಸುತ್ತೈದೆ |
ಚೆಲುವ ಸೌಮನಸಾಖ್ಯದಿಗ್ಗಜಂ ಕಣ್ಗೆಸೆಯ |
ಲೊಲಿದು ಪ್ರಾರ್ಥಿಸಿ ನಡೆದರಾಗ ನೃಪನಂದರ್ ಬಡಗಮುಖರಾಗಿ ಬಳಿಕ || (61)

ಉದ್ದಂಡದಿಂ ಭೂಮಿಯನ್ನಗೆಯಲಲ್ಲಿಯುಂ |
ಮುದ್ದುದಿಗ್ಗಜ ಭದ್ರನಾಮಕದಲೆಸೆದಿರ-|
ಲ್ಕುದ್ದಾಲಕರರೈದಿ ನಮಿಸಿ ತೊಳಲಿದರಖಿಳದಿಕ್ಕುಗಳ ಹಯದ ಗತಿಯ ||
ಸುದ್ದಿಯಂ ಪೇಳ್ವರಿಲ್ಲದೆ ಕೋಪವೆಗ್ಗಳಿಸೆ |
ಬದ್ಧರೋಷದಿ ರಸಾತಳವನುಂ ಭೇದಿಸಲ್ |
ಬುದ್ಧಿಗಾಚೆಯಲೆಸೆವ ಕಪಿಲಾಖ್ಯಮೌನಿಯಂ ಕಂಡರಾ ಭೂಪಾಲರು || (62)

ಚರಿಸುತಿರ್ದುದು ಸಮೀಪದಲಶ್ವ ಸ್ವೇಚ್ಛೆಯಿಂ |
ನರನಾಥರೀಕ್ಷಿಸುತ ಸಂತಸದಲೈತಂದು |
ತುರಗಚೋರಕನೀತನೆಂದರಿತು ರೋಷದಿಂ ಸಿಡಿಲರವಮಂ ತೋರುತ ||
ಮರುಳೆ ಯಜ್ಞಾಶ್ವಮಂ ತಂದೆ ನೀಂ ಪ್ರಾಣಮಂ |
ಹರಿಪ ಸಗರಾತ್ಮಜರ ಕಾಣದಾದೆಯೆನುತ್ತ |
ಪರಿಪರಿಯ ದಾರುಣದ ನುಡಿಗಳಿಂ ಘರ್ಜಿಸುತಲೆಡಬಲದಿ ವಿಧಿವಶದಲಿ || (63)

ತುಡುಕಲವ್ವಳಿಸೆ ನಾಲ್ದೆಸೆಯ ಸಗರಾತ್ಮಜರ್ |
ಕಡುಗೋಪದಿಂ ಕಪಿಲ ಹುಂಕರಿಸಲಾಕ್ಷಣದಿ |
ಕೆಡೆದರರುವತ್ತುಸಾಸಿರ ನೃಪಾಲಕರಲ್ಲಿ ಭಸ್ಮರೂಪಾಗಿ ಬಳಿಕ ||
ಪೊಡವಿಪತಿ ಸಗರಸುತರಾಗಮನ ಚಿರಕಾಲ |
ತಡೆಯೆ ನಪ್ತಾರನಂ ಕರೆದು ಪೇಳಿದ ತರಳ |
ಮೃಡವಿಕ್ರಮಂ ಪೂರ್ವದರಸುಗಳ ಪಾಸಟಿಯು ಸಕಲಾರ್ಥವೇತ್ತನಲ್ತೆ || (64)

ಚತುರಂಗಬಲದೊಡನೆ ಪೋಗಿ ನಾಲ್ದೆಸೆಯೊಳುಂ |
ಪಿತರ ಪರಿಯಂ ನೋಡಿ ಹಯಚೋರನಂ ಪಿಡಿದು |
ಮತಿಯಿಂದ ಸಿದ್ಧಾರ್ಥನಾಗಿ ಬಹುದೆನಲಂಶುಮಂತನುಂ ಸಂತಸದೊಳು ||
ಅತಿಶಯದಿ ತಾತಂಗೆ ಪೊಡಮಟ್ಟು ಬೀಳ್ಕೊಂಡು |
ಪಿತರ ತಿರಿದರಸಿದಂ ಬಿಡದೆ ಕಾತರವಟ್ಟು |
ಕ್ಷಿತಿಯನೆಲ್ಲವ ಬುದ್ಧಿಯೊಳಗೆ ಕಾಣ್ಬಡದಿರಲ್ಪೊಕ್ಕಂ ರಸಾತಳವನು ||     (65)

ಪಿತರಗಿದ ಮಾರ್ಗದೊಳ್ಪೊಕ್ಕುಂ ರಸಾತಳವ |
ಕ್ಷಿತಿಭೃತ್ಶಿರೋಮಣಿಯು ಕಂಡು ದಿಗ್ಗಜವನಂ |
ದತಿಶಯದಿ ವಂದನಂ ಗೈದು ಬೆಸಗೊಳಲು ಸಲೆ ಪಿತರಹಯದಿರವ ಮುದದೆ ||
ಕತಿಪಯಾಧ್ವಾನವನು ಕಳೆಯೆ ಭೂಪತಿ ನಿನ್ನ |
ಮತಿಯೋಳ್ದಿರ್ದಂತಪ್ಪುದೆನುತೊರೆಯೆ ನಾಲ್ದೆಸೆಯ |
ಖತಿಯಿಂದ ತೊಳಲಿ ದಿಕ್ಕರಿಗಳೆಲ್ಲವ ಕೇಳಲಾ ಪರಿಯಲವು ಪೇಳ್ದವು ||     (66)

ತಿರುಗಿ ಧರಣೀತಳವನರಸನ ಮನೋರಥವು |
ದೊರೆಕೊಳ್ಳದಿರೆ ಚಿತ್ತದನುತಾಪದಿಂದಲ್ಲಿ |
ಮರುಗುತ್ತಲಿರಲಿದಿರೊಳೊಂದು ತೇಜೋರಾಶಿ ಕಣ್ಗೆಸೆದುದತಿಶಯದೊಳು ||
ಮಿರುಮಿರುಪ ಕುಂದೇಂದುಸನ್ನಿಕಾಶನನಾದ |
ಸುರುಚಿರದ ಕನಕಪಕ್ಷಂಗಳಿಂ ಕಾಶ್ಮೀರ |
ದುರುಕಾಂತಿಯಂಗ ಕರದೊಳಗೆಸೆವ ಪೀಯೂಷರಸಭರಿತಕಲಶದಿಂದ ||     (67)

ಸಕಲವಿಷಹರ ಪಕ್ಷಿರಾಜ ಫಲಸಂದಾತ |
ನಿಖಿಲಮುನಿವರವಂದ್ಯ ತನ್ನನೋಯೆನುತೆರಗು |
ತಖಿಳವೃತ್ತಾಂತಮಂ ಬಿನ್ನವಿಸಲಾ ತಾರ್ಕ್ಷ್ಯನಿಂತೆಂದ ಕುವರನೊಡನೆ ||
ನಿಖಿಲತತ್ಪಿತರುಗಳು ಕಪಿಲಕೋಪೋದ್ಭೂತ |
ಪ್ರಕಟಾಗ್ನಿಯಿಂ ದಗ್ಧರಾದರದಕಿನ್ನಳಲಿ |
ಚಕಿತಮಾನಸನಾಗಲೇಂ ಪ್ರಯೋಜನವಣುಗ ತುರಗಮಂ ನೋಡು ಬೇಗ || (68)

ತಾತನುರುಯಾಗಮಂ ನೀಂ ಸಲಿಸು ತುಹಿನಾದ್ರಿ |
ಜಾತೆ ಸಗ್ಗದೊಳಿರ್ಪಳವಳಿಂದ ತರಣಿಕುಲ |
ಜಾತರಿಗೆ ಸದ್ಗತಿಯ ಕಲ್ಪಿಸುವುದೆನುತೊರೆದು ಬೀಳ್ಕೊಡಲು ಬೊಪ್ಪರಿಂಗೆ ||
ಮಾತುಲನ ನುಡಿ ಸತ್ಯಮೆಂದು ಗಮಿಸುತ ನೃಪಂ |
ಚೇತನಾತ್ಮಕ ಕಪಿಲನಂ ನೋಡಿ ನಮಿಸುತಂ |
ಜಾತಸಂಕಟದಿಂದಲಶ್ವಮಂ ಕೈಕೊಂಡು ನಡೆತಂದ ತಾತನೆಡೆಗೆ ||     (69)

ಬಂದಖಿಳವೃತ್ತಾಂತಮನ್ನರುಪಲಾತ ಕಡು |
ನೊಂದು ಕ್ರತುವಂ ಪೂರ್ತಿಗೈದು ನಿಜಪುರಿಗೈದಿ |
ತಂದಪೆನು ಗಂಗೆಯನ್ನೆನುತಲಾಲೋಚಿಸುತ ಸಗರ ಕೆಲಕಾಲವಿರ್ದು ||
ಇಂದಿರಾವರನಂಘ್ರಿಯುಗವ ಸಾರಲ್ ರಾಜ |
ಬಂಧುಗಳು ಬಂದಂಶುಮಂತಂಗೆ ಪಟ್ಟಮಂ |
ಛಂದದಿಂ ಕಟ್ಟಲ್ಕೆ ಸದ್ಧರ್ಮದಿಂ ಪ್ರಜಾಪಾಲನಂಗೈವುತಿರ್ದಂ || (70)

ಸುತನಾದನಂಶುಮಂತಂಗೆ ಸದ್ಗುಣನಿಲಯ |
ಶತಪತ್ರಮಿತ್ರವಿಕ್ರಮದಿಲೀಪಾಹ್ವಯಂ |
ಕ್ಷಿತಿಪಾಲಮೌಳಿ ನಂದನಗೆ ರಾಜ್ಯವನಿತ್ತು ಪಿತೃಗಳನ್ನುದ್ಧರಿಪಡೆ ||
ಅತಿಶಯದ ಸಗ್ಗಗಂಗೆಯ ತರುವೆನೆಂದು ಹಿಮ |
ಯುತಶೈಲಮಂ ಸಾರಿ ತಪದಿಂದಲಿರ್ದಾಗ |
ಕತಿಪಯಾಬ್ದಂಗಳಿಗೆ ಸಗ್ಗಮಂ ಸಾರಿದಂ ಕಾಲವಶದಿಂದರಸನು || (71)

ಮೇದಿನೀಧವನಂಶುಮಾನ್ಸಗ್ಗಪದವಿಯ-|
ನ್ನಾದರಿಸಲಾ ದಿಲೀಪಂ ನೆನೆದು ಮರುಗುತ್ತ |
ಪೋದ ಪಿತೃಗಳಿಗೆ ಸದ್ಗತಿಯ ಕಲ್ಪಿಪೆನೆಂದು ತನ್ನೊಳಾಲೋಚಿಸುತಲಿ ||
ಸಾದರದಿ ಧರೆಯ ಪಾಲಿಸಿದ ಸದ್ಧರ್ಮಸ-|
ಮ್ಮೋದದಿಂ ಮೂವತ್ತು ಸಾಸಿರಬ್ದಂಗಳಂ |
ಬಾಧಿಸುವ ರುಜೆಯಿಂದ ಮೃತ್ಯುಲೋಕವ ಸಾರ್ದ ಕಾಲಗತಿಯಂ ಮೀರದೆ ||

* ನೃಪಕುಮಾರಕನಾಲಿಸಾ ದಿಲೀಪಾತ್ಮಭವ |
ನಪರಿಮಿತವಿಕ್ರಮ ಭಗೀರಥಾಹ್ವಯ ರಾಷ್ಟ್ರ |
ಗುಪಿತಮಂ ಮಂತ್ರಿಜನರಿಂಗಿತ್ತು ಗೋಕರ್ಣಪುಣ್ಯಾಶ್ರಮವ ಸಾರಿದಂ ||
ತಪದಿಂದ ಸ್ವರ್ನದಿಯನಿಳುಹಿತಂದೀ ನೆಲಕೆ |
ಪ್ರಪಿತಾಮಹಾದಿಗಳ ರಕ್ಷಿಸುವೆನೆಂದಾಗ |
ಕೃಪೆಯಿಂದಲೈತಂದು ಪೊಕ್ಕು ಗೋಕರ್ಣಮಂ ಪೂರ್ಣಮಾನಸದೊಳರಸ || (73)

ಮಾಸೋಪವಾಸ ಮರುದಾಹಾರ ಪಂಚಾಗ್ನಿ |
ವಾಸಮಧ್ಯಾಸೀನನೆನಿಸಿ ಮಧ್ಯಾಹ್ನಕರ |
ನೇಸರಂ ನಿಟ್ಟಿಸುತಲೂರ್ಧ್ವಬಾಹುಗಳಿಂದಲೆಸಗಿದಂ ತಪವ ಬಿಡದೆ ||
ಬೇಸರದಲೀ ಪರಿಯ ಸಾಸಿರಬ್ದಂಗಳ-|
ನ್ನೋಸರಿಸೆ ಕಮಲಭವ ಕರುಣಾಕಟಾಕ್ಷದಿಂ |
ವಾಸವಪ್ರಮುಖರೊಡನೈತಂದ ನೃಪಮೌಳಿಯಿರ್ದ ಪುಣ್ಯಾಶ್ರಮಕ್ಕೆ || (74)

---

* ಮಂತ್ರಿಷ್ವಾದಾಯ ತದ್ರಾಜ್ಯಂ ಗಂಗಾವತರಣೇ ರತಃ ||
ಸತಪೋ ದೀರ್ಘಮಾತಿಷ್ಠದ್ಗೋಕರ್ಣೇ ರಘುನಂದನ ||೧೨||
(ವಾ. ರಾ.—೪೨ನೆಯ ಸರ್ಗ)

ನೃಪಮುಕುಟಮಾಣಿಕನೆ ಇಕ್ಷ್ವಾಕುವಂಶಜನೆ ।
ತಪದಿಂದ ಸುಪ್ರೀತನಾಗಿ ಬಂದಿಹೆ ಬೊಮ್ಮ ।
ತಪನಸನ್ನಿಭ ಕ್ರೂರತಪವ ನಿಲ್ಲಿಸು ಬೇಡು ಮನದಿಷ್ಟವೀವೆನೆನಲು ॥
ಕೃಪೆಯುಳ್ಳೊಡೆಲೆ ದೇವ ಕೊಡು ದೇವನದಿಯ ಮ ।
ತ್ಪ್ರಪಿತಾಮಹಾದಿಗಳು ಪದುಳದಿಂದವ್ಯಯದ ।
ಗುಪಿತರಾಗಿರಲಿ ಮನದಿಚ್ಛೆಯಂ ಪಾಲಿಸುವುದೆಂದೊಡೆ ಭಗೀರಥನೊಳು॥ (75)

ಸರಸಿಜೋದ್ಭವನೆಂದ ಸಾಧ್ಯವಲ್ಲದ ವರವ ।
ನರಸ ಯಾಚಿಸಿದೆಯಾದರು ನಿನ್ನ ಮನದಿಷ್ಟ ।
ಪರಿಪೂರ್ಣಮಪ್ಪುದಿನ್ನಿದಕೊಂದುಪಾಯಮಂ ಪೇಳ್ದಪೆನು ಲಾಲಿಸಣುಗ ॥
ಸುರನದಿಯ ಬರವನೀ ಧರೆ ತಾಳದದರಿಂದೆ ।
ಹರನ ಪ್ರಾರ್ಥಿಸಿ ಕೃಪೆಯ ಬರಿಸು ನೀಂ ನೆನೆದರ್ಥ ।
ಕರವ ಸಾರುವುದೆನುತಲೊರೆದು ಸುರರೊಡವೆರೆದು ನಡೆದ ಸರಸಿಜಪೀಠನು॥ (76)

ಪೋಗೆ ಸರಸಿಜಯೋನಿಯರಸನೇಕಾಂಗುಷ್ಠ ।
ನಾಗಿ ಮರುತಾಶನನಿರಾಹಾರದಿಂದೂರ್ಧ್ವ ।
ಭಾಗಕ್ಕೆ ನೆಗಪಿ ಭುಜಗಳನೆರಡನೊಂದಬ್ದ ಮಾಡಿದಂ ಕ್ರೂರತಪವ ॥
ಬೇಗ ಪಶುಪತಿಯುಮಾಪತಿ ಬಂದು ನೃಪವರ್ಯ ।
ಗಾಗಲಿಂತೆಂದ ಮೆಚ್ಚಿದೆ ಮಗನೆ ಗಂಗೆಯಂ ।
ಪೋಗದಂದದಿ ತಾಳ್ವೆ ಮಕುಟಾಟವಿಯೊಳೆನಲು ಹಿಗ್ಗಿದಂ ಹರನ ನುಡಿಗೆ॥ (77)

ಅನಿತರೊಳು ಹಿಮವಂತಗಿರಿಯ ಪಿರಿಯಾತ್ಮಜೆಯು ।
ಘನಘೋಷದಿಂದ ಭೋರ್ಗರೆಯುತ್ತಮೈತರಲ್ ।
ವನಜಾಯತಾಂಬಕನ ಮಿತ್ರ ಮಂಡೆಯೊಳಾಂತನೇನೊಂದು ಕಣವ ಬಿಡದೆ ॥
ಮನಸಿಜಾರಿಸಮೇತವೊಯ್ವೆನೆಂಬಗ್ಗಳಿಕೆ ।
ಯನು ಕಂಡ ಫಾಲಲೋಚನ ಕ್ರೋಧದಿಂ ನದಿಯ ।
ಮನವೊಲಿದು ಬಂಧಿಸಿದ ವನಧಿಮೇಖಲೆಗಿಳಿಯದಂತದೇಂ ವರ್ಣಿಸುವೆನು ॥

ಹಿಮಶೈಲಕಾಂತಾರನಿಭಜಟಾಗಹ್ವರದಿ ।
ರಮಣೀಯಪಾವನಚರಿತ್ರೆ ಗಂಗಾದೇವಿ ।
ಭ್ರಮಿಸಿದಳನೇಕವತ್ಸರ ಧರಣಿಗಿಳಿಯಲಾ ಪರಿಯ ಕಂಡಾಗ ನೃಪತಿ ॥
ಸುಮನಸಶಿರೋರನ್ನ ಬೆಟ್ಟುವಿಲ್ಲನ ಭಜಕ ।
ರಮಿತತಾಪಾಪಹರನಂ ಕುರಿತು ಪ್ರಾರ್ಥಿಸುತ ।
ಭ್ರಮೆಯನುಳಿದಚಲನಾಗುತ್ತ ಜಾನಿಸೆ ಮಹಾದೇವ ಸುಪ್ರೀತನಾಗಿ ॥ (79)

ಆ ದಯಾನಿಧಿ ತನ್ನ ಜಡೆಯಿಂದ ಗಂಗೆಯಂ |
ಸಾದರದಿ ಬಿಂದುಸರಿಸುತ ಮಧ್ಯದೊಳ್ಬಿಡಲು |
ಮೇದಿನಿಯೊಳುಂ ತಟನಿ ಸಪ್ತರೂಪಾಂತ್ಯೈದಿಶಾ ಪರಿಯನಭಿವರ್ಣಿಪೆಂ ||
ಹ್ಲಾದಿನಿಯು ಪಾವನಿಯು ನಳಿನಿಯೆಂಬೀ ಮೂರು |
ಪೋದುದೈಂದ್ರೀದಿಶೆಗೆ ಚಕ್ಷುಸೀತಾಸಿಂಧು |
ಹ್ರಾದಿನಿಗಳೀ ಮೂರು ಪಶ್ಚಿಮದ ದಿಶೆಗೈದಲುಳಿದುದೀ ಭೂಪಾಲನ || (80)

ಹಿಂದೆ ಬರುತಿರೆ ಭಗೀರಥರಾಯನುಂ ದಿವ್ಯ |
ಸ್ಯಂದನವನಡರಿ ಮುಂದೈದುತಿರಲಾ ಗಂಗೆ |
ಛಂದದಿಂದನುಸರಿಸಿ ಬಂದಳಿನ್ನೇನೆಂಬೆನರಸ ಕೌತೂಹಲವನು ||
ಧಂದಧಂದದ ನಕ್ರಚಕ್ರತಿಮಿಕಮಠಂಗ |
ಳಿಂದ ಚಿಟಿ ಚಿಟಿ ಚಿಟಿಲ್ ಕಣಿ ಖಟಿಲು ಖಟಿಲೆನುತ |
ಬಂಧುರದ ಶೈಲಕಾನನಗಳಂ ಭೇದಿಸುತ ಗಗನಧುನಿ ಗತಿಯೊಳ್ಪೊದೆ || (81)

ಗಗನದಿಂದಲಿ ಹರನ ಮಕುಟಗಾಹನಕಿಳಿದು |
ನಗಚಾಪನುರುಕಪರ್ದವನುಳಿದು ಬಿಂದುಸರಿ |
ಸೊಗುವಿುಗೆಯೊಳ್ಪೈತಂದು ಧರಣಿಯೊಳು ಶೈವಲಿನಿ ಬರುತಿರಲ್ಸುರಮೌನಿಗಳ್ ||
ಸಗರವಂಶಜನ ಸನ್ಮಹಿಮೆಯಂ ಪ್ರೀತಿಯೊಳು |
ಪೊಗಳಿ ಧರೆಗೈತಂದು ಪಾವನಮಹಾನದಿಯ |
ನಿಗಮೋಪಸೇವನೆಯ ಸಾರಿ ಸಂತೋಷರಸರಾಶಿಯೊಳಗಾಡಿ ನಲಿದು || (82)

ಸ್ನಾನಸಂಧ್ಯಾವಂದನಾದಿಗಳ ಮಾಡಿ ಸು - |
ಮ್ಮಾನದಿಂ ಪಿತೃದೇವತೆಗಳ ತೋಷಣೆಗೊಳಿಸಿ |
ಸಾನಂದದಿಂದ ಕೃತಕೃತ್ಯರಾಗುತೆ ನುತಿಸಿ ದಿವ್ಯಾಪಗೋತ್ತಮೆಯನು ||
ಜ್ಞಾನನಿಧಿ ಘನತಾಪಹಾರಿ ಜಯಜಯವೆಂದು |
ಸಾನುಭವಸಿದ್ಧರೈದಿದರಿತ್ತ ಭಜಕಸಂ |
ತಾನರಾತ್ಮೆಯು ತಟನಿ ಬಂದಳು ಭಗೀರಥನ ರಥದೊಡನೆ ಲೋಕ ನಲಿಯೆ|| (83)

ತೀರಡರಿ ಭೂಭುಜಲಲಾಮನೈತರೆ ಪಿಂದೆ |
ಚಾರುತರಸರ್ವಾಂಗಿ ಭರದಿಂದಲೈತರಲು |
ದಾರನೃತ್ಯಂ ಗೀತವಾದ್ಯಘೋಷಣೆಯಿಂದಲಖಿಲಸುರನಿಕರ ಬರಲು ||
ಘೋರರವದಿಂದಲಾಶ್ರಮದೊತ್ತಿಗೈದಲತಿ |
ಕ್ರೂರಕೋಪದಿ ಜಹ್ನುಮುನಿ ವಡಬನಂದದಿಂ |
ಪೀರಿದನದೇನೆಂಬೆನದ್ಭುತವ ದಿವಿಜತತಿ ಕಂಡು ತಳ್ಳಂಕಗೊಳಲು || (84)

ನೋಡಿದ ಭಗೀರಥ ತಪೋಧನನ ಮಹಿಮೆಯಂ |
ಕೂಡೆ ತಪದಿಂದ ಸಂತುಷ್ಟಿ ಗೊಳಿಸಲ್ಮೆಚ್ಚಿ |
ರೂಢಿಯರಿವಂತೆ ಶ್ರುತಿಪಥದಿಂದ ಕಳುಪಿದಂ ದೇವಗಂಗೆಯನು ಮುದದಿ ||
ಪಾಡಿದರು ಸುರರೆಲ್ಲ ಜಹ್ನುಸಂಭವೆಯೆಂದು |
ಮೂಡಿದಾನಂದದಿಂ ಮುಂದೈದೆ ನೃಪತಿಯೊಡ |
ಗೂಡಿ ಜಾಹ್ನವಿ ನಡೆದು ತ್ವರಿತದಿಂ ಸಾಗರವ ಪೊಕ್ಕಳತಿರಭಸದಿಂದೆ || (85)

ಅಲ್ಲಿ(ಯೆ) ರಸಾತಳಕ್ಕಿಳಿದುಮಿಕ್ಷ್ವಾಕುಭೂ |
ವಲ್ಲಭಂ ಮುಂಗಡೆಯ ಭಸ್ಮರಾಶಿಯ ಬಳಗ |
ಮೆಲ್ಲಮಂ ಕಂಡು ಖೇದದೊಳಳಲುತಿರಲನಿತರೊಳ್ದೇವಗಂಗೆ ಬಂದು ||
ಚೆಲ್ಲಿರ್ದ ಬೂದಿಯೊಟ್ಟಲುಗಳಂ ಬೇಗ ತ |
ನ್ನಲ್ಲಿ ಮುಡಗಿದ ಮಾತ್ರದಿಂದಘಂಗಳು ಪೋಗಿ |
ಸಲ್ಲಲಿತದಿವ್ಯರಥವೇರಿ ಸುರಲೋಕಮಂ ಸಾರ್ದರತುಲಪ್ರಭೆಯಲಿ || (86)

ಅನಿತರೊಳ್ಸುರನಿಕರದೊಡಗೂಡಿ ಕಮಲಭವ |
ಜನನಾಥನೆಡೆಗೈದಿ ಜಾಹ್ನವಿಯೊಳೇ ಪೂತ |
ರೆನಿಸಿ ಸಗರಜರಮಿತಕಾಂತಿಯಿಂ ಸ್ಯಂದನಗಳಡರಿರಲ್ನೋಡಿ ನಗುತ ||
ಮಿನುಗಿಸುತ್ತೆಳನಗೆಯನಾ ಭಗೀರಥಗೆಂದ |
ನೆನಿಸು ಮಾನ್ಯನೊ ಧನ್ಯ ರಾಜರ್ಷಿ ಸತ್ಯನಿಧಿ |
ನಿನಗೆಣೆಯೆ ಪದಿನಾಲ್ಕುಲೋಕದೊಳ್ಗಣಿಸುವರೆ ಧೈರ್ಯಸತ್ಕೀರ್ತಿಗಳಲಿ || (87)

ಪರಮಪಾವನಗಂಗೆ ಹರನ ಮಕುಟಾಗ್ರದಿಂ |
ಧರೆಗಿಳಿದು ನಿಜವಂಶಭವರು ಕೆಡೆದಿಹ ನೆಲದಿ |
ಪರಿದ ಮಾತ್ರದಿ ದಿವ್ಯಸೌಂದರ್ಯಯುತರಾಗಿ ವಿರಜಾಂಬರಗಳನುಟ್ಟು ||
ಸಿರಿಕರದ ಸಗ್ಗಮಂ ಸಾರಿದರು ಸುರತಟಿನಿ |
ಧರೆಯೊಳಿಪ್ಪನ್ನೆಗಂ ಸಕಲವೈಭವದಿಂದ |
ಸುರರಂತೆ ಸುಖದಿಂದಲಿರ್ಪರಿದು ನೆಲೆ ಕೇಳು ನರನಾಥಮುಕುಟಮಣಿಯೆ || (88)

ಅಘಹರಸ್ರವಂತಿಯಂ ತರುವ ಯತ್ನದೊಳಿರ್ದು |
ಸಗರನಳಿದುಂ ಪೋಗೆ ಮೊಮ್ಮನತಿಭರದಿಂದ |
ಮಿಗೆ ತಪವನೆಸಗಿ ಸರಿಯಲ್ಕಾತನಾತ್ಮಜಂ ಸಕಲಸದ್ಗುಣಮಂದಿರ ||
ಬಗೆಬಗೆಯೊಳಾಲೋಚಿಸುತ್ತೆ ಕೈಗೂಡದಲೆ |
ಮುಗಿಯೆ ನೀ ಬಿರುದಾಂಕ ಪಿಡಿದ ಛಲಮಂ ಬಿಡದೆ |
ಗಗನಧುನಿಯಂ ತಂದು ಸಗರರಂ ಪೊರೆದಾಳ್ದೆ ಸತ್ಕೀರ್ತಿಯಂ ಭುವನದಿ || (89)

ತಪನ ವಂಶೋತ್ತಮನೆ ತಪದಿಂದ ಮತ್ಸಮಂ |
ವಿಪುಲಮತಿ ಪದಿನಾಲ್ಕು ಲೋಕದೊಳ್ಸಾಸಟಿಯು |
ನುಪಮಿಸುವರುಂಟೆ ನೃಪಶಾರ್ದೂಲ ಸದ್ಧರ್ಮಮೂರ್ತಿ ನೀನಾಗಿ ಜಸದಿ ||
ಕೃಪೆಯಿಂದಲುದಿಸಿ ತ್ರೈಲೋಕಗಳ ರಕ್ಷಿಸಿದೆ |
ಸಫಲಮಾದುದು ಪುರುಷರತ್ನ ಸನ್ಮಂದಿರನೆ |
ಯಪರಿಮಿತಕಾಲದೊಳ್ತವನಾಮ ಮಾಂತು ನದಿ ಬೆಳಗಲೀ ಲೋಕದೊಳಗೆ ||

ಆದುದೈ ಸದ್ಗತಿಯು ಪ್ರಪಿತಾಮಹಾದಿಗಳಿ |
ಗೀ ಧರೆಯೊಳುಂ ಕೀರ್ತಿವಂತಮಣಿ ನೀನಾದೆ |
ಸಾದರದಿ ಮಜ್ಜನಂಗೈದು ಪಿತೃತರ್ಪಣಗಳಿತ್ತು ನೀ ಪೋಪುದೆನುತ ||
ಬೋಧಿಸಿಯೆ ಕಮಲಭವ ಗಮಿಸೆ ನಿಜಮಂದಿರಕೆ |
ಭೂಧವಂ ಗಂಗೆಯೊಳ್ಮಿಂದು ಪಿತೃಸಂತತಿಗೆ |
ಮೋದಮುನ್ನಿತ್ತು ಸತ್ರ್ಕಿಯೆಗಳಂ ರಚಿಸಿದಂ ಭೂಸುರರ ವಚನವಿಡಿದು || (91)

ನಗರಕೈತಂದನಲ್ಲಿಂದಾ ಭಗೀರಥಂ |
ಬಗೆಬಗೆಯ ಜನರೆಲ್ಲ ಬಂದು ಕಾಣಿಕೆಯಿತ್ತು |
ಮಿಗೆ ಪೊಗಳಿ ಸಂತಸದಿ ಹಿಗ್ಗುತಿರೆ ಧರ್ಮದಿಂ ರಾಜ್ಯಪಾಲನೆಗೈಯಲು ||
ಜಗತಿಯೊಳು ಬಾಳ್ದನೆನಲಮರೇಂದ್ರನಂದಿನಿಂ |
ಸುಗುಣೆಸುರನದಿಯು ಭಾಗೀರಥೀನಾಮಕದಿ |
ಸೊಗಯಿಸುವುದಿದು ವೇದಸಮ್ಮತವು ಶ್ರೀರಾಮಚಂದ್ರ ಸದ್ಗುಣಸಾಂದ್ರನೆ|| (92)

ಭಾಗೀರಥಿಯ ದಿವ್ಯಚಾರಿತ್ರೆಯಂ ಭಕ್ತಿ|
ಭಾಗದಿಂ ಬರೆದೋದಿ ಕೇಳುವ ಮಹಾತ್ಮರ್ಗೆ |
ಭೋಗಮಾಯುಷ್ಯಮಭಿವೃದ್ಧಿ ಸತ್ಕೀರ್ತಿಯುಂ ಸಂತಾನಸೌಭಾಗ್ಯಮುಂ ||
ಭೋಗಿಭೂಷಣಮಿತ್ರ ಶ್ರೀ**ರಾಮಪುರದರಸ** |
ರಾಗದಿಂದೊಲಿದಿತ್ತು ರಕ್ಷಿಸುವನನುದಿನದಿ |
ರಾಗನಿಃಶ್ರೇಯಸಂ ದೊರೆಕೊಂಬುದಿದು ಸತ್ಯ ರಾಮಮೇಘಶ್ಯಾಮನೆ || (93)

ಸಂಧಿ 14 ಕ್ಕಂ ಪದಗಂಳ್ 838

---

# ಹದಿನೈದನೆಯ ಸಂಧಿ

ಸೂಚನೆ॥ ರಕ್ಷಯಾತ್ಮಕರಾಮ ಮುದದಿಂ ವಿಶಾಲಶುಭ ।
ಲಕ್ಷಣಾನ್ವಿತಕಥೆಯ ಲಾಲಿಸುತ ತವಕದಿಂ ।
ದಕ್ಷಪಾದಾಶ್ರಮವ ಸಾರಿದ ಮುಮುಕ್ಷುಜನರೊಡವೆರೆದು ಮೋದದಿಂದೆ॥

ಶಿವೆ ಕೇಳು ಕೌಶಿಕಮುನೀಂದ್ರ ಪೇಳಿದ ದಿವ್ಯ ।
ಶಿವತರದ ಕಥೆಯನಾಲಿಸಿ ರಾಮು ಸಂತೋಷ ।
ಲವಲವಿಕೆಯಿಂ ತಪೋರಾಶಿಯೊಡನಿಂತೆಂದ ಭವದೀಯ ಕರುಣದಿಂದೆ ॥
ಭವಬಂಧಹರಕಥಾಶ್ರವಣದಿಂದಲಿ ರಾತ್ರಿ ।
ಲವಮೆನಲ್ಪೋದುದಭ್ಯು[1](ದಿತ)ಮಾದಂ ಸೂರ್ಯ ।
ತವಕದಿಂದಾಹ್ನಿಕವನೆಸಗಿ ಗಮಿಸಲ್ವೇಳ್ಕುಮೆಂದು ವಿಜ್ಞಾಪಿಸಲ್ಕೆ ॥ (1)

ರಾಮನಾಡಿದ ನುಡಿಯನಾಲಿಸುತ ಕೌಶಿಕನು ।
ಪ್ರೇಮದಿಂ ಜಾಹ್ನವಿಯ ದಾಂಟ ಸಂಯಮಿಜನ-।
ಸ್ತೋಮದೊಡವೆರೆದು ಕುಳ್ಳಿರಲಾ ರಘೂದ್ವಹಂ ಮುನಿತಿಲಕಗಿಂತೆಂದನು ॥
ಸೋಮಸೂರ್ಯೋಪಮವಿಚಿತ್ರಪ್ರಕಾಶನು-।
ತ್ತಾಮನಗರೀವಿಭವದಧಿನಾಥನೆಂದೆನಿಸಿ ।
ರಾಮಣೀಯಕಮಾಗಿ ರಾಜಿಸುವ ಪತ್ತನಮಿದಾರದೆನಗುಸುರ್ವುದೆನುತ ॥ (2)

ಎನೆ ಪೇಳ್ದ ಕೌಶಿಕಂ ಜನನಾಥ ಕೇಳಿಲ್ಲಿ ।
ಬಿನದಮೆನೆ ಕೃತಯುಗದೊಳಿರ್ದಸುರ್ರಾಸುರ-।
ರ್ಗನಿತರೊಳು ಸುಮನಸಯೋರ್ಚಿಸಿದರ್ಕ್ಕೆ ತಮ್ಮ ಕುಲಕೆ ರುಜೆಮೃತಿಪೊದ್ದದ ॥
ಘನತರೋಪಾಯಮಂ ನೆನೆವನಿತರೊಳ್ ಬುದ್ಧಿ ।
ಜನಿಸಿದುದು ಕ್ಷೀರಾಬ್ಧಿಯಂ ಕಡೆದು ದಿವ್ಯರಸ ।
ವನು ಪಡೆಯಬೇಕೆಂದು ಸುರರೆಲ್ಲ ರಕ್ಕಸಸಹಾಯಗೈದಾಗ ಜವದಿ ॥ (3)

ಮಂದರವ ಕಡಗೋಲಮಾಡಿ ವಾಸುಗಿಯನುಂ ।
ಬಂಧಿಸಿಯೆ ನೇಣಂತೆ ದೈತೇಯದೇವತತಿ ।
ಯಂದು ಮಥಿಸಲು ವರುಷಸಾಸಿರದಿ ಸಂಭೂತನಾದ ಧನ್ವಂತ್ರಿ ಬಳಿಕ ॥
ಪಿಂದೆ ಸಂಭವಮಾದರರುವತ್ತುಕೋಟಿ ಪೂ-।
ರ್ಣೇಂದುವದನೆಯರಪ್ಸರಾಂಗನೆಯರವರೊಡನೆ ।
ಬಂಧುರದಲುದಿಸಿದರ್ ಚೇಟಿಯರಸಂಖ್ಯಾತ ಕೌತುಕವನೇನೆಂಬೆನು ॥ (4)

---

1 ದುಭ್ಯದಯಮಾದಂ

ಒಪ್ಪದಿಂ ಬರಲಪ್ಸರಾಂಗನೆಯುರವರುಗಳ |
ನೊಪ್ಪಿಕೊಳ್ಳದೆ ಸುರಾಸುರರೀಕ್ಷಿಸುತ್ತಿರಲ್ |
ಒಪ್ಪದಿಂ ವರುಣಸುತೆ ಕೆಲಸಾರಿ ಪತಿಯನ್ನು ಪುಡುಕುತ್ತೈತರೆ ಬೇಗದಿ ‖
[1]ಒಪ್ಪದಾದರು ದಿತಿಜರಾದಿತೇಯರು ಮನದೊ |
ಳೊಪ್ಪಿಕೊಳೆ ಸುರರಾದರಸುರರಾದರುದನುಜ |
ರೊಪ್ಪೆ ವಾರುಣಿಯ ಸಂಗ್ರಹದಿಂದ ದೇವತೆಯುರುರುಹರುಷಗೊಂಡರಾಗ ‖ (5)

ಬಳಿಕಲುಚ್ಚೈಃಶ್ರವಂ ಮಣಿರತ್ನಕೌಸ್ತುಭಂ |
ಪೊಳೆವ ಪೀಯೂಷಮುಂ ಸಂಭವಿಸಲದರಿಂದ |
ಕೊಳುಗುಳಂ ಸಂಭವಿಸೆ ಸುರರಿಂದ ದೈತ್ಯರುಂ ಮಡಿದರತ್ಯದ್ಭುತಮೆನೆ ‖
ಜಲಜಾಕ್ಷ ಮೋಹಿನೀಮಾಯಾನುಸಾರದಿಂ |
ಪೊಳೆಯೆ ಸುಧೆಯನ್ನೊಯ್ಯೆ ಬೆನ್ನಟ್ಟದಸುರರ- |
ನ್ನಿಳೆಯೊಳಗೆ ಕೂರಿಸಿದ ಪುರಕೋರ್ವರಿಲ್ಲದಿರಲೇನೆಂಬೆನಚ್ಚರಿಯನು ‖ (6)

ಸುತರಳಿದ ಪರಿಯನುಂ ನೋಡಿ ದಿತಿ ಕೋಪದಿಂ |
ಪತಿಯೆಡೆಗೆ ಬಂದು ಬಂಧುರ ಶೋಕಜಲಗಳಿಂ |
ಕ್ಷಿತಿಯು ಪಂಕಿಲಮೆನಿಸುತಿಂತೆಂದಳಮರೇಂದ್ರನಿಂದಾದ ದುಷ್ಕಾರ್ಯಮ ‖
ಯತಿಪತಿಯೆ ತನ್ನ ಕುಲವರ್ಧನೆಗೆ ಶಕ್ರನಂ |
ಹತಗೊಳಿಸಲೊರ್ವ ಸುತನಂ ಕೊಡುವುದೆನೆ ದಯದಿ |
ದಿತಿ ನಿಯಮದಿಂದಿರಲ್ ನಿನಗಪ್ಪನಾತ್ಮಭವನೆನುತ ಬೆಸನಿತ್ತನೊಲಿದು ‖ (7)

ವರತಪೋಧನಪೇಳ್ದ ತೆರದಿ ಧರ್ಭೆಯ ನೆಲದಿ |
ಪರಪಿ ಶುಚಿಯಾಗಿ ತಪದಿಂದಿರಲ್ಕಂಡಾಗ |
ಸುರರೊಡೆಯನಗ್ನಿಕುಶಕಾಷ್ಠಫಲಮೂಲಗಳ ತಂದೀವುತುಪಚರಿಸುತೆ ‖
ಪರಿಪರಿಯ ಶೈತ್ಯೋಪಚಾರಶತಕಂಗಳಿಂ |
ಕರುಣಪುಟ್ಟುವ ತೆರೆದಿ ಕಾಯ್ದು ಬಿಡದರೆನಿಮಿಷ |
ಮರೆಯುದತಿಭಕ್ತಿಯಿಂ ಭಾವಿಸುತಲಿರ್ದನಾ ದಿತಿಯ ಸಮುಖವನಗಲದೆ ‖ (8)

---

1 ದಿತೇಃಪುತ್ರಾ ನತಾಂ ರಾಮ ಜಗೃಹುರ್ವರುಣಾತ್ಮಜಾಂ ‖
ಅದಿತೇಸ್ತು ಸುತಾ ವೀರ ಜಗೃಹುಸ್ತಾಮನಿಂದಿತಾಂ ‖ ೩೭ ‖
ಅಸುರಾಸ್ತೇನ ದೈತೇಯಾಸ್ಸುರಾಸ್ತೇನಾದಿತೇಸ್ಸುತಾಃ ‖
ಹೃಷ್ಟಾಃ ಪ್ರಮುದಿತಾಶ್ಚಾಸನ್ ವಾರುಣೀ ಗ್ರಹಣಾತ್ಸುರಾಃ ‖ ೩೮ ‖
(ವಾ. ರಾ.—೪೫ ನೆಯ ಸರ್ಗ)

ಪಾದಸಿಂಹಾಸನಂ ಗೈದು ಕೇಳಿದುದಿತ್ತು |
ಮೋದಗೊಳಿಸಲ್ದಿತಿಯನೇಕಸಂತೋಷದಿಂ |
ಭೇದವನ್ನುಳಿದು ಪ್ಯೆಗಣ್ಣಡನೊನಿಂತೆಂದಳಣುಗ ಮಾರೀಚಿ ದಯದಿ ॥
ಸಾದರದೊಳೆನಗೆ ವರಮಿತ್ತ ತ್ರಿಜಗದ್ವಿನುತ |
ನಾದ ಸುತನಪ್ಪ ಸಾಸಿರವರುಷ ಶುಚಿಯಿಂದ |
ಬೋಧಯುತೆಯಾಗಿ ತಪಮೆಸಗೆಂದೊಡಾಂ ಗೈದೆನತಿಘೋರತರದ ತಪವ ॥ (9)

ಸಾಸಿರಕೆ ಪತ್ತಬ್ದನೂನಮಾಗಿಹುದಲ್ತೆ ।
ವಾಸಿಯಿಂ ದಶವರುಷಮಾಗಲುಂ ಸಹಜಾತ ।
ನೈಸೆ ನೀಂ ಕಾಣ್ಬೆ ನಿನಗೋಸುಗಮೊಳೀ ತಪವನೆಸಗಿದೆಂ ಕ್ರೂರತರದಿ ॥
ಲೇಶಪ್ಪುದೆಂದೊರೆದು ದಿತಿಯು ಮಧ್ಯಾಹ್ನದೊಳ್ |
ಪಾಸಿ ದರ್ಭೆಯನದರ ಮೇಲೆ ನಿದ್ರೆಯನಾಳ ।
ಲಾ ಸುದತಿ ಮಸ್ತಕವ ಪಾದಾಗ್ರದೆಡೆಗಿಡಲ್ ಮತ್ತೆ ನಿಂದಾ ಸಮಯದಿ ॥ (10)

ಕಂಡನಮರೇಂದ್ರ ಪಾದಾಗ್ರದೊಳ್ ಮೋಸದಿಂ |
ಮಂಡೆಯನ್ನಿಟ್ಟು ಮಲಗಿರ್ಪ ದಿತಿಯಂ ಕರದಿ |
ಕೊಂಡು ಕುಲಿಶವ ವಿವರದಿಂ ಪೊಕ್ಕ ಮತ್ತವಳ ಗರ್ಭವನ್ನೇಳು ವಿಧದಿ ॥
ಖಂಡಿಸಲ್ ವಜ್ರದಿಂದಾ ಗರ್ಭಮಳುತೆ ಮುಂ |
ಕೊಂಡು ಕೂಗಲು ಶಕ್ರನರಿದನಡಿಗಡಿಗೆ ದಿತಿ |
ಕಂಡು ವಧಿಸಲ್ಬೇಡ ಬೇಡಮೆನಲಲ್ಲಿಂದ ಪೊರಮಟ್ಟನತಿವೇಗದಿ ॥ (11)

ಮಾತೆಯಡಿಗೆರಗಿ ಮಗುಳಿಂತೆಂದ ಪಾಕಾರಿ ।
ರೀತಿ ತಪ್ಪಿತು ತಪಂ ಪಾದಾಗ್ರದೊಳ್ಮಕುಟ ।
ಮಾತಿರಲ್ಕಂಡಾನು ಗರ್ಭಮಂ ಪೊಕ್ಕಲ್ಲಿ ಭೇದಿಸಿದೆನೇಳುಪರಿಯಿಂ ॥
ಈ ತಪ್ಪ ಕ್ಷಮಿಸೆನಲ್ಕಿಂತೆಂದಳೆನ್ನಿಂದ |
ಜಾತಮಾದಪರಾಧಮಿದಕೆ ಚಿಂತಿಸಲೇಕೆ |
ತಾತ ಮದ್ವಚನಮಂ ಸಫಲಮೆಂದೆನಿಪುದೆನಲಿಂದ್ರ ಸಮ್ಮತಿಗೊಂಡನು ॥ (12)

ತನಯ ಲಾಲಿಸು ದೇವಿನಿಭರಾಗಿ ನಿಜಪುತ್ರ |
ರನುವಿನಿಂದೊರ್ವ ಕಮಲಜಲೋಕದೊಳ್ಚರಿಸ |
ಳನುದಿನದೊಳಿಂದ್ರಲೋಕದೊಳೊರ್ವನಾಗಸದೊಳೊರ್ವನೀ ಪರಿಯಿಂದಲಿ ॥
ನಿನಗೆ ಹಿತಮಾಗಿ ನಾಲ್ವರು ಚರಿಸಲೀ ವಿಧದ |
ಲನುದಿನಂ ಸಪ್ತಸಂಖ್ಯಾಮರುತ್ತುಗಳೆನಿಸಿ ।
ಯಿನಿತು ಕೃಪೆಗೈಯವೇಳ್ಕೆನಲಿಂದ್ರ ಮಾತೆಯಡಿಗೆರಗಿ ಮಗುಳಿಂತೆಂದನು ॥ (13)

ದೇವಿ ನಿಜಚಿತ್ತದೊಳಗಾವ ಪರಿಯಲ್ಲಿರ್ಪು |
ದಾ ವಿಧವು ಕೈಸಾರಲೆಂದೊರೆಯಲತಿಹರ್ಷ |
ಮೋವಿದಳ್ಬಿತಿಯನಿತು ವೃಂತ್ತಾಂತವಾದುದೀ ನೆಲದಿ ಮುಂದೊರೆವೆ ಕಥೆಯ ॥
ಕೋವಿದರೊಳಧಿಕನಿಕ್ಷ್ವಾಕುರಾಜನ ತನಯ |
ಪಾವನಚರಿತ್ರ ಸಂಭವಸಿದ ವಿಶಾಲಾಖ್ಯ|
ನಾ ವಿರಿಂಚಿಪ್ರಮುಖನುತನಿಂದ ನಿರ್ಮಿತಂ ನಗರಮಿದು ರಘುಕುಲೇಶ ॥ (14)

ವರತನಯನಾದಂ ವಿಶಾಲನಿಗೆ ಸಂತೋಷ |
ಕರ ಹೇಮಚಂದ್ರನಾತಗೆ ಸುಚಂದ್ರಂ ನೃಪನ |
ತರಳ ಧೂಮ್ರಾ[1](ಶ್ವ) ಸೃಂಜಯನಾತನಿಂದಾದ ಸಹದೇವನಿಂ ಕುಶಾಶ್ವ ॥
ಧರಣಿಪತಿಯಿಂ ಸೋಮದತ್ತನಾ ಭೂಪತಿಯ |
ತರುಣ ಕಾಕುತ್ಸ್ಥನಾತನ ತನಯ ಸುಮ[2](ತಿ)ಯುಂ |
ಇರುವನೀ ಪುರದೊಳತಿಧಾರ್ಮಿಕಂ ರಾಜರ್ಷಿ ಮಿತ್ರಸಮ ವಿಕ್ರಮದೊಳು ॥ (15)

ಈ ಮಹಾಪಟ್ಟಣದೊಳಿರುತಿರ್ದ ಮುನಿಜನ-|
ಸ್ತೋಮದೊಡನೈದುವ ದಿವಾಕರೋದಯವಾಗೆ |
ರಾಮ ಮಂಗಳನಾಮನೆನೆ ಕುಶಿಕನಂದನನ ನುಡಿಗೆ ಸಂತೋಷದಿಂದ |
ಆ ಮಹಾತ್ಮರು ಬರುತಲಿರಲಿತ್ತ ಸುಮತಿ ಸು-|
ಪ್ರೇಮದಿಂ ಬರವನೀಕ್ಷಿಸಿ ನಿಖಿಲಮುನಿಜನ-|
ಸ್ತೋಮವಂ ಪೂಜಿಸುತ ಭಕ್ತಿಯಿಂ ಕರೆದೊಯ್ದು ನಿಜನಿಲಯಕತಿವಿನಯದಿ ॥

ಪರಮಸತ್ಕಾರಮಂ ಕೊಂಡು ಕುಳ್ಳಿರ್ದು ಭೂ |
ಸುರರ ಬಾನೆಡೆಯ ರಾಜಿಪ ಚಂದ್ರಸೂರ್ಯರೆನೆ |
ಸಿರಿಕರದೊಳೆಸೆವ ಡಿಂಭಕರನೀಕ್ಷಿಸಿ ಸುಮತಿ ಬೆಸಗೊಂಡನಾ ಮುನಿಪನ ॥
ಹರಿವೃಷೋಪಮಶೌರ್ಯ ಗಿರಿಗಳೆಂಬೊಲು ಧೈರ್ಯ |
ಶರಧಿನಿಭಗಾಂಭೀರ್ಯವಾಂತ ಮಾಣವಕರಾರ್ |
ಶರಚಾಪಯುತರಾಗಿ ತೋರ್ಪರಿದ ವಿಸ್ತರಿಪುದೆನೆ ಮೌನಿಯಿಂತೆಂದನು ॥ (17)

* ಸಾರಸಾಸನ ಮುಖ್ಯಸುರರೆಲ್ಲರುಂ ಧರೆಯ |
ಭಾರಾಪಹರಗೈಯಲೋಸುಗಂ ಶ್ರೀಹರಿಯ |
ಕಾರುಣ್ಯಮಂ ಗಳಿಸಲುರಗನರಿಧರಗೂಡಿ ಮಾನುಷ್ಯರೂಪವನ್ನು ॥
ಚಾರುತರಮೆನೆ ಧರಿಸಿ ದಶರಥಮಹೀಶಗೆ ಕು |
ಮಾರರೆಂದೆನಿಸಲಾಂ ಸಿದ್ಧಾಶ್ರಮದಿ ಮಾಳ್ಪ |
ದಾರಕ್ರತುರಕ್ಷಣೆಗೆ ಯಾಚಿಸಿದೆ ನಾ ನೃಪನ ಮನದಿಷ್ಟವಮಂ ಗಳಿಪಡೆ ॥ (18)

---

1 ಧೂಮ್ರಾಕ್ಷ. 2 ಸುಮನಯಂ

*ಇಲ್ಲಿಂದ ಮುಂದಕ್ಕೆ 40 ನೆಯ ಪದ್ಯದ ವರೆಗೆ ವಿಶ್ವಾಮಿತ್ರನು ಹೇಳುವ ರಾಮ ನಾಮಸ್ಮರಣೆಯ ಮಹತ್ವದ ವಿಚಾರವು ವಾಲ್ಮೀಕಿರಾಮಾಯಣದಲ್ಲಿರುವದಿಲ್ಲ.

ಪರಮಾತ್ಮನೀ ರಾಮಭದ್ರ ಕೃಪೆಯಿಂದೆನ್ನ ।
ಪೊರೆಯಲ್ಕೆತಂದು ತಾಟಕಿಸುಬಾಹುಗಳನ್ನು ।
ತರಿದಿಟ್ಟು ಯಾಗಪರಿಪಾಲನಂಗೈದು ಯಮಿಜನರನುದ್ಧರಿಸಿ ಬಳಿಕ ॥
ಹರಚಾಪವೃತ್ತಾಂತಮಂ ಕೇಳಿ ಮುನಿಗಳೊಡ ।
ನೆರೆದು ನಿಟ್ಟಿಸೆ ಬಂದನೀ ಮಹಾತ್ಮನ ದಿವ್ಯ ।
ಚರಿತೆಯನ್ನಾವಾತನರಿವಡಳವಪ್ಪುದೀ ಪದಿನಾಲ್ಕು ಲೋಕದೊಳಗೆ ॥ (19)

ನುಡಿಯಬಾರದ ಮಹಾಪಾತಕಶತಂಗಳಿಂ।
ದೊಡನೆ ನಿಷ್ಕೃತಿ ರಘೂತ್ತಮನ ಶುಭನಾಮವನು ।
ನುಡಿದಮಾತ್ರದೊಳಪ್ಪುದಿದು ಸತ್ಯಮೆಂದಡಿಂತೆಂದ ಮುನಿಯೊಡನೆ ಸುಮತಿ ॥
ಕಡುಪಾತಕಕ್ಕೆ ಪ್ರಾಯಶ್ಚಿತ್ತವನ್ನುಳಿದು ।
ಬಿಡುಗಡೆಯದೆಂತಹುದೊ ತಾಪಸೋತ್ತಮ ಪೇಳು ।
ಸಡಗರದೊಳೆಂದು ಧರಣೀಪಾಲ ಬೆಸಗೊಂಡೊಡಿಂತೆಂದ ಯಮಿರಾಯನು ॥ (20)

ಲೇಸನಾಡಿದೆ ನೃಪತಿ ರಾಮಕಥೆಯಂ ಕೇಳ ।
ಲೇಸು ಧನ್ಯನೊ ಮಾನ್ಯನೀ ಮೌನಿಗಣದೊಳಗೆ ।
ವಾಸಿಯಿಂ ಸದ್ಭಕ್ತಿಯಿಂದ ನೀಂ ಬೆಸಗೊಂಡೆ ಸಕಲಶ್ರುತಿತತಿಸಾರವ ॥
ರಾಸಿಗೈದರ್ಥವನ್ನುಸುರುವೆಂ ಪೂರ್ವದಲಿ ।
ಕಾಶಿಯೊಳ್ ನೆರೆದಖಿಳಭೂಸುರರ್ ಶಿವನೆಡೆಯ ।
ವಾಸವಾದ್ಯರು ಮೆಚ್ಚಲತಿಗೋಪ್ಯತರಸಾರದಿರವ ವಿಸ್ತರಿಪೆ ನಿನಗೆ ॥ (21)

ಕರಣತ್ರಯಗಳೊಂದು ಕೂಟ ಕಷ್ಟಂಗಳಂ ।
ಗುರುತರಾಯಾಸ ತನುದಂಡನೆ ನಿರಾಹಾರ ।
ವರಮಂತ್ರಜಪಲೋಪದೋಷಪ್ರಾಯಶ್ಚಿತ್ತ ದೇಶಕಾಲಾದಿಭೇದ ॥
ದೊರೆಕೊಳಲನಾಯಾಸದಿಂ ಮೋಕ್ಷಲಕ್ಷ್ಮಿ ಮುಂ ।
ಬರಿದು ಕೈಸಾರುವುದುಪಾಯಮಂ ನಿನಗೆ ವಿ ।
ಸ್ತರಿಪೆಯೆಲೆ ಭೂಪಾಲ ಕಿವಿಗೊಟ್ಟುಲಾಲಿಪುದು ನೃಪರ ಮಸ್ತಕದ ಮಣಿಯೆ ॥

ಶ್ರೀಶಬ್ದ ಪೂರ್ವದೊಳ್ ಜಯಶಬ್ದ ಮಧ್ಯದ-।
ಭ್ಯಾಸದಿಂ ಜಯಶಬ್ದಮೆರಡು ಸಂಗತದಿಂದು ।
ಮೇಶಜೀವನನಾಮಮಂ ಸ್ಮರಿಸೆ ಮೂರೇಳು ಬಾರಿ ಮುದದಿಂದಲೊಮ್ಮೆ ॥
ನಾಶಮಪ್ಪುವು ಬ್ರಹ್ಮಹತ್ಯಾದಿಪಾತಕದ ।
ರಾಶಿಗಳು ರಾಮವರ್ಣದ್ವಯೋಚ್ಚಾರಣಾ ।
ಧೀಶನಹನಲ್ಲದಿರಲನ್ಯಧರ್ಮಂ ವಿಫಲ ಕಲಿಯುಗದಿ ಕರ್ಮಠರಿಗೆ ॥ (23)

ಪಾರುವರ ವಧೆ ಸುರಾಪಾನ ಮಾಂಸಾಹಾರ ।
ಘೋರ ಗುರುವಂಗನಾಗಮನ ಗೋಹತ್ಯಮಾ ।
ಚಾರಶೂನ್ಯತೆಯಿಂದಲಂತ್ಯಜಗೃಹೋದನದ ಭಕ್ಷಣೆ ಪುಳಿಂದಮ್ಲೇಚ್ಛ ॥
ನಾರಿಯರ ಸಂಗ ತತ್ಸೇವೆ ಸ್ವರ್ಣಸ್ತೇಯ ।
ಮಾರಹರನಿಂದೆ ಜಾತಿಭ್ರಂಶ ಮುಂತಾದ ।
ಘೋರಪಾತಕಿಯಾದರುಂ ರಾಮರಾಮಯೆನಲಘ ಪರಿದು ಮುಕ್ತನಹನು ॥ (24)

ಸತತ ವಿಪ್ರಾಚಾರಮೇಕಾಂತಭಕ್ತಿ ಸಂ ।
ತತಯೋಗಮಭ್ಯಾಸಮುಳ್ಳ ಸತ್ಪುರುಷರ್ಗೆ ।
ಕೃತಕೃತ್ಯರಿಂಗಪ್ಪ ಸದ್ಗತಿ ಮಹಾಪಾಪಮುಪಪಾತಕಂಗಳಿಂದ ॥
ಪತಿತನೇಕಾಂತ ಪಾಪಾಚಾರ ಗೋವಿಪ್ರ ।
ಹತಕನಾದರು ರಾಮರಾಮರಾಮಾಯೆಂದು ।
ಮತಿಯಿಂದ ನೆನೆದರಾ ಗತಿಯಪ್ಪುದಿದು ಸತ್ಯ ಶ್ರುತಿಸಿದ್ಧ ವಸಮತೀಶ ॥ (25)

ರಾಮನೆಂದೊಮ್ಮೆ ನೆನೆದರಿಗಿಂದ್ರಪದಮಹುದು ।
ರಾಮರಾಮಾಯೆಂದೊಡಜಲೋಕ ಸಮನಿಪುದು ।
ರಾಮರಾಮಾರಾಮಯೆಂದಡವ ಶ್ರೀರಾಮನಪ್ಪನಿದು ಸತ್ಯಮರಸ ॥
ರಾಮನಾಮವ ನಿರತ ಪಾಡಿಪೊಗಳುವ ಮಹಿಮ ।
ರೀ ಮಹಿಯೊಳಾವೆಡೆಯೊಳುಂ ಪರಮಪಾವನರು ।
ಕಾಮಿತಫಲಪ್ರದಾಯಕ ಸೋಮನಿಭರಳವೆ ಪೊಗಳೆ ತಚ್ಚಾರಿತ್ರಮಂ ॥ (26)

ಯಾಗಾದಿ ಸಕಲಸತ್ಕರ್ಮಗಳನೆಸಗಿದರು ।
ಬೇಗದಿಂ ರಾಮನಾಮವ ಜಪಿಸೆ ಸಂಪೂರ್ಣ ।
ಮಾಗುವುದೆನುತ್ತ ಶ್ರುತಿತತಿಗಳೊರೆದಪುವಿಲ್ಲದಿರ್ದಡವು ನಿಷ್ಫಲಗಳು ॥
ರಾಗದಿಂದ ಜ್ಞಾನದಿಂದ ಮಾಡಿದ ಪಾಪ ।
ಮಾಗಲೆಲ್ಲಂ ಸ್ಮರಿಸಿದಾಕ್ಷಣದೊಳುಂ ಭಗ್ನ ।
ಮಾಗಿ ಪೋದಪುದಿದಕೆ ಸಂದೇಹಮಿಲ್ಲರಸ ಲಾಲಿಪುದು ಸತ್ಯಮೆನುತ ॥ (27)

ಮಾನಗರ್ವಗಳಿಲ್ಲದನವರತ ಬೆಂಬಿಡದೆ ।
ಸೂನಾಸ್ತ್ರನಯ್ಯನಂ ಪಾಡಿ ಪೊಗಳುವ ಪುರಷ ।
ರೇನ ನುಡಿದರು ಮಂತ್ರ ನಿಂದಡೆಯು ಕೇ[1](ದಾ)ರವಾರಣಾಸಿಗಳೆನಿಪರು ॥
ಏನೆಂಬೆನವರ ಸದ್ದರುಶನದಲಘರಾಶಿ ।
ಮ್ಲಾನಮಪ್ಪುದು ಸಕಲಪುರುಷಾರ್ಥ ಸಿದ್ಧಿಪುದು ।
ಸಾನಂದ ಕೈಸಾರ್ವುದೆಲೆ ರಾಯ ಪೊಗಳಲೆನ್ನಳವೆ ನಾಮಸ್ಮರಣೆಯ ॥ (28)

---

1 ಕೇತಾರ.

ಕೆದರೆ ಕೆಂಜಡೆ ಪುಳಕಮೂಂತಾಗ ಭವಗಳುಂ |
ಪದಪದದೊಳಾನಂದಬಿಂದುಗಳನುಗುಳುತಂ |
ಮುದದಿಂದಲರೆಮುಗಿದ ನಯನ ಪದಿನೈದರಿಂದನುದಿನವು ಪಾಡಿ ಪೊಗಳಿ ||
ಸುದತಿಗಂ ವಿಸ್ತರಿಸಿ ಸುಮ್ಮಾನದಾನಂದ |
ಮೊದವಿದ ಕಟಾಟಂಕನತಿಘೋರಕರ್ಮಿಗಳ(?) |
ಸದಯದಿಂ ಸಲಹಲುಪದೇಶಿಸುವನಂತ್ಯದೊಳ್ಪ್ರಾಣಿಗಳ್ಗಿರದೆ ಮುದದಿ || (29)

ವಾಮೆ ಕರ್ಣದೊಳೊರೆದ ಮಾತ್ರದಿಂ ಪಾತಕ-|
ಸ್ತೋಮಂಗಳುಂ ಪೋಗಿ ಪರಮಪದದೊಳಗೆ ಸು-|
ಪ್ರೇಮದಿಂದಿರ್ಪರಿದು ಸತ್ಯ ರಾಮನ ನಾಮಮಹಿಮೆಯುರುತತ್ವದಿರವ ||
ತಾಮಸರಿಗಜ್ಞರಿಗೆ ಶಠರಿಗತಿದೂಷಕರಿ |
ಗೀ ಮಹಿಯೊಳುಪದೇಶಗೈಯದಿರು ನೀಂ ಧನ್ಯ |
ನಾ ಮಹಿಮೆಯುನ್ನುಸುರಲೆಂತಹುದಪಾರಮಿದ ಬಲ್ಲರಾರ್ಭವನಲ್ಲದೆ || (30)

ಸ್ಮರಿಸಿದಡೆ ಪಾತಕಂಗಳು ಪೋಗಿ ಮೋಕ್ಷಮುಂ |
ದೊರೆಕೊಂಬುದೆಂಬರ್ಥದಲಿ ಸಂಶಯಂಗೊಂಬ |
ನರಗುರಿಗಳವರು ಪರವೀರ್ಯಸಂಭೂತರೆಂದರಿದಪುದು ವಸುಮತೀಶ ||
ಹರಸರಸಿಜೋದ್ಭವಸನತ್ಕುಮಾರಾದಿಯಹ |
ಪರಮಪುರುಷರ್ತಿಳಿದು ನಿರತಜಪಿಸುತ ನಿತ್ಯ |
ನಿರಘರ್ನಿರಾನಂದರೆನಿಸಿದರದಂ ಮರೆದು ಸುಖದಿಂದಲಿರುತಿರ್ದರು|| (31)

ಇಂತೊರೆದು ರಘುಕುಲಲಲಾಮನುರುತತ್ವವ ಸು |
ಮಂತಣದಿ ವಿಸ್ತರಿಸೆ ಸುಮತಿ ಕೌಶಿಕಗಾಗ |
ನಂತಪ್ರಣಾಮಂಗಳೆಸಗಿ ಪೂಜಿಸಿ ಮಗುಳೆ ಶ್ರೀರಾಮಚಂದ್ರಮನನು ||
ಕಂತುಪಿತನೆಂದರಿತು ಕಮನೀಯ ಸ್ವರ್ಣಮಯ |
ವಾಂತ ಸಿಂಹಾಸನದಿ ಕಳ್ಳಿರಿಸಿ ವಿಭವದಿಂ |
ಸಂತಸದಿ ಕರಿತುರಗಭೂಷಣಾಂಬರಗಳನ್ನರ್ಪಿಸಿದ ಭಕ್ತಿಯಿಂದೆ || (32)

ಬಳಿಕ ಬಹುಳೋಪಚಾರಗಳಿಂದ ಶ್ರೀಪಾದ |
ನಳಿನಂಗಳಂ ತೊಳೆದು ನಯವಿನಯಭಕ್ತಿಯಿಂ |
ತೊಳಪ ಕುಸುಮಗಳಿಂದಲರ್ಚಿಸುತ ಪುಳಕದಿಂ ಪೊಗಳಿದಂ ಸಂತಸದೊಳು ||
ನಳಿನಾಕ್ಷ ನಾಕಾರಿಗಳ ಶಿಕ್ಷ ನಿಟಿಲಾಕ್ಷ |
ಜಳಜಜಾನಲತೇಜ ಪುಷ್ಕರಾತ್ಮಕ ಲೋಕ |
ದೊಳಹೊರಗೆ ತೋರುವಾನಂದಮಯರಘುವೀರ ಸಲಹೆನ್ನ ಕರುಣದಿಂದೆ || (33)

ವಿಶ್ವತೋಮುಖನೇತ್ರ ಶ್ರೋತ್ರ ಶುಭಚಾರಿತ್ರ ।
ವಿಶ್ವತೋಭುಜಹಸ್ತ ವಿಷಯಂಗಳಿನ್ನೆತ್ತ ।
ವಿಶ್ವಚೇತನಸಾಕ್ಷಿ ವಿಧುರವಿಗಳೆಸೆವಕ್ಷಿಯುಗ ನಿಗಮುವಪೇಳಿರನ್ನ ॥
ವಿಶ್ವಚೇಷ್ಟಾಲಲಿತ ವಿವಿಧಸದ್ಗುಣಕಲಿತ ।
ವಿಶ್ವದೊಳಹೊರಗಿಪ್ಪ ವಿಧಿಭವಾದಿಗಳಪ್ಪ ।
ವಿಶ್ವಾತ್ಮ ವಿಶ್ವತೇಜೋರಾಶಿ ಕರುಣನಿಧಿ ಕೃಪೆಯಿಂದ ಕಾಯ್ವುದೆನ್ನ ॥ (34)

ತಂತುಗಳಲಿರ್ಪ ಪಟದಂತಖಿಳಲೋಕಂಗ ।
ಳಂತರಮುದಾವನಲ್ಲಿಯೆ ಪ್ರೋತಮಾಗಿರ್ಪು ।
ದಂತರಿಸದಾ ಬಿದಿಯು ನಿರ್ಮಿಸುತ ನಿಗಮುಂಗಳಿತ್ತು ಸಲಹಿದನಾವವ ॥
ತೊಂತುತೊಡರುಗಳಿಲ್ಲದಜ ತನ್ನ ಮಾಯೆಯು-।
ನ್ನಾಂತು ಮಾನಸರೂಪಿನಿಂದ ಬಂದಿಹ ರಮಾ ।
ಕಾಂತ ರಘುಕುಲಚಂದ್ರ ಶರಣರ್ಗೆ ಶರಣನಂ ಮರೆಹೊಕ್ಕೆ ಮಮತೆಯಿಂದೆ ॥ (35)

ದುಷ್ಟಾನ್ನಗಳನುಂಡು ದುರ್ದಾನಗಳ ಪಿಡಿದು ।
ನಿಷ್ಠೆಯನ್ನುಳಿದನ್ಯಜಾತಿಯಲಿ ನಿರತ ಸಂ ।
ದಷ್ಟನಾಗುತೆ ಮಹಾಪಾತಕಗಳಂ ಮಾಡಿ ಮತಿಗೆಟ್ಟ ವಿಪ್ರನಾಗೆ ॥
ಕಷ್ಟದಿಂದಾದೊಡಂ ಮರೆದೊಮ್ಮೆ ನೆನೆಯಲಘ ।
ನಷ್ಟಮನ್ನೈದುತ್ತ ವೈಕುಂಠಪದವಿಯಲಿ ।
ಶ್ರೇಷ್ಠನೆಂದೆನಿಸಿರ್ಪ ರಾಮಚಂದ್ರಮನ ಮರೆಯೊಕ್ಕೆನಾಂ ಮಮತೆಯಿಂದೆ ॥ (36)

ಅನವರತ ಶುಭನಾಮಮಂ ಜಪಿಸಲಘರಾಶಿ ।
ದಿನದಿನದಿ ಮಾಣ್ಬುದಾ ಕ್ಷಣದಿ ಪರಿಹರಮಪ್ಪು ।
ದೆನುತೊರೆಯಲಾಮ್ನಾಯವೆಡೆಬಿಡದೆ ಭಕ್ತಿಯಿಂ ನಿಜದೇಹಭಾವಮುಳಿದು ॥
ಸನಕಾದಿಮೌನಿಗಳು ಸಂತಸದೊಳುಂ ಚಿತ್ತ ।
ವನಜದೊಳ್ನೆಲೆಗೈದು ಬಿಗಿಯಪ್ಪಿ ಬಿಡದಿರ್ಪ ।
ವನಜಾಕ್ಷರಾಮನಂ ಭಜಕಹೃದ್ಧಾಮನಂ ಮರೆಯೊಕ್ಕೆ ಮಮತೆಯಿಂದೆ ॥ (37)

ಕೋಕನದ ನೇತ್ರನಂ ಕೋಮಳ ಸುಗಾತ್ರನಂ ।
ಲೋಕೈಕಮಿತ್ರನಂ ಪ್ರಾಕಟಚರಿತ್ರನಂ ।
ಪಾಕಶಾಸನಮುಖ್ಯದಿಕ್ಪಾಲಕಮಲಜಭವಾದಿಸಂಸ್ತುತಿಪಾತ್ರನಂ ॥
ಏಕಮೇವಾದ್ವಿತಿಯನತಿನಿಷ್ಕಳಂಕನಂ ।
ಶೋಕಮೋಹಂಗಳಿಲ್ಲದ ಬೋಧರೂಪನಂ ।
ಶ್ರೀಕರದ ಶರಚಾಪಧೃತರಾಮಚಂದ್ರನಂ ಮರೆಯೊಕ್ಕೆ ಮಮತೆಯಿಂದೆ ॥ (38)

ಈ ಪರಿಯ ಸುಮತಿ ನಿಜಭಾವ ಸದ್ಭಕ್ತಿಯಿಂ |
ದಾ ಪರಮಪುರುಷ ರಘುಪತಿಯ ನುತಿಗೈದು ಮನ |
ದಾಪದವನುಳಿದು ತನ್ಮಯನಾಗಿಯಿರಲಾಗ ಕಂಡು ದಶರಥನಂದನಂ ||
ಭೂಪ ನೀಂಗೈದ ಸಂಸ್ತವಮೆನ್ನ ಸಂತುಷ್ಟಿ |
ಪ್ರಾಪನಂ ಗೊಳಿಸಿದುದು ಬೇಡಿದುದನಿತ್ತಪೆಂ |
ನೀ ಪ್ರೀತಿಯಿಂದ ಯಾಚಿಪುದೆನಲ್ ಕೈಮುಗಿವುತಿಂತೆಂದ ವಸುಮತೀಶಂ ॥ (39)

ಕಮನೀಯ ಬಾಲಮೂರುತಿ ಕಾಕಪಕ್ಷದಿಂ |
ವಿಮಲಶರಚಾಪಯುತಮೆನಿಪ ಭುಜಯುಗ್ಮದಿಂ |
ಪ್ರಮುದಿತದಿ ಸೌಮಿತ್ರಿ ಸೇವಿಸುತ್ತಿರೆ ಕೆಲದಿ ನೀಲಾಭ್ರನಿಭತೇಜದಿ ||
ತಮುವನುಜ್ಜ್ವಳಿಸಿ ಹೃನ್ನಿಲಯದೊಳ್ಸಂತತಂ |
ವಿಮಲರವಿಕೋಟಿ ಸಂಕಾಶದಿಂದಿರ್ಪಂತೆ |
ಮಮತೆಯಿಂ ದಯೆಗೈಯವೇಳ್ಕು ರಘುಕುಲತಿಲಕ ಭವದೀಯಸುಂದರತರ ||

ಇಂತು ಬಿನ್ನವಿಸೆ ಕಮಲಾಕಾಂತ ದಯದಿಂದ |
ಲಿಂತೆಂದ ಸುಮತಿಯೊಳ್ಸತತ ಮದ್ಭಕ್ತಿ ನಿ-|
ನ್ನಂತರಂಗದಿ ರಮಿಸುತಿರಲೆಂದು ಮುಸುಳಿಸದೊಲೆನುತಭಯಮಿತ್ತು ಬಳಿಕ ||
ಸಂತೋಷದಿಂದಲಾ ರಾತ್ರಿಯಂ ಕಳೆದು ಮುನಿ |
ಕಾಂತನೊಡನೆರೆದು ಮಿ[1](ಥಿ)ಲಾನಾಮಪತ್ತನ-|
ಪ್ರಾಂತದುಪವನಕೆ ನಡೆದರ್ದಿವ್ಯಶುಭಕರದ ಚರಿತೆಗಳನಾಲಿಸುತಲಿ || (41)

ಸಂತಾನಕಲ್ಪಭೂರುಹದ ಸಂತಾನದಿಂ |
ದಂತರಾಂತರಪರ್ಣಪುಟದ ಮಧುಪೂರದಿಂ |
ಕಾಂತಾನುರಾಗದ ಪಿಕಾಂಗನಾಗಾನದಿಂ ನಟಿಪ ಹಂಸೀಯಾನದಿಂ ||
ಸಂತಾಪಹರ ಕಣ್ಗೆ ಕೌತುಕದೊಳೆಸೆಯೆ ಭೂ |
ಕಾಂತಾತ್ಮಜಾತ ಮುನಿವರನ ಬೆಸಗೊಂಡರ-|
ತ್ಯಂತಮಾಧುರ್ಯತರವಚನದಿಂದಿಂತೆಂದ ರಾಮನೊಳ್ಕುಶಿಕಸುತನು || (42)

ಜಗತಿಯೊಳಗುಳ್ಳಖಿಳಪ್ರಾಣಿಗಳ ಸೌಂದರ್ಯ |
ಬಗೆಯಲೊಂದೊಂದು ತಿಲದನಿತನುಂ ಸ್ವೀಕರಿಸಿ |
ಮಿಗೆ ಹಲ್ಯರಹಿತಮೆಂದೆನಿಪಹಲ್ಯಾನಾಮಸುಂದರಿಯುಳಂ ನಿರ್ಮಿಸಿ ||
ಬಗೆಗಗೋಚರಮಾಗಲಾ ಚೆಲುವ ವಿಧಿ ಕಂಡು |
ಸುಗುಣೆಯನ್ನಾರಿಗಿತ್ತಪೆನೆಂದು ಚಿಂತಿಸಲ್ |
ಬಗೆಯರಿದು ಸುರರಾಜನೈತಂದು ಪೊಂಬೊಡೆಯುಗಿಂತೆಂದು ಬಿನ್ನವಿಸಿದಂ || (43)

---

1 ಮಿಥುಲಾ ನಾಮ

ಬಿಡುಗಣ್ಣರೊಡೆತನದ ಬಿಂಕದಿಂದೆನಗಿತ್ತ |
ಪೊಡವಿಯೊಳಗುಳ್ಳಖಿಳರಿಂಗಾನು ಶ್ರೇಷ್ಠನಹೆ |
ನೊಡೆಯ ಕಡುಚೆಲುವಾಂತ ಕಾಮಿನಿಯ ದಯದಿಂದಲೆನಗಿತ್ತರಾನು ಸುಖದಿ ||
ಅಡಿದಾವರೆಗಳನ್ನು ಬಿಡದೆ ಪೂಜಿಸಿ ಸೌಖ್ಯ |
ವಡೆದಿರ್ಪೆನೆನಲಮರನಾಥನೊಡನಿಂತೆಂದ |
ಜಡಮತಿಯೆ ನೀನೀ ನಿತಂಬಿನಿಯ ರಕ್ಷಿಪರಶಕ್ತ ರಕ್ಕಸರ ದೆಸೆಯಿಂ || (44)

ಖಳರು ಮಾಯಾಬಲಸಮನ್ವಿತರು ಕುಹಕರೀ |
ಲಲನೆಯಿಂದಮನರ್ಥ ಬಪ್ಪುದಲ್ಲದೆ ಮಾಣ |
ದೆಲವೊ ಪೋಗೆನ್ನಲಾ ಪಾಕಶಾಸನ ರತಿಯ ಕಾಂಕ್ಷೆಯಂ ಬಿಡದೆ ಮರುಗಿ ||
ನಿಲಯಕೈತರಲಿತ್ತ ಯೋಚಿಸುತ ತನ್ನೊಳಗೆ |
ಜಲಜಾಸನಂ ಬೇಗ ಕರಸಿಯಾ ಗೌತಮನ |
ಲಲಿತಭಾರತಿಯಿಂದಲುಪಚರಿಸಿ ಕಾಮಿನಿಯ ಕೊಟ್ಟು ಕಳುಪಿದ ಪ್ರೇಮದಿ ||

ವಿರತಿಯಿಂದಾ ಮೌನಿ ವಿಧಿಯುಕ್ತ ಮಾನಿನಿಯ ।
ಕರೆತಂದು ನಿಜತಪೋವನದೆಡೆಯಲಿಟ್ಟು ತ-|
ನ್ನುರುತಪೋಕಾಂಕ್ಷೆಯಿಂದಿರ್ದನಲ್ಲದೆ ತರುಣಿಯಾ ಕೈಯ ಪಿಡಿಯಲಿಲ್ಲ ||
ಪರಿಚರ್ಯದಿಂದಲೀ ಕಾಂತೆ ಕೆಲಕಾಲವಿೂ |
ಪರಿಯಲಾತನ ಚಿತ್ತವೃತ್ತಿಯಂ ಗಳಿಸಲ್ಕೆ |
ಸರಸಿಜಾಸನ ಬಂದು ಪರಿಣಯಂಗೈದಿತ್ತನಕ್ಷಪಾದಗೆ ಸುತೆಯನು || (46)

ಸುರಪನಜಲೋಕದೊಳಹಲ್ಯೆಯಂ ನೋಡಿ ಪಿಂ |
ದಿರುಗಿದಂದಿಂ ಸ್ಮರನ ಶರಬಾಧೆವೆಗ್ಗಳಿಸೆ |
ಪರಿಪರಿಯ ಚಿಂತೆಯಿಂ ಮುಂಗಾಣದೈತಂದು ಗೌತಮಾಶ್ರಮದ ಪೊರೆಗೆ ||
ವರಮೌನಿಯಾ ಬನವ ಪೊರಡದಿರಲಾತಂಗೆ |
ದೊರೆಕೊಳದೆ ಸಮಯ ಕೆಲಕಾಲ ತನ್ನೊಳ್ ತಾನೆ |
ಕರಗಿ ಚಿಂತಿಸುವನಿತರೊಳಗೊಂದುಪಾಯಮಂ ನೆನೆದನನ್ಯರ್ತಿಳಿಯದೊಲ್ || (47)

ಮಗುಳೊಂದು ದಿನ ಮಧ್ಯರಾತ್ರೆಯೊಳ್ ಕುಕ್ಕುಟದ |
ಬಗೆಯಿಂದಲೊದರಲಾ ಮೌನಿ ಸ್ನಾನಕ್ಕೈದೆ |
ಮಿಗೆ ಸಂತಸದೊಳಿಂದ್ರ ಪೊಕ್ಕನಾಶ್ರಮವನ್ನು ಕಾಮಪರಿತಾಪದಿಂದ ||
ಜಗುಳಿದಂತಃಕರಣದಿಂದಹಲ್ಯೆಯ ನೋಡಿ |
ಸುಗುಣೆ ಮತ್ಪ್ರಾಣರಕ್ಷಣೆಗರಸಿಯಾಗಿಯೀ |
ಜಗತಿಯೊಳಗಮರೇಂದ್ರನಾಮಮಿರ್ಪಂತೆ ನೀಂ ದಯೆಗೈಯವೇಳ್ಕುಮೆನಲು || (48)

ರುತುಕಾಲಮಂ ಮೀರಬಾರದೆಂದಾಂ ಬಂದು |
ರತಿಯಿಂದ ರತಿಪತಿಯ ಕೇಳಿಯಂ ಬಯಸಿದೆಂ |
ಕ್ಷಿತಿಯ ಜನರಂತಲ್ಲವಿಂದ್ರನೆನ್ನಂ ನೋಡು ಸುಕಟಾಕ್ಷದಿಂದೆನ್ನಲು ||
ಸತಿಯೊಡಂಬಟ್ಟಳಮರೇಶನೈತಂದನೆಂ |
ಬತಿಶಯದಿ ಸುರತಮನ್ನಿತ್ತು ಸಂತೋಷ ಸಂ |
ತತಿಯ ಪೆರ್ಚುಗೆಗೈದಳೇನೆಂಬೆನಚ್ಚರಿಯನಾ ಸತಿಯ ದುಶ್ಚರ್ಯಮಂ || (49)

ಸುರರಾಜ ಮೌನಿಬಹನೆಂಬ ಭಯದಿಂ ಬೇಗ |
ಪೊರಮಡಲ್ಕಾಶ್ರಮವನಿತ್ತ ಗೌತಮ ಪೋಗಿ |
ಸುರನದಿಯ ನಿಟ್ಟಿಸಲ್ ನಿದ್ರೆಯಿಂದಿರೆ ಮರಳಿ ಬರೆ ಮುಂದೆ ಮಾರ್ಗದಲ್ಲಿ ||
ಧರಿಸಿ ಯತಿವೇಷಮಂ ಸುರತಸುಖವನ್ನಾಂತು |
ಬರುವ ಪಾಕಾರಿಯಂ ಕಾಣಲ್ಕೆ ಕಂಗಳೊ-|
ಳ್ಸುರಿಯಲಿಂಗಳಗಳತಿಭಯದಿಂದ ಮೂಲೋಕ ಕಂಪಿಸಿತು ಕೋಪಭರಕೆ|| (50)

ಕೆಂಡಗಳ ಕರೆವುತಕ್ಷಿಯೊಳಕ್ಷಪಾದನಾ-|
ಖಂಡಲನೊಳಿಂತೆಂದನೆಲೆ ದುರಾತ್ಮಕ ನೀಚ |
ಕುಂಡ ಮದ್ವೇಷಮಂ ಧರಿಸಿ ನೀನೀ ಪರಿಯ ಕ್ರೂರಕರ್ಮಕ್ಕೆಳಸಿದೆ ||
ಕೆಂಡಮಂ ಕುಸುಮಮೆಂದೆನುತಲಭಿರತಿಯಿಂದ |
ಮುಂಡೆಯೊಳ್ಮಡಗಿದೆಯೊ ಕಪಟದಲಿ ಪರಸತಿಯ |
ಕೊಂಡೆ ವಿಪ್ರಾಂಗನಾಸಂಗಮಾಯುರ್ಭಂಗಮೆಂದರಿಯದಾದೆ ಬಳಿಕ || (51)

ಯೋನಿಯಂ ಬಯಸಿ ನೀನೈತಂದ ಕತದಿಂದ |
ಯೋನಿಗಳ್ನಿಜಗಾತ್ರದಲ್ಲಿ ದಶಶತಮಾಗಿ |
ನೀನನಾಯಾಸದಿಂ ಶತ್ರುವಿನ ವಶನಾಗಿ [1](ಮುಷ್ಕದ್ವಯಂ ಪೋಗಲು) ||
ಹೀನನಂದದಿ ಚರಿಪುದೆಂದು ಶಪಿಸುತ ತಪಸಿ |
ಮಾನಿನಿಯ ನಿಟ್ಟಿಸುತ ಕೋಪದಿಂದಿಂತೆಂದ |
ಸೂನಾಸ್ತ್ರಕೇಳಿಯಿಂ ಪರಪುರುಷನೊಳ್ಬೆರದೆ ಸದ್ಧರ್ಮಪಥವನುಳಿದು || (52)

* ಪತ್ತುಸಾವಿರ ವರುಷ ಪಾಷಾಣರೂಪಿನಿಂ |
ತುತ್ತನುಳಿದತಿಶೀತಘರ್ಮಬಾಧೆಯ ತಾಳ್ದು |
ಬಿತ್ತರದಲಶ್ಮಶಾಯಿನಿಯಾಗಿ ತಪದಲಿರೆ ಸಪ್ತಾಶ್ವವಂಶನೃಪರ ||
ಉತ್ತಮಶ್ರೀರಾಮಚಂದ್ರನೈತರೆ ಪಾದ |
ದೊತ್ತಿನ ರಜಃಸ್ಪರ್ಶಮಾಗಲಘರಾಶಿಗಳ |
ನೊತ್ತಂಗಳೋಡಿ ಪೂತಾಂಗಳಹೆ ಪೋಗೆಂದು ಶಾಪವನ್ನಿತ್ತು ಬಳಿಕ || (53)

---

1 ಮುಷ್ಕೋಂಡಕೋಶಪೋಗಿ ||

* ವಾಲ್ಮೀಕಿರಾಮಾಯಣದಲ್ಲಿ ಗೌತಮನು ಅಹಲ್ಯೆಗೆ 'ಭಸ್ಮಶಾಯಿನಿಯಾಗು' (ವಾಯು ಭಕ್ಷಾ ನಿರಾಹಾರಾ ತಪ್ಯಂತೀ ಭಸ್ಮಶಾಯಿನೀ ||) ಎಂದು ಶಪಿಸಿದಂತೆ ಹೇಳಿದೆ.

ಪ್ರಾಲೇಯಗಿರಿತಟವ ಸಾರಿದಂ ಗೌತಮ ನಿ |
ರಾಲಸ್ಯದಿಂದತ್ತಹಲ್ಯೆ ಮುನಿ ಪೇಳ್ದಂತೆ |
ಜೋಲಿದಳ್ಬೂತಳಕೆ ಪಾಷಾಣರೂಪಾಗಿ ಮಾನುಷಾಕೃತಿಯನುಳಿದು ||
ಮೂಲೋಕವಂದ್ಯ ನಿನ್ನಂಘ್ರಿಸಂದರುಶನದ |
ಶೀಲಾಭಿಕಾಂಕ್ಷೆಯಿಂದಿರ್ಪಳೀ ಸುದತಿಯಂ |
ಪಾಲಿಸುವುದೆಂದು ವಿಶ್ವಾಮಿತ್ರಮುನಿತಿಲಕ ಪೇಳಿದಂ ಪ್ರೀತಿಯಿಂದೆ || (54)

ಶತಮನ್ಯುಕೃತಚರಿತ್ರೆಯನಹಲ್ಯೆಯು ಶಾಪ |
ಹತಕಳಾದೆಲ್ಲ ವೃತ್ತಾಂತಮಂ ವಿಸ್ತರಿಸಿ |
ಯತಿಚಕ್ರವರ್ತಿ ಪೇಳಿದ ರಘುಕುಲೋತ್ತಮಂಗೆಂದು ಹರ ತನ್ನರಸಿಗೆ ||
ಅತಿಶಯದೊಳುಸುರಿದಂ ಶ್ರೀ**ರಾಮಪುರದ** ಶ್ರೀ |
ಪತಿಯ ಪದಸೋಂಕಿನಿಂದಘಪೋಗಿ ಪ್ರಸ್ತರಂ |
ಸತಿಯಾದ ಕಥೆಯ ಮೃದುನುಡಿಯಿಂದ ಋಷಿನಿವಹಕರುಪಿದಂ ಸೂತ ಮುದದಿ||

ಸಂಧಿ 15 ಕ್ಕಂ ಪದಂಗಳ್ 893

---

# ಹದಿನಾರನೆಯ ಸಂಧಿ

ಸೂಚನೆ || ಸುರಮೌನಿಗಳ ಚಿತ್ತದಿರವೆನಿಪ ಶುಭಚರಣ |
ದರುಶನದಿ ಶಿಲೆಯ ಪುತ್ತಳಿಯ ಮನುಜಾಕೃತಿಯ | [ನೊಡನೆ ||
ವಿರಚಿಸಿ ರಘೂತ್ತಮಂ ಮಿಥಿಲಾಪುರವ ಸಾರ್ದ ಗಾಧಿಸಂಭೂತ

ಹೈಮವತಿ ಕೇಳ್ ಪೂರ್ವ ಕಥೆಯ ವಿಸ್ತರಮಾಗಿ |
ರಾಮನಾಲಿಸುತಾಗ ಗಾಧೇಯನೊಡನೆಂದ |
ನಾ ಮಹಾಮುನಿಯ ಶಾಪದೊಳಿಂದ್ರ ಮುಷ್ಕಾಂಡರಹಿತಘೋರಾಕೃತಿಯನು ||
ತಾಮಸದೊಳಾಳ್ದು ಮಗುಳೇಂಗೈದನೆಂಬುದಂ |
ಪ್ರೇಮದಿಂ ವಿಸ್ತರಿಸವೇಳ್ಕೆನಲು ನಗುತ ಮುನಿ |
ಸೋಮನಾನಂದದಿಂದಾ ಕಥೆಯ ವಿವರಿಸಿದ ಸಕಲಋಷಿನಿವಹ ನಲಿಯೆ|| (1)

---

ಇಲ್ಲಿ ಕವಿಯು ಪುರಾಣೋಕ್ತವಾದ ಕಥೆಯನ್ನನುಸರಿಸಿ 'ಪಾಷಾಣರೂಪಿನಿಂ' ಎಂದು ಹೇಳಿರುವನು. ಇಲ್ಲಿನ ಅಹಲ್ಯಾವೃತ್ತಾಂತವು ವಾಲ್ಮೀಕಿರಾಮಾಯಣದಲ್ಲಿರುವುದಕ್ಕಿಂತ ಹೆಚ್ಚು ವಿಸ್ತಾರವಾಗಿದೆ. ಈ ಕಥಾಭಾಗವನ್ನು ಕವಿಯು ಶತಮನ್ಯು(ದೇವೇಂದ್ರ) ಕೃತವಾದ ಅಹಲ್ಯಾಚರಿತ್ರೆಯ ಆಧಾರದಿಂದ ವಿಸ್ತರಿಸಿರುವೆನೆಂಬ ಅಭಿಪ್ರಾಯವು 55ನೆಯ ಪದ್ಯದಿಂದ ವ್ಯಕ್ತವಾಗುವುದು.

ಅಫಲನಾಗಲ್ ಶಕ್ರನತಿವಿಷಾದದೊಳೈದೆ |
ಗುಪಿತದಿಂದೊಂದೆಡೆಯಲಿರಲಗ್ನಿಮೊದಲಾದ |
ತಪಿಸಿಗಳುಸುರರೆಲ್ಲ ಬಂದು ಕುಸ್ತ್ರರಿಸಲ್ಕೆ ದಿವಿಜಪತಿಯಿಂತೆಂದನು ||
ಜಪಸಮಾಧಿಧ್ಯಾನಮುಂ ಕೆಡಿಸಲಾಂ ಪೋಗೆ |
ಕುಪಿತಮಾನಸನಾಗಿ ಮುನಿ ಶಪಿಸೆ ಮದ್ವೃಷಣ |
ವಿಪರೀತಮಾಯ್ತು ನಿಮಗೋಸುಗದೊಳಾ ಯತಿಯ ಸುಕೃತಮುಂ ಸೆಳೆತಂದೆನು ||

ಸುರಕಾರ್ಯಕೆಂದಫಲನಾಗೆ ಕ್ಲೀಬತ್ವಮುಂ |
ದೊರೆಕೊಂಡುದಿನ್ನಿದಕುಪಾಯಮೇನೆಂದು ಬಲು |
ತರದಿಂ ಶತಕ್ರತುವು ಬೆಸಗೊಂಡೊಡಿಂತೆಂದುದಖಿಳಲೇಖಾ[1](ಸಮುದಯ) ||
ಸುರರಾಜ ನೀಂ ದೈನ್ಯಗೊಳಲೇಕೆ ಸಫಲಮು-|
ಪ್ಪುರುಕಾರ್ಯಮಂ ಮಾಳ್ಪೆವೆಂದುಸುರಿ ದಿವಿಜರತಿ |
ತ್ವರಿತದಿಂದೈದಿದರ್ ಪಿತೃದೇವತೆಗಳೆಡೆಗೆಯತಿಹಿತವನಾಚರಿಪಡೆ || (3)

ಯತಿಯ ರೋಷದಲಿ ಸುರಪತಿ ವಿಫಲನಾಗಿರ್ಪ |
ಕೃತಕದಿಂ ಮೇಷಾಂಡಗಳನು ಸಂಕ್ರಂದನಿಗೆ |
ಜೊತೆಗೊಳಿಸಿ ನಮ್ಮೆಲ್ಲರಂ ಸನಾಥರಮಾಳ್ಪುದೆಂದು ಮಗುಳಿಂತೆಂದರು ||
ಕ್ಷಿತಿಯೊಳಾರಾದೊಡಂ ಫಲರಹಿತಮೇಷಮುಂ |
ಗತಿಯಿಂದಮಿತ್ತಡವು ನಿಮಗೆ ಸಂತುಷ್ಟಿಯು-|
ನ್ನತಿಶಯದಲಿತ್ತಪೆನೆನಲ್ಪಿತೃಗಳಾ ಮಾತನೊಪ್ಪಿದರ್ತವಕದಿಂದೆ || (4)

ಜ್ವಲನ ಪೇಳಿದ ವಚನದಿಂದ ಪಿತೃದೇವತೆಗ |
ಳೊಲವಿನಿಂ ಮೇಷಾಂಡಗಳ ಬಿಡೌಜನಿಗೆ ಸಂ |
ಕಲನಗೈಯಲ್ ಸಫಲನಾದ ಸುರಸಂತತಿಯು ಸಂತೋಷಗೊಂಡಿತಾಗ ||
ಜಲಜಾಕ್ಷರಾಮ ಶುಭನಾಮ ನಿನ್ನಯ ಚರಣ |
ದೊಲುಮೆಯನ್ನಾಕಾಂಕ್ಷಿಸಿರುವ ಗೌತಮಮುನಿಯ |
ಲಲನೆಯಂ ಪೂತಳೆಂದೆನಿಸು ಕರುಣಾನಿಧಿಯೆ ಕಪಟಮಾನುಷವೇಷನೆ || (5)

ಕುಶಿಕಸುತನೊರೆದ ವಾಣಿಯ ಕೇಳಿ ಶ್ರೀರಾಮ |
ಶಶಲಾಂಛನಂ ಕರುಣದಿಂದ ಯತಿವರ್ಯಂಗ |
ತಿಶಯವೆನಿಸುವ ಸುದತಿಯಂ ಸಲಹೆ ಮುನಿಜನರೊಳೊಡಗೂಡಿ ವನವ ಪೊಗಲು||
ನಶಿಸಿ ಪೋದುದು ತಮಃಸಂಗ ಪದರಜಸೋಂಕೆ |
ನಿಶಿ ಕುಶೇಶಯಮಿತ್ರ ನಿಟ್ಟಿಸಲ್ಸರಿವಂತೆ |
ವಶವೆ ಪೊಗಳುವಡಂಬುಜಾಸನಾದ್ಯಭವರಿಗೆ ತನ್ಮಹಾಮಹಿಮೆಗಳನು || (6)

---

1 ಲೇಖಾಸಮೂಹ.

ಶ್ರೀರಾಮರಾಮರಾಮಾಯೆಂದು ಜಪಿಸುತಾ |
ಹಾರಾದಿಗಳನುಳಿದು ಶೀತಾತಪಂಗಳತಿ |
ಘೋರಾಹತವನುರ್ಚಿ ನಿರಶನವ್ರತದಿಂದ ಪಾಷಾಣರೂಪಮಾಗಿ ॥
ಸಾರಿ ಭೂತಿಯ ತಪದಿಯಾರಾಧಿಸಲ್ ಸುರೇಂ-|
ದ್ರಾರಿಹರಶುಭಚರಣಸಂಪರ್ಕದಿಂ ಪಾಪ |
ದೂರಳೆಂದೆನಿಸಿ ಮನುಜಾಕೃತಿಯ ತಾಳ್ದು ಬರೆ ಬೆರಗಾಯ್ತು ಯತಿಸಿವಹವು ॥

ಮುಗಿಲೊಡಲನುಳಿದು ವಿದ್ಯುಲ್ಲತೆಯು ಭೂತಳಕೆ |
ಮಿಗೆ ಮೂರ್ತಿಯಂ ತಳೆದು ತೋರ್ಪಂತೆ ವಿಚಕಿಲವ |
ನುಗಿದು ಸೌರಭ್ಯ ಪೂರಸೂಸಿತೋಯೆನೆ ಪೊಳೆವ ರಮಣೀಯರಮಣಿಯಿರವ ॥
ಜಗತಿಯೊಳಗಾವನಭಿವರ್ಣಿಸುವ ಲಾವಣ್ಯ |
ಬಗೆಗಗೋಚರಮೆಂತು ಪೇಳಲಳವಪ್ಪುದಾ | [ಮುಗುಳೆ ॥ (8)
ಸುಗುಣೆಯತಿಶಯಕೆ ಪಾಸಟೆ ಮೂರುಲೋಕದೊಳು ಪಸರಿಸುವುದುಂಟೆ

ಇಂದುವಿನ ಕೆಳತನಕ್ಕೆಳಸುತಿರಲಾ ವದನ |
ಕುಂದಮತಿಮುಂದನೆಂದೆನಿಸುತಿರೆ ಶುಭರದನ |
ಬಂದುಗೆಯ ಬಂಧುತ್ವಮೆನಿಸುತಿಹ ಬಾಯ್ದೆರೆಯ ಕನ್ನಡಿಯ ಕದಪುಕಳೆಯ ॥
ಮಂದಹಾಸದ ಭಾಸಮಂ ಕೊಳಲು ಚಂದ್ರಿಕೆಯ |
ಬಂಧೀಕರಿಸಿ ಬಾಣತತಿಯ ಕುಡಿನೋಟಂಗ |
ಳಂದಮಂ ಕಂಡು ಮುನಿವೃಂದಮಾನಂದಮಂ ಪೊಂದಿದರದೇವೇಳ್ವೆನು ॥ (9)

ಸುಮಮಾಲಿಕಾಭಿರೂಪವನಾಳ್ದ ಬಾಹುಲತೆ |
ಯಮಳಶಾತೋದರ ಕುರಂಗಾಕ್ಷಿ ಭ್ರೂವಲ್ಲಿ |
ಕಮನೀಯತಿಲಕ ಸುಮನಾಸಿಕಂ ಪೊಂಬಳ್ಳಿಸ್ನೈಯು ಪುಷ್ಕರಮಧ್ಯದ ॥
ಸಮದೇಭಕರದೂರುಯುಗ ಹಂಸಯಾನವತಿ |
ವಿಮಲಶುಕವಾಣಿ ರಾಜಿಸಲು ಮುಂಗಡೆಯಲ್ಲಿ |
ಯಮಿತಿಲಕ ನೋಡಿ ಸಂತಸದಿಂದ ಹಿಗ್ಗಿದಂ ಸಗ್ಗಿಗರ್ನಲಿವುತಿರಲು ॥ (10)

ಕಾಂತಾದೃಗಂಚಲವೊ ಕಣೆಗಳುರುಚಂಚಲವೊ |
ಕುಂತಳದ ಗೊಂದಣಿಯೊ ಕುಸುಮಾಂಧಸಂದಣಿಯೊ |
ಕಾಂತನಖಪಂಕ್ತಿಗಳೊ ಭುಕ್ತಿಯ ಸಂತೆಗಳೊ ಸನ್ಮೋಹನದ ಕಣಿಯುಮೊ ॥
ಚಿಂತಿಸಲಶಕ್ಯ ಸುರನಾರಿಯರ ಚೆಲ್ವಿಕೆಯ-|
ನಾಂತ ಗೌತಮನರಸಿ ಕಣ್ಗೆಸೆಯೆ ನೋಡಿ ಭೂ |
ಕಾಂತಮಸ್ತಕಮಣಿರಘೂತ್ತಮಂ ವಿಸ್ಮಯದೊಳೀಕ್ಷಿಸುತ ಬೆರಗಾಗಿರೆ ॥ (11)

ಅತಸೀಕುಸುಮಗಾತ್ರ ಅಂಬುಜಾಯತನೇತ್ರ |
ಶತಮನ್ಯುಸನ್ಮಿತ್ರ ಶತಪತ್ರಸಖಗೋತ್ರ |
ಚತುರಾಸ್ಯನುತಿಪಾತ್ರ ಪಾವನಚರಿತ್ರನುಂ ಚಾಪೇಷುಪಾಣಿಯಾಗಿ ||
ಸ್ಮಿತವದನಸೌಮಿತ್ರಿ ಸೇವಿಸುತ್ತಿರೆ ಬಲದಿ |
ಯತಿರಾಯನೆಡವಂಕದಲ್ಲಿರಲ್ ನೀಲದಾ |
ಯತವರ್ಣನಾಂತು ಶ್ರೀರಾಮ ರಾರಾಜಿಸಲ್ ಕಂಡಳಾ ಮುನಿಪತ್ನಿಯು || (12)

ಸರಸಿಜೋದ್ಭವಸುರೇಂದ್ರಾದಿಋುಷಿನಿವಹಮುಂ |
ನಿರತಮಾಡುವ ನೇಮಜಪಸಮಾಧಿಗಳಿಂಗೆ |
ದೊರಕದಿಹ ಪರಬೊಮ್ಮಮಕ್ಷಿಗೋಚರನಾಗಿ ನಿಂದಿರಲ್ಕಾ ಕಾಂತೆಯು ||
ಸ್ಮರಿಸಿ ಪತಿವಚನಮಂ ಪರಿಪೂರ್ಣಕಾಮಸೆಂ |
ದರಿತು ಹರ್ಷಾನಂದದಿಂದ ಮಂದಸ್ಮೇರ |
ವೆರೆದು ಸದ್ಭಕ್ತಿಯಿಂ ಪರಮಪುರುಷನ ದಿವ್ಯಚರಣಮನ್ನುತಿಸೈದಳು || (13)

ಚಲನಾದಿರಹಿತನಾಪ್ಪೋಜ್ಯೋತಿಯಂಗುಷ್ಠ |
ಕಲನ ಮುನಿಹೃನ್ನಿಲಯ ಮೋಹವರ್ಜಿತ ರುದ್ರ |
ಜಲಜಾಸನಾದಿಗಳ್ಪಲವು ವಿಧದಿಂದದರಸಿ ಕಾಣದಿಹ ಪರಬೊಮ್ಮ ನೀಂ||
ನೆಲದಿ ಮನುಜಾಕಾರದಿಂ ಜಗತ್ರಯಗಳ-|
ನ್ನೊಲಿದು ಪಾಲಿಸಲೆಮ್ಮ ದಯದಿಂದಲೈತಂದ |
ಜಲಜಾಕ್ಷ ನಿನ್ನ ಪದಸೋಂಕಿನಿಂದಾಂ ಧನ್ಯಳಾದೆ ಮತ್ಪುಣ್ಯಮೆಂತೊ || (14)

ಆರಮನೆಯೊಳ್ತೊತ್ತಿನಂತಿರ್ಪ ಮಾಯೆ ಈ |
ಮೂರು ಲೋಕಂಗಳನು ಮರುಳೆನಿಪಳೈಸೆ ಮ-|
ತ್ತಾರ ಪಾದೋದಕಂ ಭವವಿರಿಂಚ್ಯಾದಿಗಳ ಪಾವನವ ಮಾಳ್ಪುದೊಲಿದು ||
ಆರ ಪ್ರಾಣಾನಿಲ ಜಗತ್ಪ್ರಾಣ ದಿಕ್ಕುಗಳ |
ದಾರ ಶ್ರೋತ್ರಂಗಳೆನಿಸಿರ್ಪುವಾ ವಿಶ್ವ |
ಮೂರುತಿಯೆ ಮುಂಗಡೆಯೊಳೊಪ್ಪಿರಲ್ಪೇಳ್ವೆ ನಾಂ ಪೂರ್ವಕೃತಪುಣ್ಯಸಿರಿಯ|| (15)

ಸರಸಿಜದಳಾಕ್ಷನಂ ಸುರವರಾಧ್ಯಕ್ಷನಂ |
ವರತ್ರಯಿೂಲಕ್ಷನಂ ದುರಿತಾದಿಶಿಕ್ಷನಂ |
ಕರಿರಾಜರಕ್ಷನಂ ಕರುಣಾಕಟಾಕ್ಷನಂ ಸ್ತುತಿಕಲಿತನಿಟಲಾಕ್ಷನಂ ||
ತರಣಿಕುಲಸೋಮನಂ ತಾರಕಸುನಾಮನಂ |
ಪರಿಪೂರ್ಣಕಾಮನಂ ಪಾರ್ವತೀಪ್ರೇಮನಂ |
ನಿರುಪಮಾನಂದಾಬ್ಧಿರಾಮನಂ ರಾಮನಂ ಭಜಿಪೆ ಸದ್ಭಕ್ತಿಯಿಂದೆ || (16)

ಪುರಹರನದಾರ ನಂಮೂಮೃತದ ಪಾನದಿಂ |
ಮೆರೆದಪಂ ಮತ್ತಾರ ನಾಭೀಸರೋಜದೊಳ್ |
ಸರಸತಿಯ ಪತಿಯಿರ್ಪನಂಗರುಹತತಿಗಳೊಳ್ ಬ್ರಹ್ಮಾಂಡಶತಗಳಿಹವು ||
ತರಣಿಶಶಿಗಳದಾರ ನೇತ್ರಸಂಭವರಗ್ನಿ |
ಸುರಪರುಂ ಮುಖಜಾತರೆನಿಸಿ ತೋರುವರಖಿಲ |
ರೆರೆಯ ಪುರುಷೋತ್ತಮರಘೂತ್ತಮನ ಚರಣಮಂ ಭಜಿಪೆ ಸದ್ಭಕ್ತಿಯಿಂದೆ || (17)

ಆವನುರು ಮಹಿಮಾಮಹಾಮೃತಾಸಾರಮಂ |
ಸೇವಿಸುತ ಭವಬ್ರಹ್ಮರಾನಂದಪುಳಕದಿಂ |
ದೋವಿ ಸಂತಸಗೊಂಬರಾ ಸತ್ಯಲೋಕದೊಳ್ ನಾರದಾದಿಗಳ ಬೆರೆದು ||
ಆವನವತಾರದ ಚರಿತ್ರೆಯಂ ಪಾಡುತ್ತ |
ಲಾವಗಂ ಗೌರಿಭಾರತಿಯರಾನಂದಾಶ್ರು |
ಪಾವನಿತವಕ್ಷೋಜರೆನಿಸಿರ್ಪ ದೇವನಂ ಭಜಿಪೆ ಸದ್ಭಕ್ತಿಯಿಂದೆ || (18)

ಆದಿಮಧ್ಯಾಂತಂಗಳಿಲ್ಲದ ಪರಾತ್ಮ ನಿಜ |
ಬೋಧಸ್ವರೂಪ ನಿರ್ಗುಣ ಪರಂಜ್ಯೋತಿ ನಿಖಿ |
ಲಾಧಾರ ನಿರುಪಮಾನಂದ ಮಾಯಾತೀತ ನಿಗಮಗೋಚರ ನಿರೀಹ ||
ಸಾದರದಿ ಲೋಕಮಂ ಸಲಹಲೋಸುಗಮಾಗಿ |
ಮೇದಿನಿಯೊಳುದ್ಭವಿಸಿ ಮನುಜನಂದದಿ ತೋರ್ಪ |
ನಾದಿಪೂರುಷನಪ್ರಮೇಯರಘುವೀರನಂ ಭಜಿಪೆ ಸದ್ಭಕ್ತಿಯಿಂದೆ || (19)

ಏಕಮೇವಾದ್ವಿತಿಯನಕಲಂಕ ಪದಿನಾಲ್ಕು |
ಲೋಕಮಂ ಮೋಹಿಪ ಸುಮಾಯೆಯೊಳ್ ಮೋಹಿಸುತ |
ಲಾಕಾರಮಯನಾಗಿ ಹರಿಹರಬ್ರಹ್ಮಾದಿಭೇದದಿಂ ತೋರ್ಪಡಿಸುತ ||
ಶೋಕಮೋಹವಿವರ್ಜರೆನಿಪ ಸಂಯಮಿಗಳಾ |
ಲೋಕದೊಳ್ ಮಿಂಚಿನಂದದಿ ಪೊಳೆವ ಸರ್ವೇಶ |
ನಾ ಕಮಲಪತ್ರಾಯತಾಕ್ಷ ರಘುವೀರಂಗೆ ವಂದಿಸುವೆ ಭಕ್ತಿಯಿಂದೆ || (20)

ನೀನೆ ಜಗದಾದಿಭೂತಂ ವಿಚಾರಿಸಿ ನೋಡೆ |
ನೀನೆ ಜಗದಾಕಾರ ನೀನೆ ಜಗದಾಶ್ರಯಂ |
ನೀನಖಿಳಭೂತಂಗಳೊಳು ಬೆಳಗುತಿರ್ಪಾತ ಬಹುಘಟಂಗಳ ಜಲದೊಳು ||
ಭಾನು ಬಿಂಬಿಸುವಂತೆ ಬಹುರೂಪಮಾಂತಿರ್ಪೆ |
ನೀನೆ ಓಂಕಾರ ವಾಚಕವಾಚ್ಯಕತಿದೂರ |
ನೀನೆ ವಾಚಕವಾಚ್ಯಭೇದದಿಂ ವಿಶ್ವಮಯನೆನಿಸಿಪೆ ಜಗದೀಶರಾಮ || (21)

ವ್ಯೋಮದಂತೊಳಹೊರಗೆ ಪರಿಪೂರ್ಣನಿರ್ಮಳಂ |
ನೀ ಮಹಾಕಾರ್ಯಕಾರಣಕರ್ತೃ ಫಲಭೇದ |
ನಾಮದಿಂ ಸರ್ವಜಂತುಗಳನ್ನು ಮೋಹಿಸುವೆ ದೇವ ತ್ವನ್ಮಾಯೆಯಿಂದೆ ||
ಭ್ರಾಮಕದಿ ನೀಂ ಮನುಜನೆಂದು ಭಾವಿಪರೆಲ್ಲ |
ಧಾಮಮಯನೆಂದರಿಯರಯ್ಯ ಪರಮೇಶ್ವರನೆ |
ಪಾಮರರು ನಿರ್ಮಲನ ನಿತ್ಯನಚಲನ ಸಂಗರಹಿತನನ್ನರಿಯರಕಟ || (22)

ಅರಿವೆನೆಂತಾಂ ಮೂಢಳಂಗನೆ ಮಹೀನಾಥ |
ಪರಬೊಮ್ಮ ನಿಜತತ್ವವನ್ನಖಿಲಯತಿನಿವಹ |
ನಿರತ ಧ್ಯಾನಿಸಿ ಕಾಣರದರಿಂದ ಮದ್ಬುದ್ಧಿಯುಳ್ಳನಿತರೊಳ್ನುತಿಸುತ ||
ಸಿರಿಯ ವಕ್ಷೋಜಘುಸೃಣಾಂಕಿತದ ರಾಗಸಂ |
ಭರಿತ ಸರಸಿಜಭವಾದಿಗಳ ಹೃದಯದೊಳೆಸೆವ |
ಚರಣಯುಗಳಂಗಳಿಗೆ ವಂದಿಸುವೆನನವರತ ಮುನಿವಿನುತ ಶತಸಂಖ್ಯೆಯಿಂ || (23)

ರವಿಕೋಟಿಸಂಕಾಶ ಲಕ್ಷ್ಮೀಶ ಪುರುಷೇಶ |
ನವನೀರದಶ್ಯಾಮ ಭವವಿರೋಚನನಾಮ |
ಕುವಲಯಾಧಿಪಚಂದ್ರ ಸತತನುತದಿವಿಜೇಂದ್ರ ಸದ್ಗುಣಾನಂದಸಾಂದ್ರ ||
ರವಿವಂಶಸಂಭೂತ ರಾಜೀವಸುತತಾತ |
ಪ್ರವಿಮಲಮುನಿವ್ರಾತ ಸವನಸತ್ಫಲದಾತ |
ಭುವನೇಶಪೂಜಿತಪದಾಬ್ಜ ಕಾಯುವುದೆನ್ನ ಕರುಣದಿಂ ಕಾಮುಪಿತನೆ || (24)

ಮಂದಹಾಸಮುಖಾರವಿಂದ ಜಗದಾನಂದ |
ಕಂದರ್ಪಕೋಟಿಲಾವಣ್ಯ ದಿವಿಜಾಗ್ರಣ್ಯ |
ವೃಂದಾರಕಾದಿನುತ ಶರಚಾಪಸಂಕಲಿತಸೌಮಿತ್ರಿಸಂಸೇವ್ಯನ ||
ಇಂದೀವರಾಭಮೂರುತಿಯ ಸತ್ಯಾನಂದ |
ಕಂದ ದಶರಥಕಂದನಂಘ್ರಿಸಾರಸಗಳಂ |
ಪೊಂದಿದರ ಸಲಹುವ ನಿಮಿತ್ತ ಬಂಧುವ ನಾನು ಭಜಿಪೆ ಮಾನಸನಿಲಯದಿ||

ಇಂತನಂತಾನಂತ ಸಂಸ್ತವಂಗೈಯುವಾ |
ಕಾಂತೆ ಸಾಷ್ಟಾಂಗದಂಡಪ್ರಣಾಮಂಗೈದು |
ಮುಂತರಿಯದಾನಂದದಿಂದ ಮೈಮರೆದಿರಲ್ ಕಂಡು ರಘುಕುಲವರ್ಯನು ||
ಸಂತಸದಿ ಹಿಗ್ಗುತಿಂತೆಂದ ಮುನಿವರನರಸಿ |
ಚಿಂತಿತಮನೋರಥವನಿತ್ತಪೆನು ಬೇಡೆನಲ್ |
ಚಿಂತಾಯತನ ಚರಣಕೆರಗಿ ಬಿನ್ನಪಗೈದಳಖಿಳಋಷಿನಿವಹ ನಲಿಯೆ || (26)

ದೇವ ಸಾಕ್ಷಾತ್ಪರಬ್ರಹ್ಮಪರಮೇಶ ಜಯ ।
ದೇವ ಮೂರ್ತಿತ್ರಯಾತೀತ ಹರ ತಾತ ಜಯ ।
ದೇವ ಭಾವಾಭಾವರಹಿತ ಶ್ರೀರಾಮ ಜಯ ಮುನಿಮನೋನಿಲಯ ಜಯತು ॥
ದೇವ ಬಿಲ್ಗೋಲ್ಪಿಡಿದ ಕರಮೆರಡರಿಂದೆಸೆವ ।
ಪಾವನಸುಮೂರ್ತಿ ಸೌಮಿತ್ರಿಸೇವಿತನಾಗಿ ।
ಭಾವಮುಗಲದಲಿರಲೆನಲ್ಕೆದಯದಿಂದಿತ್ತ ನಿಜಭಕ್ತಿಯಂ ಕಾಂತೆಗೆ ॥ (27)

ಅನಿತರೊಳ್ ಬಂದು ಗೌತಮಮೌನಿ ರಾಮಪದ ।
ವನಜಮಂ ನಿಟ್ಟಿಪಭಿಲಾಷೆಯಿಂದಾ ನೆಲಕೆ ।
ಘನನೀಲವರ್ಣಸನ್ಮೂರ್ತಿ ರಾರಾಜಿಸಲ್ ತಾಪಸೋತ್ತಮಮಧ್ಯದಿ ॥
ಸನಕಾದಿವಂದ್ಯನಂ ನೋಡಿ ಸಂಭ್ರಮದಿಂದ ।
ಲಿನಕುಲೋದ್ಭವ ಜಗನ್ಮಯ ಲೋಕಸಾಕ್ಷಿ ಸ-।
ಜ್ಜನಚಿತ್ತಪದ್ಮಸದ್ಮಾಯತ ನಮೋಯೆಂದು ನುತಿಸಿದಂ ಭಕ್ತಿಯಿಂದೆ ॥ (28)

ವೇದಾಂತವೇದ್ಯ ಬಾಹ್ಮಣ್ಯಮೂರುತಿ ಪರಮ ।
ನಾದಮಯ ಬ್ರಹ್ಮಕರ್ಮಾ ಬ್ರಹ್ಮರೂಪ ಜಗ ।
ದಾದಿಕಾರಣ ಚತುರ್ಮುಖ ವಿಷ್ಣುರುದ್ರಾತ್ಮ ಮೂಲಪ್ರಕೃತಿರೂಪನೆ ॥
ವೇದಾಂಗಮಹಿಮನೆಂದವತಾರಮಹಿಮೆಗಳ ।
ನಾದರದಿ ಭಜಿಸುತ ಸುರಾಸುರರ್ ನಿಜತತ್ವ ।
ಹಾದಿಗಳನರಿಯರನವರತ ಪರಮಾತುಮನೆ ಪಾಲಿಸುಗೆ ಮೂಲೋಕಮಂ ॥ (29)

ತರಣಿಶಶಿವಾಯ್ವಗ್ನಿಮೃತ್ಯು ಮೊದಲಾದವರ್ ।
ಚರಿಸುವರದಾರಾಜ್ಞೆಯಿಂದಾರ ಕುಕ್ಷಿಯೊಳ್ ।
ಶರನಿಧಿಗಳೆಸೆದಿರ್ಪವಾರ ಕುಂತಳಜಾಲ ಮೇಘ ನಾಡಿಗಳೆ ನದಿಗಳ್ ॥
ಪರಿಪೂರ್ಣನಿರ್ವಿಕಾರಂ ವ್ಯೋಮನಕಲಂಕ ।
ನಿರತಶುದ್ಧಂ ಬುದ್ಧ ನಿಖಿಲಜಗದಾಧಾರ ।
ನರರೂಪವಾಂತ ಸರ್ವಾತ್ಮ ಶ್ರೀರಾಮನಂ ಭಜಿಪೆ ನಾಂ ಭಕ್ತಿಯಿಂದೆ ॥ (30)

ತ್ರಿದಿವ ಮೂರ್ಧಾನ ನಾಭೀದೇಶಮಂಬರಂ ।
ವಿಧಿ ಸುತಂ ಸಪ್ತಪಾತಾಳ ಪಾದಂಗಳುಂ ।
ವಿಧುರವಿಗಳುಂ ನೇತ್ರ ನಾಸಿಕಗಳೆನಲೆಸೆವ ಪಳವಾತುಗಳ ತಿಂತಿಣಿ ॥
ಕುಧರಗಳಸಾಂತ ಸಂಧಿಗಳಾದಿತೇಯರಂ ।
ಚದುರಿಂದ ಪಡೆದ ನಿತ್ಯಾನಂದ ನಿರ್ಲೇಪ ।
ಮಧುಸೂನಾಚ್ಯುತಾನಂತ ರಕ್ಷಿಪುದೆಂದು ಮಣಿದನಾ ಯತಿಪರ್ಯನು ॥ (31)

ಯತಿವರ್ಯನೀ ಪರಿಯು ನುತಿಸೆ ಸಂತಸದಿ ರಘು |
ಪತಿ ನುಡಿದ ತಾಪಸೋತ್ತಮ ತುಷ್ಟನಾದೆ ಸ-|
ನ್ಮತಿಸಿದರ್ಥವ ಬೇಡಲಿತ್ತಪೆನೆನಲ್ಕೌನಿ ವಿಜ್ಞಾಪನಂಗೈದನು ||
ಶತದಳಾಂಬಕ(ನೆ) ಶರ್ವನೆ ಯಾಚಿಸೆನು ನಾನು |
ಕ್ಷಿತಿಯೊಳುಳ್ಳಖಿಳಾರ್ಥವೆಲ್ಲ ನಾಶನಕರಂ |
ಮತಿಗಗೋಚರ ನಿನ್ನ ಸನ್ಮೂರ್ತಿ ಮಾನಸವನಗಲದಂತನವರತವು || (32)

ಚಿತ್ತದಲಿ ಬೆಳಗುತಿರ್ಪೊಲ್ ದಯಂಗೈವೇಳ್ಕು |
ಮತ್ತೇಭವರದ ಮಮತೆಯೊಳೆನಲ್ಕಾಗ ಮುನಿ |
ಪೋತ್ತಮನೆ ನಿಜಸಂಗಹೃದಯ ನೀ ಮದ್ಭಕ್ತಜನರೊಳಗ್ಗಳ ಪೂರ್ವದಿ ||
ಉತ್ತರೋತ್ತರಮಿತೋಪ್ಯಧಿಕತರಮಾಗಿ ಬಹು |
ಳೋತ್ತಮಜ್ಞಾನ ಸಂಭವಮಾಗಲೆಂದು ಸ-|
ರ್ವೋತ್ತಮಂ ವರಮೀಯಲಕ್ಷಪಾದಾಖ್ಯಯತಿಯತುಲಿತಾನಂದದಿಂದೆ || (33)

ಮಧುಸೂದನಂಗರ್ಘ್ಯಪಾದ್ಯಗಳು ಮೊದಲಾದ |
ಪದಿನಾರು ವಿಧದ ಉಪಚಾರಪೂಜೆಯನೆಸಗಿ |
ಮುದದಿಂದ ಕಂದಮೂಲೋಪಹಾರಂಗಳನ್ನರ್ಪಿಸುತ ನುತಿಸುತೆರಗಿ ||
ಸದಯ ಪರಿಪಾಲಿಸೆಂದೆನುತ ಪ್ರಾರ್ಥಿಸಿ ಮಗುಳೆ |
ಚದುರಿಂದೆ ಬೀಳ್ಕೊಟ್ಟು ರಾಮಲಕ್ಷ್ಮಣರುಗಳ |
ನಧಿಕಸಂತೋಷದಿಂ ಸುದತಿಯೊಡನೆರೆದಿರ್ದನಾಶ್ರಮದಲಾ ವಿಪ್ರನು || (34)

ಅಲ್ಲಿಂದ ರಾಮಲಕ್ಷ್ಮಣರು ಮುನಿಜನರೊಡನೆ |
ಸಲ್ಲೀಲೆಯಿಂದ ಪಥವಿಡಿದು ಪ್ರಾಗುತ್ತರಕೆ |
ಮೆಲ್ಲನೈತರುತಿರ್ದರಾ ದೇಶದತಿಶಯವನೀಕ್ಷಿಸುತೆ ಬೆರಗಾಗುತೆ ||
ಎಲ್ಲಿಯುಂ ಪರಿವ ತಟನೀಗಣ ತಟಾಕಚಯ |
ಮೆಲ್ಲಿಯುಂ ಪೂತ ವನನಂದನಂ ನೋಡೆ ಮ-|
ತ್ತೆಲ್ಲಿಯುಂ ನಳನಳಿಪ ಕಳೆವೆತ್ತ ಬೆಳಸಿಂದಲಾ ನಾಡ ಸಿರಿ ಮೆರೆದುದು || (35)

ಪೂವಿಲ್ಲನಾಡುವಾಡುಂಬೊಲಂ ಪರಭೃತದ |
ಜೀವನಸ್ಥಲ ತಾಮ್ರತುಂಡಗಳ ಸಖನಿಲಯ |
ಕೋವಿದಕಲಾಕಲಿತ ಕಲಕಂಠಮಂದಿರಂ ತಂಬೆಲರ ಸದನಮೆನಿಸಿ ||
ಶ್ರೀವಿರಾಜಿತದಬ್ಜಸರ ಸರಂಗಳ ದಿವ್ಯ |
ಪಾವನೀಕೃತಸಂಗದಭಿರಾಮದಾರಾಮ |
ವಾ ವಸುಧೆಯಲ್ಲಿ ರಾಜಿಸುತಿರ್ದುದಮರೇಂದ್ರನುಪವನಕೆ ಪಾಸಟಿಯೆನೆ || (36)

ಬಲು ಕೆಂಪುಗಳ ಬಿಗಿದ ಚೆಲುವ ಕೃತಕಾದ್ರಿಗಳ |
ಕಲಕಲಾರಾವಂಗಳಿಂದೆಸೆವ ನೃಪಕೀರ |
ಗಳ ಕಳಿತ ಶಾಲೀವನಮುಚಿತಸುನಂದನಂ ಲಲಿತಶ್ರೀಪತಿರಂಜನಂ ||
ಬಲಿರಾಜ್ಯಮೆಂಬಂತೆ ಲಲನೆಯರ ಯೌವನದ |
ಲಲಿತಕಾಂತಾಚಿತ್ತಕಲಿತ[1](ದಿಂದಲಿ ತೆರೆದ)
ಗೆಲವಿಂದಲಾ ನಾಡ ಸಿರಿ ವಿರಾಜಿಸುತಿರ್ದುದೇನೆಂಬೆನಚ್ಚರಿಯನು || (37)

ವನರಮೆಯ ನಿಟ್ಟುಸಿರದೆಂಬಂತೆ ತಂಬೆಲರು |
ಮಿನುಗೆ ಮಿಂಡೆದ್ದ ಪೊಲಗಾವ ಪಾಮರಿಯರುಂ |
ಮನದೊಲವಿನಿಂ ಪಾಡೆ ಸರಗೇಳುತಾ ಕ್ಷಣಂ ಪರಪುತ್ತ ನಿಜಸತಿಯಳ ||
ಮನೆಯನರಸುತ್ತ ಮುಂಗಾಣದಲೆ ಭ್ರಮೆಗೊಂಡು |
ಬನದಿ ಚರಿಸುತಲಿರ್ಪ ಪರಿಯನೀಕ್ಷಿಸಿ ಪಾಂಥ |
ಜನರು ಮನ್ಮಥನಂಬಿನುರುಬಿನಿಂ ಬಾಯಾರಿ ಬಳಲುತಿಹರಾ ಪಥದೊಳು || (38)

ಪಾರದಲೆ ಕಾಮುಕರನೆಸೆವ ಮನಸಿಜವೀರ |
ನಾರಾಚಝೇಂಕಾರಮಾವೆಡೆಯ ಸುದತಿಯರ |
ಸಾರಿ ಸಪ್ರಣಯವೈರದಲೆಸೆವ ಹುಂಕಾರ ಕುಸುಮನಿಚಯಂಗಳಿಂದ ||
ಪಾರಿವದ ಬಂಭರದ ಝೇಂಕಾರದಿಂದಲಿ ವಿ |
ಹಾರಮೆನಿಸಿರ್ಪುದಾ ನಾಡು ಸುರ ಸಂತತಿಗೆ |
ಚಾರುತರಸುಖದ ಬೀಡೆನಿಪ ಮತ್ತಾ ಸಿರಿಯನಭಿವರ್ಣಿಸಲ್ಕಪ್ಪುದೆ || (39)

ಇಂತನಂತವಿಲಾಸಕಾಸ್ಪದ ಸುರಾಷ್ಟ್ರದಿಂ |
ಮುಂತೆ ಕಂಗೊಳಿಪುದತಿಶಯದಿಂದಲಾ ಧರಾ |
ಕಾಂತೆಯಳ ಮುಖಬಿಂಬಮೆಂಬಂತೆ ಸಿರಿಕರದ ಮಿಥಿಲಾಭಿಧಾನನಗರಿ ||
ಸಂತಾನವೈದಕಾಲಯ ಸುರಾಲಯಮೆಂದು |
ಪಿಂತುಳಿಸುತಖಿಲಸಂತಾನಕಾಶ್ರಯಮೆನಿಸಿ |
ಸಂತತಂ ಸಕಲಭೋಗೋಪಭಾಗ್ಯಸುವಸ್ತುಸೌರಾಜರಾಜಿಯೆನಿಸಿ || (40)

ಆ ರಾಜಧಾನಿಗಂ ಪೊರವಳಯದಲಿ ಯಜ್ಞ |
ರಾರಾಜಿಸುವ [2](ವಾ)ಟಿಯೊಪ್ಪಿರಲ್ ನಡೆತಂದ |
ರಾ ರಾಜತನಯರುಂ ನಿಖಿಲಮುನಿಗಣದೊಡನೆ ನಿಟ್ಟಿಸುತ ಕೌತುಕಗಳ ||
ಸಾರಿ ಕ್ರತುಭೂಮಿಯಂ ಬೆಸಗೊಂಡನೊಲವಿಂದು |
ದಾರಯತಿವರ್ಯನಂ ಮೃದುಮಧುರವಾಣಿಯಿಂ |
ಧೀರ ನಮಗಾವೆಡೆಯು ವಿಶ್ರಮಿಸಲುಂ ತಾಣಮೆನೆ ಮುನಿಪನಿಂತೆಂದನು || (41)

---

1 ಕಲಿತತಂದ ತೆರದಿ |

2 ಪಾಟಿ.

ನೆರೆದಿದೆಕೊ ಸಕಲಭೂಸುರವಿಸರ ದೇಶಗಳ |
ಲಿರುವಾಹಿತಾಗ್ನಿಗಳ ಶಕಟೀಸಹಸ್ರಸಂ |
ಭರಿತವಾಗಿದೆ ದೇಶದೇಶದಿಂದೈತಂದ ದೊರೆದೊರೆಗಳುಂ ಮೋದದಿ ||
ಪರಮಪಾವಿತ್ರವೀ ನೆಲವಾವ ತಾಣದೊಳ |
ಗಿರಲು ಸಂತೋಷಕರವೆನಲಾಗ ಮೌನಿವರ |
ಕರೆದೊಯ್ದನೇಕಾಂತವಾಗಿರ್ಪ ಪುಣ್ಯಮಯಮಂಟಪಕೆ ರಘುವೀರನ || (42)

ಹರುಷರಸಪಲ್ಲವಿಸುತಾಗೊಡನೆ ಕೌಶಿಕಂ |
ಕರುಣದಿಂ ಕಾಕುತ್ಸ್ಥರಿರ್ವರಂ ಕುಸ್ತರಿಸು |
ತಿರುತಿರಲ್ಕಲ್ಲೊಡನೆ ತದ್ವರ್ಣಿಬರವನುಂ ಕೇಳ್ದೈದೆ ಜನಕಾಖ್ಯನು ||
ಗುರುಶತಾನಂದಾದಿ ಭೂಸುರಸಮೂಹದೊಡ |
ವೆರೆದು ಪೂಜಾಯೋಗ್ಯವಸ್ತುಗಳ ಕೈಕೊಂಡು |
ಪರಮಶ್ರದ್ಧಾನ್ವಿತದಿ ನರದೇವನೈತಂದನಾ ಪಾರಿಕಾಂಕ್ಷಿಯೆಡೆಗೆ || (43)

ಬಂದು ಪೂರ್ಣೇಂದುವಂ ಕಂಡ ನೀರಧಿಯಂತೆ |
ಯಿಂದುಶೇಖರ ದಿಟ್ಟಿಸಿದ ಕಮಲಭವನಂತೆ |
ಬೃಂದಾರಕಾದಿನುತಮೌನಿಯಂ ನೋಡುತ್ತ ಹರ್ಷದಿಂ ಜನಕನೃಪತಿ ||
ಬಂಧುರದ ಭಕ್ತಿಯಿಂದೆರಗಿ ಪೂಜಿಸಿ ಪೊಗಳು |
ತಿಂದೆನ್ನ ಕ್ರತು ಸಫಲವಾಯ್ತು ಯಮಿಜನರೊಡೆಯ |
ಬಂದ ಕಾರಣದೊಳಾನೇಸು ಧನ್ಯನೆನುತ್ತೆ ಮತ್ತೆ ಋಷಿಯಂ ನೋಡಲು || (44)

ಅತಿಶಯದಲರ್ಚಿಸಿದ ಮಿಥಿಲೇಶನಂ ನೋಡಿ |
ಯತಿವರ್ಯನಮಿತಸಂತೋಷದಿಂ ಕ್ಷೇಮಸಂ |
ಗತಿಗಳಂ ಬೆಸಗೊಂಡು ಪರಸಿ ಮಂತ್ರಾಕ್ಷತೆಯನಿತ್ತು ಮಗುಳಿಂತೆಂದನು ||
ಶತಪತ್ರನಿಂದಖಿಳವೇದಂಗಳರಿತನ-|
ಪ್ರತಿಯಿಲ್ಲದುರುತಪೋರಾಶಿಯಿಂ ಸುಜ್ಞಾನ |
ಮತಿಯ ಸ್ವೀಕರಗೈದಿರೀ ಕ್ಷಿತೀನಾಯಕರೆ ಕುಳ್ಳಿರ್ಪುದುಚಿತವೆನಲು || (45)

ಎನೆ ಜನಪ ಸಂತಸದಿ ಕುಳ್ಳಿರ್ದು ನೋಡಿದಂ |
ಘನನೀಲಸಿತತನುಚ್ಛಾಯೆಯಿಂ ಶತ[1](ಕೋಟಿ |
ಯಿ)ನತೇಜದಿಂ ಕರದಿ ಪಿಡಿದ ಕೆಂಗರಿಗೋಲ ಸುರಚಾಪನಿಭಚಾಪದಿಂ ||
ವನಧಿಮೇಖಲೆಯೊಳಪ್ರತಿಮರೂಪಾಂತು ತ-|
ನ್ನನುಜಾತನೊಡನೆ ಋಷಿನಿವಹದೊಳಗೆಸೆದಿರ್ಪ |
ಸನಕಾದಿನುತಬಾಲಭಾವಮಂ ನಿಟ್ಟಿಸುತ ಜನಕ ವಿಸ್ಮಿತನಾದನು || (46)

---

1 ಶತಶೋಥಥ | ಏನತೇಜದಿಂ.

ಪರಮಹರ್ಷೋತ್ಕಟದಿ ಧರಣಿಪತಿ ಹಿಗ್ಗುತ್ತೆ ।
ವರತಪೋರಾಶಿಯಂ ಬೆಸಗೊಂಡನೆಲೆ ದೇವ ।
ತರಣಿಶಶಿಗಳು ನೆಲನ ಪರಿಕಿಸುವಡೈತಂದ ಮಾಳ್ಕೆಯೊಳ್ಕುವರರಂತೆ ॥
ಶರಚಾಪಗಳ ಧರಿಸಿ ಭರದಿಂದ ರಾಜಿಸುವ ।
ತರುಣರಾರೆಂಬುದಂ ವಿಸ್ತರಿಸಿ ದಯದಿಂದ ।
ಲೊರೆಯವೇಳ್ಕೆಂದೊಡಾ ರಾಜನೊಡನಿಂತೆಂದ ಗಾಧಿಸಂಭೂತನೊಲಿದು ॥ (47)

ಅರಸ ನೀನೇ ಧನ್ಯ ಮಾನ್ಯ ಕೃತಕೃತ್ಯನೈ ।
ನಿರತ ಸುರಮೌನಿಜನರರಸಿ ಕಾಣದ ದಿವ್ಯ ।
ಪುರುಷನುರುತತ್ವಮಂ ಬೆಸಗೊಂಬೆಯಾನರಿತ ತೆರದಿಂದ ಋಷಿನಿವಹದಿ ॥
ಶರಣಜನಸುರಧೇನು **ಕಾಮುಪುರಿ**ವಲ್ಲಭಂ ।
ನರರೂಪತಾಳ್ದು ದಶರಥಮಹಾರಾಯನಿಗೆ ।
ತರುಣನೆಂದೆನಿಸಿಲ್ಲಿಗೈತಂದ ಕಥೆಯನುಂ ಸಾವಧಾನದಿ ಪೇಳ್ವೆನು ॥ (48)

ಸಂಧಿ 16 ಕ್ಕಂ ಪದಂಗಳ್ 941

---

# ಹದಿನೇಳನೆಯ ಸಂಧಿ

**ಸೂಚನೆ** ॥ ಕುಶಿಕಾತ್ಮಸಂಭವನ ಚರಿತೆಯ ಶತಾನಂದ ।
ಕುಶಲದಿಂ ವಿಸ್ತಾರವಾಗಿ ಋಷಿಮಧ್ಯದೊಳು । [ಮೆನಲು ॥
ಪಶುಪತಿಯ ಪ್ರಿಯರಾಮಸಾನ್ನಿಧ್ಯದಲ್ಲೊರೆದ ಕರತಳಾಮಲಕ

ಕೇಳು ಪಾರ್ವತಿ ಜನಕರಾಜ ಬೆಸಗೊಂಡುದಕೆ ।
ಪೇಳಿದಂ ಗಾಧಿಸುತನೆಲೆ ಭೂಭುಜೋತ್ತಮನೆ ।
ನಾಳೀಕಭವನ ನುಡಿಯಿಂದ ವೈಕುಂಠಪತಿ ಮನುಜಾವತಾರವನ್ನು ॥
ತಾಳಿ ದಶರಥಕುವರನೆನಿಸಿರ್ದ ಪರಿಯನಾಂ ।
ಕೇಳಿ ಕ್ರತುರಕ್ಷಣೆಗೆ ಯಾಚಿಸಲ್ ನೃಪತಿ ಸ-।
ಮ್ಮೇಳದಿಂ ಸುತರಿರ್ವರನ್ನು ಕಳುಹಿದ ತನ್ನ ಗುರುವಸಿಷ್ಠನ ನೇಮದಿ ॥ (1)

ಒಡಗೊಂಡು ಶ್ರೀರಾಮಲಕ್ಷ್ಮ[1](ಣರ ಮುದದಿಂದ) |
ಪೊಡವಿಪನ ಬೀಳ್ಕೊಂಡು ಬರುತಿರಲ್ ಮಧ್ಯದೊಳ್ |
ಕಡುಭಯಂ[2](ಕರಿಯಾದ) ತಾಟಕಿಯು ತಾಗಲ್ಕೆ ತನ್ಮಹಿಮ ನಿಶಿತಾಸ್ತ್ರದಿ ||
ಕೆಡಹಿದಂ ಭೂತಳಕೆ ಸಿದ್ಧಾಶ್ರಮವ ಸಾರು |
ತೊಡನೆ ಮದ್ಯಾಗವಿಘ್ನವ ಮಾಳ್ಪ ಮಾರೀಚ |
ಕಡುಗಲಿಸುಬಾಹುಮುಂತಾದ ನಿಶಿಚರರುಗಳ ಸಂಹರಿಸಿ ಸಲಹಿ ಕ್ರತುವ || (2)

ಕೆಲವು ವಾಸರಮಿರಲ್ ವಾಸವಾದಿಗಳಿಂದ |
ಕಲಿತ ಪೂಜಾವಂತನೆನಿಸಿ ಮತ್ತನಿತರೊಳು |
ಬಲುಸರದ ವಾರ್ತೆ ಸಂಭೂತಮಾದುದು ರಾಜ ನಿಜನಗರದಲ್ಲಿಸಗಿದ ||
ಬಿಲುಗಳಗ್ರೇಸರವ ನಿಟ್ಟಿಪಭಿಲಾಷೆಯಿಂ |
ಜಲಜಾಕ್ಷರಾಮನೀ ಮುನಿಗಣದೊಳೈತರಲು |
ನಲವಿಂದ ಕಣ್ಗೆಸೆದುದೈದೆ ಮುಂಗಡೆಯಲ್ಲಿ ಗೌತಮತಪೋನಿಲಯವು || (3)

ಸುರಪನಿಂದಾ ಮೌನಿಯರಸಿ ಶಾಪವನಾಂತ |
ಪರಿಯ ನಾಂ ತಿಳುಪಲ್ಕೆ ಪಾವನ ಪರಾತ್ಪರಂ |
ಕರುಣದಿಂದಾ ಬನವ ಪೊಗಲು ಪದಪಲ್ಲವದ ಸೋಂಕಿನಿಂದಘವು ಪೋಗಿ ||
ಶರದಂಗಮುಂ ಉಗಿದು ವಿಧುಬಿಂಬ ತೋರಿದಂ |
ತುರುಶಿಲೆಯನುಚ್ಚಳಿಸಿ ದಿವ್ಯಸುಂದರಿಯೆನಿಸಿ |
ಚರಣಕಭಿನಮಿಸದಳಹಲ್ಯೆ ನಿಗಮಾಗಮೋದ್ಭೂತಸಂಸ್ತವಗೈವುತೆ || (4)

ಅನ್ನೆಗಂ ನಡೆತಂದ ಗೌತಮಮುಹಾಮೌನಿ |
ತನ್ನ ಸತಿಯಿಂದರ್ಘ್ಯಪಾದ್ಯಾದಿಪೂಜೆಗಳ |
ಚೆನ್ನಾಗಿ ರಚಿಸುತಂ ನುತಿಸೆ ರಘುವೀರನಾ ಸ್ತವಕೆ ಸಂತಸಗೊಳುತಲಿ ||
ಮನ್ನಿಸುತ ವರಮಿತ್ತು ಮಗುಳೆ ಬೀಳ್ಕೊಂಡು ಮುನಿ |
ರನ್ನನಂ ನಿನ್ನ ಪಟ್ಟಣವ ನಿಟ್ಟಿಪ ಭರದೊ |
ಳೆನ್ನೊಡನೆ ನಡೆತಂದರೆನೆ ಕೇಳಿ ಪೆರ್ಚಿದಂ ಮಿಥಿಲಾಧಿನಾಥ ಮುದದಿ || (5)

ಜಗತಿಯೊಳಗುತ್ತಮಂ ರಘುವಂಶಮುದರೊಳಗೆ |
ಜಗದೀಶನುದಿಸಿದನು ಮದ್ಭಾಗ್ಯದೇಳಿಗೆಗೆ |
ನಗರಕೈತಂದಿರ್ಪನೀತಂಗೆ ಮತ್ಸುತೆಯನರ್ಪಿಸಿ ಕೃತಾರ್ಥನಹೆನು ||
ನಗಚಾಪಚಾಪಮನ್ನೆತ್ತಲೆತ್ತದೆ ಪೋಗ |
ಲೊಗುಮಿಗೆಯುಲೆನ್ನನುಂ ನಗಲಿ ಲೋಕದ ಜನರ್ |
ಸುಗುಣ ಶ್ರೀರಾಮನೇ ಸುತೆಗರಸನೆಂಬುದಂ ನಿರ್ಧರಿಸಿ ನಗುತೆಂದನು || (6)

---

1 ಲಕ್ಷ್ಮಣಾಂಕರನ್ಯೈದಿ.

2 ಕಡುಭಯಂಕರಮುಳ್ಳ

ಏಸು ಜನ್ಮದ ಸುಕೃತಫಲವು ಕೈಸಾರಿದುದೊ |
ವಾಸವಾರ್ಚಿತಚರಣನಂ ಕಾಣಲೆಂದೆನುತ |
ವಾಸಿಯಿಂ ಪೂಜಿಸಿದನಖಿಲೇಶನಂ ಜನಕ ನಿಜಹೃನ್ನಿವೇಶನೆನುತ ||
ವಾಸನಾರಹಿತ ಗೌತಮತನಯನೈತಂದು |
ಭೂಸುರೋತ್ತಮಕೌಶಿಕಂಗೆ ವಂದನೆಗೈಯೆ |
ಭಾಸುರತಪೋನಿಲಯನೆಂದೆನಿಪುದೆಲೆ ವತ್ಸ ಸುಖಿಯಹುದೆನುತ್ತ ಪರಸಿ || (7)

ಹರುಷವೆತ್ತಾ ಶತಾನಂದನೈತಂದನೆಲೆ |
ಕರುಣಾಂಬುರಾಶಿ ತವದರ್ಶನಮಹೋತ್ಸವದಿ |
ಪರಿವವಘಸಂತತಿಗಳತುಲಿತಾನಂದನಿಧಿ ಕೈಸಾರ್ದುದೀ ದಿನದೊಳು ||
ವರಮುನಿಯ ಶಾಪದಿಂದುರುಶಿಲಾರೂಪಿನಿಂ |
ಪರಮತಪದಿಂದಿರ್ದ ಮನ್ಮಾತೆ ಶ್ರೀರಾಮ |
ಚರಣದುಂಗುಟಸೋಂಕಿನಿಂದ ಸುಖಮಂ ಪಡೆದ ಶುಭವಾರ್ತೆಯನ್ನಾಲಿಸಿ || (8)

ಪತ್ತುಸಾಸಿರವರುಷವುಳಿದು ತನುಭಾವನುಂ |
ತುತ್ತ ಸವಿಯದೆ ಮಹಾಶೀತಾತಪಂಗಳುರು |
ವೊತ್ತಮಂ ಸಹಿಸಿ ಮನದೊಳಗೆ ಶ್ರೀಮೂರ್ತಿಯನ್ನಿಟ್ಟು ಜಾನಿಸುತಲಿರ್ದ ||
ಪುತ್ತಳಿಗೆ ಮಾನುಷಾಕಾರ ಸಂಭವಮಾಗಿ |
ಮತ್ತೆ ಗುರುಪದದೊತ್ತ ಸೇರಿ ಸೇವಿಸುತಿರ್ಪ |
ದುತ್ತಮತೆ ಭವದೀಯಕರುಣದಿಂದಾದುದೆಲೆ ಮುನಿಪ ಧರಣೀತಳದೊಳು || (9)

ಗುರುವಚನ ಸತ್ಯಸಂಭರಿತಮಾದುದು ದೇವ |
ಸುರಮೌಳಿವಂದಿತಪದಾಬ್ಜಮಂ ನಿಟ್ಟಿಸುವ |
ಪರಮಪುಣ್ಯೋದಯಂ ನಿನ್ನ ಕೃಪೆಯಿಂದಾದುದಲ್ಲದೊಡೆ ಶಿಲೆ ಮನುಜರ ||
ಪರಿಯಪ್ಪುದುಂಟೆ ಪಾವನಚರಿತ್ರನೆ ನಿನ್ನ |
ದರುಶನವೆ[1](ಉತ್ತರದ) ಫಲರೂಪಮೆಂದು ಬಹು |
ಪರಿಯ ಸನ್ನುತಿಗೈದು ಮಗುಳೆ ಗೌತಮತನಯನಿಂತೆಂದ ರಾಮನೊಡನೆ || (10)

ಜಲಜಸಂಭವತಾತ ಜಗದುದರ ಮುನಿನೇತ |
ಜಲಧಿಮೇಖಲೆಯರಸ ರವಿಮುಕುಟತಟವಿಲಸ |
ದಲಘುಮುಕ್ತಾಮಣಿಯೆ ಶರಣಚಿಂತಾಮಣಿಯೆ ಧರಣಿಯಂ ಸಲಹಲೆಂದು ||
ಜಲಜಾಪ್ತಗೋತ್ರಸಂಭವನೆನಿಸಿ ಗೌತಮನ |
ಲಲನೆಯಂ ಪೂತಳೆಂದೆನಿಸಲೀ ಮುನಿಯೊಡನೆ |
ನೆಲದಿ ಚರಿಸುವೆಯಲ್ಲದೆಲ್ಲಿಯದು ಸಂಚಲನೆ ಚಲನಾದಿರಹಿತ ನಿನಗೆ || (11)

---

1 ಮುತ್ತರೋಘಲರೂಪವೆಂದು.

ಸಕಲಲೋಕಾನಂದಕರನೆನಿಪ ಮುನಿರಾಯ |
ಭಕುತಿಯಿಂ ನಿನ್ನಂಘ್ರಿಪಂಕಜವನಾಶ್ರಯಿಸಿ |
ನಿಖಿಲಲೋಕಂಗಳ ಪವಿತ್ರಗೊಳಿಸುವಡಿಚ್ಛೆಗೈದ ತನ್ಮಹಿಮೆಗಳನು ||
ಪ್ರಕಟಪೊಡದಾರ್ಗಳವು ಭೂದಿವಿಜರಗ್ಗಳನ |
ಶಕುತಿಯುಳ್ಳನಿತನೊರೆದಪೆ ತಪೋಧನಗಣದ |
ನಿಕಟದೊಳಗಾಲಿಸು ರಘೂತ್ತಮನೆ ಲೋಕೋಪಕಾರವಾಗೀ ಚರಿತೆಯ || (12)

ಸರಸಿಜಾಸನತನಯಕುಶನಾಮಭೂಭುಜನು |
ಪರಮಧರ್ಮಜ್ಞ ಕೃತವಿದ್ಯ ಜನಹಿತಕಾರಿ |
ಚಿರಕಾಲ ರಾಜ್ಯಮಂ ಪಾಲಿಸಿದನಾ[1](ವಿಧಿ)ಗೆ ಕುಶನುದಿಸೆ ಮತ್ತಾತಗೆ ||
ಸುರಪಸಮಕುಶನಾಭನಾತನಿಗೆ ಗಾಧಿ ಶುಭ |
ಚರಿತ ಸತ್ಕೀರ್ತಿಯುತನಾತನುದರಾಬ್ಧಿಯೊಳು |
ಶರದಿಂದುನಿಭನೀ ಮಹಾತ್ಮವಿಶ್ವಾಮಿತ್ರ ಜನಿಸಿದಂ ಸುಧೆಯೆಂಬೊಲು || (13)

ಬಲು ವರಷಸಾಸಿರಂ ನೆಲನ ಪಾಲನೆಗೈದು |
ಪಲಬಗೆಯ ಸದ್ಧರ್ಮಗಳ ಮಾಡಿ ಸೌಖ್ಯ[2](ಸಂ) |
ಕಲಿತನಾಗಿರ್ದ ಭೂಭುಜನೊಂದು ದಿನ ಲೋಕಯಾತ್ರೆಯಂ ಮಾಳ್ಪೆನೆಂದು ||
ನೆಲನೀದ ತೆರದೊಳಕ್ಷೋಹಿಣೀಗಣದೊಡನೆ |
ಲಲಿತಗಜಹಯರಥಪದಾತಿಚತುರಂಗದಿಂ |
ಚಲಿಸಿದಂ ಜಗತಿಯಂ ನೋಡಲ್ಕೆತಂದನಾ ಸುರರಾಜನೆಂಬಂದದಿ || (14)

ನಗರ ಪತ್ತನ ಖೇಟ ಖರ್ವಾಟ ಪುಣ್ಯನದಿ |
ನಗನಿಚಯುಗಳನೆಲ್ಲ ನಿಟ್ಟಿಸುತ ನಡೆಗೊಂಡು |
ಸೊಗಸಿನಿಂದೈತರಲ್ ಕೌತೂಹಲಾನ್ವಿತದಿ ಖಗಮೃಗಲತಾಗುಲ್ಮದಿಂ ||
ಬಗೆಬಗೆಯ ಫಲಪುಷ್ಪಯುತಚೈತ್ರರಥದಂತೆ |
ಸಗರಾನ್ವಯದ ಗುರುವು ಗುರುತಪೋನಿಲಯ ಸ-|
ನ್ಮೃಗಧರೋಪಮವಸಿಷ್ಠಾಶ್ರಮಂ ರಾಜಿಸಿದುದಾನಂದಕರಮೆಂಬೊಲು || (15)

---

1 ಪಾಲಿಸಿದನಾತಂಗೆ—

ಪ್ರಜಾಪತಿಸುತಸ್ತ್ವಾಸೀತ್ಕುಶೋನಾಮ ಮಹೀಪತಿಃ ||
ಕುಶಸ್ಯ ಪುತ್ರೋ ಬಲವಾನ್ ಕುಶನಾಭಸ್ಸುಧಾರ್ಮಿಕಃ || ೧೮ ||
ಕುಶನಾಭಸುತಸ್ತ್ವಾಸೀದ್ಗಾಧೀರಿತ್ಯೇವ ವಿಶ್ರುತಃ ||
ಗಾಧೇಃ ಪುತ್ರೋ ಮಹಾತೇಜಾ ವಿಶ್ವಾಮಿತ್ರೋ ಮಹಾಮುನಿಃ || ೧೯ ||

(ವಾ. ರಾ.—೫೧ನೆಯ ಸರ್ಗ.)

2 ಸೌಖ್ಯದಿಂ |

ಒಂದೆಡೆಯ ಸದ್ಯೋಗದುದ್ಯೋಗಭೋಗದಿಂ |
ದೊಂದೆಡೆಯ ಸದ್ಬ್ರಹ್ಮರಾಗ ಸವಿರಾಗದಿಂ |
ದೊಂದೆಡೆಯ ಯಾಗಾನುಯೋಗದುರುಪೂಗದಿಂ ಜಪತಪಃಸ್ವಾಧ್ಯಾಯದ ||
ಒಂದೆಡೆಯ ನಿಗಮಾಗಮಂಗಳ ವಿಚಾರದಿಂ |
ದೊಂದೆಡೆಯಲಿತಿಹಾಸಪೌರಾಣಗಾಥೆಯಿಂ |
ದೊಂದೆಡೆಯಲುಪನಿಷತ್ಸಾಂಖ್ಯಾನುಲಾಪದಿಂದೆಸೆದುದಾ ಬನ ರಮ್ಯದಿ || (16)

ಮಾಸ ಮುಮ್ಮಾಸ ಷಣ್ಮಾಸದುಪವಾಸಿಗಳ್ |
ಲೇಸೆನಿಪ ತಂಗಾಳಿಪರ್ಣದಾಹಾರಿಗಳ್ |
ವಾಸಿಯಿಂ ನಿತ್ಯೋಪವಾಸಿ ಮಾಭಕ್ಷಿಣಿಗಳಾವೆಡೆಯ ಪಂಚಾಗ್ನಿಯಾ |
ವಾಸಿಗಳ ಮಧ್ಯದೊಳದೊಂದುಂಗುಟವನೂರಿ |
ಬೇಸರದೆ ಬಾಹುಗಳ ಬಾನೆಡೆಗೆ ನೆಗಪುತಂ |
ವಾಸವನ ಪದವ ನಿಲ್ಕುವೊಲೆಸೆವ ತಪಸಿಗಳ ವೃಂದ ರಾರಾಜಿಸಿದುದು || (17)

ಆವದೊಂದೀಕ್ಷಿಸದೆ ದಿಟ್ಟಿಗಳು ತಿರಮಾಗ |
ದಾವರೋಧಂಗೈಯ್ಯದಲೆ ವಾಯುನಿಜಮಾಗಿ |
ತಾವಿಲ್ಲದಲೆ ಚಿತ್ತಚಂಚಲಂಗಳ ನೀಗಿ ಖೇಚರಿಯನವಲಂಬಿಸಿ ||
ಸಾವಧಾನದೊಳು ಭಾವಾಭಾವಮುಭಯಗಳ |
ನೋವಿ ತೊಡಕದ ಸದಾನಂದ ಬ್ರಹ್ಮತ್ವಕದ |
ಕೋವಿದರದೊಂದೆಡೆಯ ಬಳಸುವರು ಪ್ರಾಪಂಚಸ್ವಪ್ನಾಭಮೆಂದರಿವುತ || (18)

ಹೊರಗೆ ದಿಟ್ಟಿಗಳಿಟ್ಟು ಹಳಚದೆವೆಗಳ ಮರುತ |
ಚರಿಸದಂದಲನಾಯಾಸದಿಂ ಸಮುಗೈದು |
ಮರೆದು ವಿಷಯಂಗಳಂ ಸುಪ್ತಿಜಾಗರಮುಭಯಸಾಕ್ಷಿಯಂ ನೋಡುತೊಳಗೆ ||
ಪರಿಪರಿಯ ಸುಖರಾಶಿಗಳನುಂಬ ಶಾಂ[1](ತತೆ)ಯ |
ಧರಿಸಿರುವ ದಿವ್ಯತಾಪಸವರ್ಯರಲ್ಲಲ್ಲಿ |
ಮೆರೆದಪರು ಚಿಂತಿಸಿ ಹಿತಾಹಿತವ ಸಂತಸದಿ ಜಾಗರಾವಸ್ಥೆಯಲ್ಲಿ || (19)

ಬಲಿದು ಸಿದ್ಧಾಸನವ ನಲವಿನಿಂ ದಿಟ್ಟಿಗಳ |
ಚಲನೆಯಿಲ್ಲದೆ ನಾಸಿಕಾಗ್ರದಲ್ಲಳವಡಿಸಿ |
ವೊಲವಿನಿಂ ನಾಲ್ಕಾರು ವಸುದಶದ್ವಾದಶಾಂಗುಲಸಂಖ್ಯೆಯಲ್ಲಿ ನಿಜದಿ ||
ಕಲಿತ ನೀಲಸುಧೂಮ್ರರಕ್ತದಲಿ ಪೀತಾಂಗ-|
ದೊಲವಿನಿಂ ರಾಜಿಸುವ ತತ್ವಪಂಚಕಗಳಂ |
ಚೆಲುವಿಂದ ನಿಟ್ಟಿಪ ಮುಮುಕ್ಷುಗಣ ರಾಜಿಸಿದುವಲ್ಲಲ್ಲಿ ಚಿತ್ರಮೆನಲು || (20)

---

1 ಶಾಂಬವಿಯ.

ಶಶಿರವಿಗಳಂ ಮುಗಿದು ಪೊಸಧನಂಜಯನಲ್ಲಿ |
ಮಿಸುಕುವಂದದಿ ಮನೋಮರುತರಂ ನೆಲೆಗೊಳಿಸಿ |
ಸಸಿನೆ ದಶವಿಧನಾದಗಳ ಕೇಳಿ ಮೈಮರೆದು ಪುಳಕ ಪೊರಪೊಣ್ಮುತಲ್ಲಿ ||
ಬಿಸಜಭವನರಸಿಯನ್ನಂಟ ಭಾಸುರಮಪ್ಪ |
ವಸುರಾಜಶತತೇಜದೊಳು ಲೀನವಾಗಿ ಕಂ |
ಪಿಸದೆ ನಿಶ್ಚಲತೆಯೊಳು ರಾಜಿಪನುಭವಿಗಳುಂ ತೋರ್ದರಲ್ಲಲ್ಲಿ ಬಳಿಕ || (21)

ಅಡರಿ ರತ್ನಾಚಲವನಲ್ಲಿ ಮೂಡಿಹ ಶಶಿಯ |
ತುಡುಕಿ ಚುಂಬಿಸಿ ತನ್ನ ಮರೆವುತೂಹಾಪೋಹ |
ತೊಡಕುಗಳನಂಟದಾರೂಢರತ್ಯಾನಂದಮಯರಾಗುತಲ್ಲಲ್ಲಿಯೆ ||
ಪಿಡಿದಿರ್ಪ ಯೋಗಮುದ್ರೆಗಳ ನಿಡುಜಡೆಗಳಂ |
ಮೃಡಸದೃಶರೆನಿಸಿ ಭಸ್ಮೋದ್ಧೂಳನಂಗೈದು |
ಪೊಡೆಗಳಿಂ ಪೊಡವೀಶನಿದಿರಿನೊಳ್ ರಾಜಿಸಿದರರ್ಥಿಕೌತೂಹಲದೊಳು || (22)

ಹರಿಕರಿಗಳೊಂದೆಡೆಯ ಪುಲಿಯುಹರಿಣಂಗಳುಂ |
ಸರಸಸಲ್ಲಾಪದಿಂದುಳಿದು ವೈರಂಗಳಂ |
ನುರಗಭೇಕಂಗಳುಂ ಗಿಳಿಯುಗಿಡುಗಂಗಳುಂ ಭಾಷಿಸುತ್ತಿರುತಿರ್ದುವು ||
ಇರುಳುಪಗಲನವರತ ಸರಸಿಜೋತ್ಪಲನಿಲಯ |
ಮರಳಿರ್ಪವೇನೆಂಬೆ ಪರಿಮಳಿಸುತಾ ಮಹಾ |
ವರತಪೋವಿಪಿನದೊಳು ಶೀತೋಷ್ಣಸಮಭಿನ್ನಮೆಂದೆನಿಸುತಿರುತಿರ್ದುದು || (23)

ಎಲೆವನೆಗಳಂಗಳಗಳಲ್ಲಿ ಚಮರೀಮೃಗಗ-|
ಳೊಲವಿಂದ ನಿಜವಾಲದಿಂದ ಸಮ್ಮಾರ್ಜನೆಯ |
ಚಲನೆಯಂ ಗೈವುತಿರೆ ಕಾಡಾನೆಗಳ್ತುಂಡದಿಂದಲುದಕವನು ಪಿಡಿದು ||
ನಲಿವುತಲಿ ಫೂತ್ಕರಿಸಿ ತಳಿಯೆ ರಚನೆಯ ಮಾಳ್ಪ |
ವಲಘು ಪೂವ್ವಣಿಗಳು ಪಿಪೀಲಿಕೆಗಳೆಸಗುತಿರೆ |
ಮಲಯಮಾರುತ[1]ಶ್ರ(ಮಾಧಿಕ್ಯ) ನೀಗುತಲಿರುವನನುಸರಿಸಿ ದಿನದಿನದೊಳು ||

ಇದ್ದಲ್ಲಿಗೈತಂದು ವಿನಯದಿಂ ತಲೆವಾಗಿ |
ಗದ್ದುಗೆಗಳಂ ದರ್ಭೆಸಮಿಧೆ ಪೂವಣ್ಣಳಂ |
ಸಿದ್ಧಮಂಗೈದಿತ್ತು ಪೂಜೋಪಕರಣಗಳನೊದಗಿಸುತ[1] (ತವ)ಕದಿಂದ ||
ಮೆದ್ದ [2](ಪೆರುಪಳುವದಿಂ) ಹೋಮಗೆಂಡವ ಪಿಡಿದು |
ತಿದ್ದೂಗಿ ಬರುವ ಋಷಿಪತ್ನಿಯರ ವಾಣಿಗಳೊ |
ಳಿದ್ದಳೋ ಭಾರತಿಯುದೆಂಬಂತೆ ಲಾಲಿಪರ್ಗಾನಂದಕರಮಾಗಲು || (25)

---

1 ಶ್ರಮೋದಕವ

2 ನೊದಗಿಸುತಲಣಕದಿಂದ || ಮೆದ್ದಪೆಸು ಪಳುವಿಂಡು.

ಬರುವ ಋಷಿಪತ್ನಿಯರಿಗಾತಪದ ಭಯದುರುಬೆ |
ದೊರಕದಂದದಿ ಸೋಗೆಪಂಸೆಗಳು ಪಕ್ಕಗಳ |
ನರಳಿಸುತ ಬಾನೆಡೆಯ ಬರುವ ಪರಿಯಂ ಕಂಡು ಭರದಿ ಬಳಗಂಗಳೊಡನೆ ||
ತರತರದೊಳೈತಪ್ಪವಾ ಹೋಮಧೂಮದುರು |
ಪರಿಮಳವನುಂಬಡ್ಯೆತಂದ ಬಂಭರನಿಚಯ |
ಮೆರೆವವಂಬರದಂತದೇವೇಳ್ವೆನಾಶ್ರಮದ ಬೆಡಗಿನತಿಸಡಗರವನು || (26)

ದ್ವಿಜಗಣಸಮಾಕೀರ್ಣ ಬ್ರಹ್ಮರ್ಷಿಸೇವಿತಂ |
ವಿಜಿತಾಕ್ಷದೇವರ್ಷಿನಿಚಯದಿ ವಿರಾಜಿತಂ |
ನಿಜತಪಶ್ಚರಣಸಂಸಿದ್ಧವೈಖಾನಸಪ್ರಮುಖಮುನಿಗಳ ವೃಂದದಿಂ ||
ಅಜಲೋಕದಂತಮಿತಋಷಿವಾಲಖಿಲ್ಯಾದಿ |
ಸುಜನರಿಂ ಪರಿವೇಷಗೊಂಡ ರವಿಮಂಡಲದ |
ಗಜಬಜದೊ[1]ಳೆ(ಂದೆನೆ ವ)ಸಿಷ್ಠಾಶ್ರಮದ ಭೂಮಿಯಂ ಕಂಡ ನೃಪವರ್ಯನು ||

ಸತತಸಜ್ಜನಸೇವ್ಯಮಾದ ಸಿದ್ಧಾಶ್ರಮವ |
ಮತಿಯುತಶ್ರೇಷ್ಠಗಾಧಿಜ ನೋಡುತೊಳಪೊಕ್ಕು |
ಚತುರಾಸ್ಯನಂದನಂಗಭಿನಮಿಸಲಾ ಮೌನಿ ಪರಸಿ ಕುಶಲವನು ಕೇಳಿ ||
ಕ್ಷಿತಿಪತಿಯ ದಿವ್ಯಪೀಠಾಗ್ರದೊಳ್ಕುಳ್ಳಿರಿಸಿ |
ಕತಿಪಯ ಫಲಾದಿಗಳ ಋಷಿ ಯಥಾನ್ಯಾಯದಿಂ |
ಗತಿಯಿಂದ ಸತ್ಕಾರಗೈದನಾತಿಥ್ಯಮುನ್ನಿತ್ತು ಮನಮೆಚ್ಚುವಂತೆ || (28)

ಪರಮಪೂಜಾರ್ಹಋಷಿಯಿಂದ ಪೂಜೆಯ ಕೊಂಡು |
ದೊರೆಗಳರಸಾ ವಸಿಷ್ಠನ ತಪಃಕ್ಷೇಮಮಂ |
ಭರದಿಂದ ಬೆಸಗೊಂಡು ಸಂತೋಷಮಯನಾಗಿ ಮಂಡಿಸಿರಲಜನಂದನಂ ||
ಮರಳಿ ಕೇಳಿದ ಮಹಾರಾಜ ರಾಷ್ಟ್ರಂಕೋಶ |
ಪರಮಮಿತ್ರಕಳತ್ರಪುತ್ರಭೃತ್ಯಾದ್ಯಖಿಳ |
ಪರಿಕರವುಕುಶಲಮಾಗಿರ್ಪುದೇಸದ್ಧರ್ಮಮಂ ಮೀರದನುದಿನದೊಳು || (29)

ಲೋಕಮಂ ಪಾಲಿಪೆಯ ಪಿತನಂತೆ ಸಜ್ಜನಾ |
ಲೋಕನಪ್ರಿಯನಾಗಿ ರಿಪುಗಳನ್ನಪಹರಿಸಿ |
ಲೋಕೈಕಮಿತ್ರವಿಶ್ವಾಮಿತ್ರನೃಪತಿಲಕ ಕರ್ಮಮಂ ಪಡೆದಿರ್ಪೆಯ ||
ಶ್ರೀಕರದೊಳೆನೆ ಮುನಿ ಭವತ್ಕರುಣದಿಂ ಸುಖಾ |
ನೀಕಮಂ ಪಡೆದಿರ್ಪೆನೆಂದಡೆ ತಪೋಧನಂ |
ಭೂಕಾಂತನೊಡನೆಂದ ಮುನಿ ರಸೋತ್ಸಿಕ್ತಶುಭಸಂಜನಿಸಿ ನಸುನಗುತಲಿ || (30)

---

1 ಗಜಬಜದೊಳೆನೆಯಲ್ಪಸಿಷ್ಠಾಶ್ರಮದ.

ರಾಜನ್ಯವರ್ಯ ಮೂಲೋಕಬಾಂಧವ ಬುಧಸ |
ಮಾಜನುತ ಪೂಜಾರ್ಹ ಪ್ರಿಯದಿಂದ ಸನ್ಮಾನಿ |
ರಾಜಿಯಂ ನಿಟ್ಟಿಸುವಷ್ಟೈತಂದೆ ನೃಪತಿ ನಮ್ಮಾಶ್ರಮದೊಳೀ ದಿನದೊಳು ||
ಭೋಜನಂಗೈದು ಪೋಪುದು ಭಜಕಲೋಕಸುರ |
ಭೂಜ ನಿಜಬಲಸಹಿತಮೆನಲರಸ ಯತಿಪಾದ |
ರಾಜೀವಕಭಿನಮಿಸುತಿಂತೆಂದನತಿಭಕ್ತಿಯಿಂದಲಾನಂದದಿಂದ || (31)

ದೇವ ತತ್ವದ ವಿಲೋಕನ ಮಹದ್ದುಪಚಾರ |
ಪಾವನಕಥಾಶ್ರವಣದಿಂದಾನು ಪರಿಪೂರ್ಣ |
ಭಾವಯುತನಾಗಿರ್ಪೆ ಕೃಪೆಯಿಂದ ಬೀಳ್ಕೊಟ್ಟೊಡೈದುವೆನು ನಿಜನಗರಿಗೆ ||
ತಾವಕೀನಾಂಘ್ರಿಯಂ ನೆನೆಯುತ್ತಲೆನೆ ಕೇಳಿ |
ಭೂವಧೂವಲ್ಲಭನೆ ಮಾಡುವಾತಿಥ್ಯಮಂ |
ಠೀವಿಯಿಂ ಕೈಕೊಂಡು ಗಮಿಸವೇಳ್ಕೆನೆ ತಪೋರಾಶಿಯೊಡನಿಂತೆಂದನು || (32)

ಭವದೀಯಚಿತ್ತಾನುವೃತ್ತಿಯಿಂದಾಂ ನಡೆವೆ |
ಶಿವರೂಪತಾಪಸೋತ್ತಮನೆನುತ ಗಾಧೇಯ |
ವಿವಿಧೋಪಚಾರದಿಂ ಬಿನ್ನವಿಸೆ ಸಂತೋಷವೆತ್ತಾ ವಸಿಷ್ಠ ಮುನಿಯು ||
ತವಕದಿಂ ಶಬಲೆಯನ್ನಾಕರ್ಷಣಂಗೈದ |
ನವನವಕವಾಣಿಯಿಂ ನಾನಾಪ್ರಕಾರದಿಂ |
ದವಿರಳಪ್ರೇಮದಿಂದಾ ಮುನಿಪ ಕರೆಯಲುಂ ಬಂದುದಾಕ್ಷಣಕಲ್ಲಿಗೆ || (33)

ಬರೆ ನಂದಿನಿಯ ನೋಡಿ ಪರಮಋಷಿಯಿಂತೆಂದ |
ಸುರರಾಜಪೂಜಿತಳೆ ಧರಣಿಪತಿಗಾತಿಥ್ಯ |
ಪರಿಕರವ ಚತುರಂಗಬಲ ಬಯಸಿದಿಷ್ಟಮೃಷ್ಟಾನ್ನಮಂ ಬೇಗದಿಂದೆ ||
ವಿರಚಿಪುದು ಲೇಹ್ಯಚೋಷ್ಯವುಖಾದ್ಯಮೊದಲಾದ |
ಪರಿಪರಿಯ ಭೋಜನಕ್ಕುಪಕೃತಿಯನೆಂದು ರಿಸಿ |
ಯೊರೆದ ಮಾತ್ರದಿ ಕಾಮಧೇನುವಿನ ತನುಜಾತೆ ನಿರ್ಮಿಸಿದಳಪರಿಮಿತದಿ || (34)

ಮಧುರಸಂಗಳನಿಕ್ಷುರಸ ಲಾಜ ಮೈರೇಯ |
ವಿದಿತಾಸವಾದಿ ನಾನಾವಿಧದ ಪಾನಗಳ |
ಚದುರಿನಿಂ ಭಕ್ಷ್ಯಮಾ ಸ್ವಾದುಮೋದಕರಾಶಿಗಳ ಪರ್ವತೋಪಮದಲಿ ||
ಮುದದಿಂದ ನಿರ್ಮಿಸುತ ಮೃಷ್ಟಾನ್ನಸೂಪಗಳ |
ದಧಿಘೃತವಪೂಪಗಳ ಶಾಕ ನಾನಾಸ್ವಾದ |
ದದುಭುತದ ಷಡ್ರಸದ ರಸಗಳಂ ನಿರ್ಮಿಸಿದುದಾಕ್ಷಣದೊಳೇನೆಂಬೆನು || (35)

ಆರಾರ ಚಿತ್ತದೊಳಗಿರ್ದಭೀಷ್ಟಗಳೆಲ್ಲ |
ಸಾರಿಬರೆ ಸಕಲಬಲವೆಲ್ಲ ಸಂತೋಷದಿಂ |
ದಾ ರಾಜನಂ ಪೊಗಳುತಿರ್ದರಾ ನೃಪಮಂತ್ರಿಪರಿವಾರಮವರಂದದಿ ||
ತೋರಹರ್ಷವನಾಂತರನಿತರೊಳು ಕೌಶಿಕಂ |
ವೀರಮುನಿವರಮಾಡಿದುಪಚಾರಸಂಭ್ರಮದ |
ಚಾರುತರಮಂ ನೋಡಿ ಕೌತುಕಂಗೊಳ್ಳುತೊಲೆದಾಡಿ ಶಿರವನ್ನಾಡಿದನು || (36)

ಪರಮರ್ಷಿ ತವಚರಣಮಂ ನೋಡಿದಾಕ್ಷಣದಿ |
ಪರಮಹರ್ಷಿತನಾದೆನಧಿಕೋಪಚಾರದಿಂ |
ಪರಿಪರಿಯ ಭೋಜನಗಳಿಂದಲೆನ್ನಭಿಮತವ ಬಿನ್ನವಿಪೆ ಮಗುಳೊಂದನು ||
ವರರತುನರಾಶಿಗಳ ಗೋಶತಸಹಸ್ರಗಳ |
ಭರದಿಂದಲರ್ಪಿಸುವೆನೀ ಶಬಳೆಯನ್ನಿತ್ತು |
ಕರುಣದಿಂ ಕಳುಪುವುದೆನಲ್ಕೆ ವಿಶ್ವಾಮಿತ್ರನೊಡನೆ ಮುನಿಯಿಂತೆಂದನು || (37)

ಗೋಶತಸಹಸ್ರ ಶತಕೋಟಿಗಳ ಸದ್ರತ್ನ |
ರಾಶಿಗಳನಿತ್ತೊಡಾಂ ಕಳುಪುವೊಡಶಕ್ಯಂ ಸು |
ಕೇಶನಾಧೀನವಿದು ಮತ್ಕಾರ್ಯಕೋಸುಗಂ ತಪದಿಂದಲಿತ್ತನೆನಗೆ ||
ಕೋಶವಿದು ಹವ್ಯಕವ್ಯವು ಪ್ರಾಣಯಾತ್ರೆಗಂ |
ಭಾಷಿಸುವ ಬಲಿಹೋಮಮಗ್ನಿಹೋತ್ರಂಗಳಿಗೆ |
ನಾಶ ಸ್ವಾಹಾಕಾರಮುಂತಪ್ಪ ಕಾರ್ಯಗಳಿಗರಸ ಮಮತುಷ್ಟಿಕರವು || (38)

[1]ಹೈರಣ್ಯಕಟಕ ಗ್ರೈವೇಯಕುಂಡಲಶತವ |
ನೂರಾರುಸಾವಿರ ಗಜಂಗಳಂ ಕಮನೀಯ |
ಚಾರುಚೀರಿತ ಶುಭ್ರಹಯಯುತಶತಾಂಗಶತಷೋಡಶಗಳನ್ನು ಬಳಿಕ ||
ನೂರಕೊಂದೊಂದೆಣಿಸಿದತುಲಿತಸುಗಮನಗಾಂ |
ಧಾರಭವಘೋಟಕವ ದಶಸಾಸಿರಂಗಳಂ |
ಧೀರ ನಿನಗರ್ಪಿಸುವೆ ಶಬಲೆಯನ್ನೀವುದೆನಲಿಂತೆಂದ ಮುನಿರಾಯನು || (39)

---

1 ಹೈರಣ್ಯ ಕಕ್ಷ್ಯಾನ್ ಗ್ರೈವೇಯಾನ್ ಸುವರ್ಣಾಂಕುಶಭೂಷಿತಾನ್ ||೧೭||
ದದಾಮಿ ಕುಂಜರಾಂಸ್ತೇಹಂ ಸಹಸ್ರಾಣಿ ಚತುರ್ದಶ ||
ಹೈರಣ್ಯಾನಾಂ ರಥಾನಾಂ ತೇ ಶ್ವೇತಾಶ್ವಾನಾಂ ಚತುರ್ಯುಜಾಂ ||೧೭||
ದದಾಮಿತೇ ಶತಾನ್ಯಷ್ಟಾ ಕಿಂಕಿಣೀಕ ವಿಭೂಷಿತಾನ್||
ಹಯಾನಾಂ ದೇಶಜಾತಾನಾಂ ಕುಲಜಾನಾಂ ಮಹೌಜಸಾಂ ||೧೯||
(ವಾ. ರಾ.—೫೩ ನೆಯ ಸರ್ಗ.)

ಧನಕನಕವಸ್ತುಗಳು ರಥಗಜಹಯಂಗಳುಂ |
ಚಿನಿಚಿನಾಂಬರ ರತ್ನನಿಚಯ ಪಶುಜೀವನಂ |
ಘನದರ್ಶ ಪೂರ್ಣಮಾಸಂಗಳುರುಯಜ್ಞಗಳಿಗಾತ್ತದಕ್ಷಿಣೆಯು ಬಳಿಕ ||
ಎನಗೆ ಸುರಧೇನುವೇ ಸರ್ವಸ್ವವೆಲೆ ರಾಯ |
ನಿನಗೆ ಕೊಟ್ಟಪೆನೆಂತು ಮಜ್ಜೀವನಾಧಾರ | ನೃಪತಿ || (40)
ವನು ಬಳಿಕ ಬಹಳೋಕ್ತಿಯಿಂದೇನು ಫಲ ಕೊಡೆನು ಕಾಮದೋಗ್ಧ್ರಿಯನು

ಏಸು ವಿಧದಿಂ ಬೇಡಲೀಯದಿರೆ ನಂದಿನಿಯ |
ವಾಸವೋಪಮಶೌರ್ಯನತಿರೌದ್ರದಿಂ ಪಿಡಿದು |
ಬೇಸರದೆ ಸೆಳೆಯಲಾ ಶಬಲೆ ದುಃಖದಿ ನೊಂದು ಚಿಂತಿಸಿದುದೀ ಪರಿಯಲಿ ||
ಸೂಸುತಲಿ ಕಂಬನಿಯನಾ ಶಬಲೆ ಮರುಗುತಂ |
ಭಾಸುರದಯಾ[1](ಳು)ಮುನಿ (ವರ್ತನೆ)ಯ ತೆಜಿಸಿದಂ |
ಭೂಸುರೋತ್ತಮನಿಗೇನಪಕಾರಮಂ ಗೈದೆನೆಂದು ತನ್ನೊಳಗೆ ಕುದಿದು || (41)

ಮರುತವೇಗದೊಳೈದಿ ಚರಣಸಾನಿಧ್ಯಕಂ |
ಪರಮಋಷಿಯೆನ್ನಿಂದಲಪಕಾರಮಾವುದೀ |
ಪರಿಯ ಚರರುಂ ಸೆಳೆದು ಭಾಧಿಸುವೊಲನುಮತಿಯನಿತ್ತೆಯೇಂ ಕಾರಣದೊಳು ||
ಕರುಣಿಸೆಂದೊರಲುತಿರಲಿಂತೆಂದನಾ ಮುನಿಪ |
ಸುರಧೇನುಜಾತೆ ಕೇಳ್ನಿನ್ನಿಂದ ದೋಷ ಸಂ |
ಕರಮಪ್ಪುದುಂಟೆ ನೀನೆಂತೆಮ್ಮೊಡನೆ ಚೋದ್ಯತರವಾಣಿಯನ್ನಾಡುವೆ || (42)

ಭೂಮೀಶನತಿಬಲಕ್ಷತ್ರಿಯಂ ಗಜಹಯ-|
ಸ್ತೋಮದಿಂದೈತಂದು ನಿಜತೇಜಸಂವರ್ತ |
ಭೀಮನಂದದಿ ಪಿಡಿದು ಕೊಂಡೊಯ್ವ ಬುದ್ಧಿಯಿಂ ತುಡುಕಿರ್ಪ ಶಬಲೆ ನಿನ್ನ ||
ಸಾಮದಿಂ ಪೇಳಿದಡೆ ಕೇಳ ಬಲವೆಮಗಿಲ್ಲ |
ಈ ಮಹಿಗೆ ವಿಪ್ರರುಂ ಕಲಹಭೀರುಗಳಲ್ತೆ |
ನೀ ಮರುಗಿ ಮಾಳ್ಪದೇನೆನಲಾ ವಸಿಷ್ಠನೊಡನಿಂತೆಂದಳಾ ಸುರಭಿಯು || (43)

ಸರಸಿಜಾಸನತನಯ ವರತಪೋಮಂದಿರನೆ |
ಪರಮಪುರುಷನೆ ಬ್ರಹ್ಮತೇಜೋಬಲಾನ್ವಿತನೆ |
ಕರುಣೆಯಿಂದೆನಗಪ್ಪಣೆಯನಿತ್ತಡೀ ಕ್ಷತ್ರಕುಲಘಾತಕನ ಗರ್ವಮಂ ||
ಮುರಿವ ಬಲವಂ ಸೃಜಿಪೆನೆನಲು ಶಬಲೆಯೊಳೆಂದ |
ಭರದಿ ಯವನಾದಿಭಟರಂ ಬೇಗ ನಿರ್ಮಿಸಿಯೆ |
ತ್ವರಿತದಿಂದವಲೇಪಹರಗೈವುದೆನ್ನಲಾ ಕಾಮದುಘೆ ಕೋಪದಿಂದ || (44)

1 ದಯಾನುಮುನಿವರ್ತಿನಿಯ

ಹುಂಕರಿಸೆ ಪಪ್ಲವರ ಶತಕೋಟಿ ನಿಮಿಷದೊಳ್ ।
ಝೊಂಕರಿಸಿ ಚಾಪಗಳ ಗಾಧಿಜನ ಬಂದಧಿಕ ।
ಬಿಂಕಮಂ ಮರ್ದಿಸುತಲೈತರಲ್ಕಂಡು ನೃಪ ರೋಷತಾಮ್ರಾಕ್ಷನಾಗಿ ॥
ಸಂಖ್ಯೆಯಿಲ್ಲದ ಶರಂಗಳಿನಿಟ್ಟು ಕೆಡಪಿದಂ ।
ಕಿಂಕರರನರೆನಿಮಿಷ ಮಾತ್ರದಲಿ ನೋಡುತಲ ।
ಸಂಖ್ಯೇಯ ಹಯವನುಂ ಸೃಜಿಸಿತಾ ಕ್ಷಣದಲ್ಲಿ ಸುರಭಿ ಕೋಪದಲಿ ಮಗುಳೆ ॥

ಕೆಂಗಣ್ಣ ಕೆದರ್ದಲೆಯ ತೆರೆವಾಯ ಪೊಡರ್ವೊಸೆ ।
ತುಂಗತರನಾಸಿಕಂ ಹೆದ್ದಂಷ್ಟ್ರ ಭೀಕರಬೆ ।
ಡಂಗಿನುದ್ದಂಡನಿಡುದೋಳ್ಗಳದ್ಭುತದ ಘನರವದಿ ಪಿಡಿದಸಿಗಳಿಂದ ॥
ಮುಂಗೈಯ ಪೆರ್ವಲಗೆ ಬಿಲುಗೋಲ್ಗಳಪರಿಮಿತ ।
ದಿಂಗಳಗಳುಚ್ಚಳಿಪ ದುಃಶ್ವಾಸಸಂಕಲಿತ ।
ಸಂಗಡಿಗರೆಮನಾಳ್ಗಳಂತಮವು ಮೈದೋರಿತವನಿಯುಂ ಗದ್ಗದಿಪೊಲು ॥ (46)

ಹೈಮಕಿಂಚಲ್ಕನಿಭವರ್ಣಸಂವೃತರಾದ ।
ಭೀಮರೂಪಿನ ಯವನಶಕರಾಗಿ ಪಟ್ಟಸವ ।
ನೇಮದಿಂ ಪಿಡಿದೈದಿ ಗಾಧಿತನಯನ ಚಮೂನಾಶನಂಗೈಯೆ ಮುದದಿ ॥
ಆ ಮಹೀಪಾಲನತಿಕೋಪದಿಂದಸ್ತ್ರಗಳ ।
ಲಾ ಮಹಾಚರರೆಚ್ಚು ಕೆಡಪಲ್ಕೆ ಶಕಜನ ।
ಸ್ತೋಮಮುಳಿವುದ ನೋಡಿ ನಂದಿನಿಯೊಳಿಂತೆಂದನಾ ತಪೋಧನನುಗ್ರದಿ ॥ (47)

ತುಡುಕಿ ಯೋಗವ ಮಹಾಬಲವ ನಿರ್ಮಿಸಿ ಬೇಗ ।
ಕೆಡಪು ರಿಪುಸೈನಿಕರನೆಂದರಾ ಶಬಲೆ ತಾ ।
ನೊಡನೆ ಹುಂಕೃತಿಗೈಯೆ ಹುಂಕಾರದಿಂ ಜಾತಮಾಯ್ತು ಕಾಂಬೋಜನಿಕರ ॥
ಕಡುರೋಷಯುತಯವನಮ್ಲೇಚ್ಛಪಶ್ಚಾತ್ಕ್ರೂರ ।
ರಡಿಗಡಿಗೆ ಘುಡುಘುಡಿಪ ಪಪ್ಲವಶಕಾದಿಗಳ್ ।
ಪಿಡಿದ ಖಡುಗಗಳಿಂದಲೈತಂದುದೇನೆಂಬೆ ನೆಲನೀದ ಮಾಳ್ಕೆಯೊಳಗೆ ॥ (48)

ಕೆಚ್ಚಲೊಳು ಪಪ್ಲವರು ಶರಚಾಪಪಾಣಿಗಳು ।
ನಿಚ್ಚ ಕಲಹೋದ್ಯುಕ್ತಯವನರುಂ ಯೋನಿಯೊಳ ।
ಗಚ್ಚಶಕರಾ ಶಕೃತ್ಪ್ರದಾನುಗತರೆನಿಸಿ ರೋಮಕೂಪಂಗಳೆಡೆಯಿಂ ॥
ಮಚ್ಚರಿಕಮ್ಲೇಚ್ಛಕಿರಾತ ಕಾಂಭೋಜರುಂ ।
ಕಿಚ್ಚನುಗುಳುವ ಕಂಗಳಿಂದ ಘೋರಾಕಾರ ।
ದಚ್ಚರಿಯೊಳು ಸರಿದರದೇನೆಂಬೆ ನಿಮಿಷದೊಳ್ ಶಬಲೆಯ ಮಹಾಮಹಿಮೆಯ ॥

ಉದಿಸಿದಾಕ್ಷಣ ಗಾಧಿಸುತನ ಚತುರಂಗಮುಂ |
ಸದೆವುತ್ತೈತರಲವನ ತನುಭವರು ಕಾಣುತ್ತ |
ಲೊದಗಿ ಬಂದು ವಸಿಷ್ಠಮುನಿಪನಂ ಶಿಕ್ಷಿಸುವ ದುರ್ಬೋಧೆಯಿಂದೈತರೆ ‖
ಚೆದರಿಸುತ ಹುಂಕರಿಸೆ ಬಲಸಹಿತ ಕುಶಿಕಸುತ |
ನದುಭುತದ ಸುತರು ಸಹನಿರ್ದಗ್ಧಮಾಗಲ್ಕೆ |
ಚೆದರಿದುಳಿದ ಸಮೂಹ ವೀಕ್ಷಿಸುತಲಾ ನೃಪಂ ಚಿಂತಿಸಿದ ಕಡುಲಜ್ಜೆಯಿಂ ‖ (50)

ವೇಗವಳಿದ ಸಮುದ್ರದಂತೆ ದಶನಂಗಳುಂ |
ಪೋಗಿರ್ಪ ಭೋಗಿಯುಪರಕ್ತನಾದಿತ್ಯನೊಲು |
ಬೀಗಿರ್ಪ ಪಕ್ಷಯುತದ್ವಿಜದಂತೆ ಕೌಶಿಕಂ ಹತದರ್ಪಸಂಕೋಚದಿ ‖
ಬೇಗ ನಿಜರಾಜ್ಯಪಾಲನೆಗೊರ್ವ ಸುತನಂ ನಿ |
ಯೋಗಿಸುತ ವೈರಾಗ್ಯದಿಂದ ಹಿಮವನ್ನಗಕೆ |
ಪೋಗಿ ಭಜಿಸಿದನಿಂದುಶೇಖರನ ಘೋರತಪದಿಂದ ಮನಮೆಚ್ಚುವಂತೆ ‖ (51)

ಹಲಕಾಲಮೀ ಪರಿಯಲುರುತಪವನೆಸಗುತಿರು |
ವಲಘುಭಕ್ತಿಗೆ ಮೆಚ್ಚಿ ವೃಷಭಕೇತನ ಬಂದು |
ಒಲವಿನಿಂದಿಂತೆಂದನೆಲೆ ಭೂಮಿಪೋತ್ತಮನೆ ನೀ ನೆನೆದಭೀಷ್ಟವನ್ನು ‖
ಒಲಿದೀವೆ ಬೇಡೆನಲ್ ವಾಮದೇವ ಮಹೇಶ |
ಫಲವನೀವುದು ನಸ್ನಿಯಾದಡೆ ಧನುರ್ವೇದ |
ಕಲಿತೋಪನಿಷದ ಸಾಂಗೋಪಾಂಗಮಾಗೆನಗೆ ಬಪ್ಪಂತೆ ಕೃಪೆಗೈವುದು ‖ (52)

ಸುರನರೋರಗಯಕ್ಷಕಿನ್ನರರು ಗಾಂಧರ್ವ |
ಪರಮರ್ಷಿಗಳು ದಾನವಾದಿಗಳೊಳಿಹ ಶರಗ |
ಳುರುಗಳೆನ್ನಲ್ಲಿ ನೆಲಸಿರ್ಪಂತೆ ವರವನುಂ ಪಾಲಿಸುವುದೆನಲು ಶಿವನು ‖
ಕರುಣದಿಂದಂತಾಗಲೆಂದೊರೆದು ಗಮಿಸಲ್ಕೆ |
ಪರಮಹರ್ಷೋತ್ಕಟದ ದರ್ಪದಿಂ ಗಾಧಿಸುತ |
ನುರವಣಿಸಿದಂ ಶರಧಿ ಪೂರ್ವದೊಳ್ ಪೆರ್ಚುವೊಲದೇನೆಂಬೆನದ್ಭುತವನು ‖ (53)

ಅಳಿದು ಪೋದ ವಸಿಷ್ಠನೆಂದು ತನ್ನೊಳ್ಪ್ರಾನೆ |
ತಿಳಿದು ಕಡುಗೋಪದಿಂದಾಶ್ರಮಕ್ಕೈತಂದು |
ತಳತಳಿಪ ಪೊಸಮಸೆಯ ಶರವರ್ಷಮುಂ ಕರೆದನೆಡೆವಿಡದೆ ತತ್ಕ್ಷಣದೊಳು ‖
ಇಳೆದಿಶಾಚಕ್ರಂಗಳೇನಾದವೆಂಬುದಂ |
ತಿಳಿಯದಾದುದು ತಮಃಸಂಗದಿಂ ಯತಿತತಿಗ |
ಳಳುಕಿ ದೆಸೆದೆಸೆಗೋಡಿ ಪೋದರರೆನಿಮಿಷದೊಳ್ ಬಯಲಾದುದಾ ವಿಪಿನವು ‖

ಕೆದರಿ ದ್ವಿಜಗಣ ಪಲಾಯನವ ಗೈವುತ ಕೂಗ ।
ಲದುಭುತವನಾಲಿಸಿ ವಸಿಷ್ಠಮೌನಿಗರಿಷ್ಠ ।
ಬೆದರದಿರಿ ಬೆದರಬೇಡೆನ್ನುತಭಯುವನೀವುತಿಂತೆಂದ ವಿಪ್ರರೊಡನೆ ॥
ಸದೆವೆನೀ ಕ್ಷಣ ಗಾಧಿತನಯುನಂ ನೀಹಾರ ।
ದುದಯುವವಿನ್ಮೊಂಟಿಸುವ ಭಾಸ್ಕರನ ರೀತಿಯೊಳು ।
ಹೃದಯದನುತಾಪವಮಂ ಬಿಡುವುದೆಂದೆನುತಿತ್ತನಭಯುಮಂ ಕಾರುಣ್ಯದಿ ॥ (55)

ನೋಡಿದಂ ಕುಶಿಕಾತ್ಮಭವನಂ ವಸಿಷ್ಠಮುನಿ ।
ಮೂಡಿ ಬಹ ಕೋಪದಿಂದೆಲೆ ದುರಾಚಾರ ನೀ ।
ಮೂಢಾಗ್ರಗಣ್ಯನದರಿಂದೀ ತಪೋವನವ ನಾಶನಂಗೈದೆ ಬಳಿಕ ॥
ನೋಡು ಮದ್ಬ್ರಹ್ಮಬಲದೇಳಿಗೆಯ ನಿಜಬಲವ ।
ನೋಡಿಸುವೆ ಶಮಪುರಿಗೆ ಕ್ಷತ್ರಬಂಧುವರಾಕ ।
ನಾಡಿಫಲವೇನೆಂದು ಕಾಲದಂಡೋಪಮದ ಬಹ್ಮದಂಡವ ಪಿಡಿದನು ॥ (56)

ದಿಟ್ಟಸೆನ್ನಯ ಬಲವ ಕ್ಷತ್ರಪಾಂಸನೆ ನಿನ್ನ ।
ದಿಟ್ಟಗಚ್ಚರಿಯಪ್ಪ ಚತುರಚತುರಂಗಮಂ ।
ಕುಟ್ಟಿ ಹುಡಿಗುಟ್ಟುವೆಂ ನಿಮಿಷದೊಳೆನಲ್ಕಾಗಿ ಕೋಪದಿಂದಾ ನೃಪತಿಯು ॥
ತಟ್ಟನಾಗ್ನೇಯಾಸ್ತ್ರಮುಂ ಪಿಡಿದು ಮುನಿವರನ ।
ನಿಟ್ಟಡಾತಂ ಬ್ರಹ್ಮದಂಡದಿಂ ಪರಿಹರಿಸೆ ।
ಪುಟ್ಟಿತಧಿಕಕ್ರೋಧ ವಾರು[1](ಣೈ)ಂದ್ರಂರೌದ್ರಪಾಶುಪತಗಳಲಿಟ್ಟನು ॥ (57)

ಮಾನವಂ ಮೋಹನಂ ಗಾಂಧರ್ವ ಸ್ವಾಪನಂ ।
ನ್ಯೂನಜೃಂಭಣ ವಿಲಾಪನತಾಪನಂಗಳಂ ।
ಪೈನಾಕ ಶೋಷಣಂ ದಾರುಣಂ ವಜ್ರಯುಮಪಾಶಂಗಳಲ್ಲಿ ಬಿಡದೆ ॥
ಏನೆಂಬೆ ಬ್ರಹ್ಮಪಾಶಂ ವರುಣಪಾಶಮುಂ ।
ಕೀನಾಶದಂಡಾಸ್ತ್ರ ಪೈಶಾಚಕ್ರೌಂಚಮುಂ ।
ಬಾನೆಡೆಯು ಕಣ್ಗೊಳಿಸದಂತೆ ಚಕ್ರಗಳಿಟ್ಟು ಬೊಬ್ಬಿರಿದನವನೀಶನು ॥ (58)

ಮರುತಾಸ್ತ್ರ ಧನದಾಸ್ತ್ರ ಹಯಶೀರ್ಷಶಕ್ತಿಗಳ ।
ಉರುತರದ ಕಂಕಾಳ ಮುಸಲ ವೈದ್ಯಾಧರಂ ।
ತರಣಿತನಯಾಸ್ತ್ರಮುಂ ಶೂಲಕಾಪಾಲಮುಂ ಕಂಕಣಾಸ್ತ್ರಂಗಳಿಂದ ॥
ಧರಣೀಶನಿಟ್ಟೊಡಾ ಋಷಿ ಗಣಿಸದವನೆಲ್ಲ ।
ಪರಿಹರಂ ಗೈಯಲಾ ಬ್ರಹ್ಮದಂಡದೆ ಕೋಪ ।
ತುರುಗೆ ಬ್ರಹ್ಮಾಸ್ತ್ರದಿಂದಿಟ್ಟು ಕೆಡಪುವೆನೆಂದು ಕೊಂಡನತಿವೇಗದಿಂದ ॥ (59)

1 ವಾರುಗೇಂದ್ರ

ನಡುಗಿದುದು ಮೂಲೋಕ ದೇವರ್ಷಿಗಂಧರ್ವ |
ರಡಿಗಡಿಗೆ ತಳ್ಳಂಕಗೊಳಲು ಬ್ರಹ್ಮಾಸ್ತ್ರಮು |
ಗ್ಗಡರೋಷದಿಂದಕ್ಕಿ ಕುದಿಯಲಂಘೋರರಾಶಿಯಾ ಸಮಯದೊಳ್ಭೂಪತಿ ||
ಬಿಡೆ ಬಿಟ್ಟು ಬೊಬ್ಬಿರಿಯಲಾ ಶರಂ ಘೋರ್ವೊರೆದು |
ಕಿಡಿಗಳಂ ಕೆದರುತ್ತಲೈತರೆ ವಸಿಷ್ಠಮುನಿ |
ಪಿಡಿದು ಭಕ್ಷಿಸಿದನಾ ವಿಧಿಶರವನಾ ಬ್ರಹ್ಮದಂಡದಿಂದಾ ಕ್ಷಣದೊಳು || (60)

ಸರಸಿಜಾಸನ ಶರವ ನುಂಗಲ್ ವಸಿಷ್ಠನಿಗೆ |
ತ್ವರಿತದಿಂ ರೋಮಕೂಪಂಗಳಲಿ ಕೆಂಗಿಡಿಗ |
ಳರಳಿದವು ತರಣಿಯ ಸಹಸ್ರಕಿರಣಂಗಳೆನಲೇನೆಂಬೆನದ್ಭುತವನು ||
ಮೆರೆದುದಾತನ ಕರದಿ ಬಹ್ಮದಂಡವು ಧೂಮ |
ಪರಿದ ಕಾಲಾಗ್ನಿಯೊಲ್ ಯಮದಂಡದಂದದಿಂ |
ಸುರಋಷಿಗಳೋಡಿ ಭಯದಿಂದ ನುತಿಗೈದರಾ ಮೌನಿಯಂ ಪ್ರೇಮದಿಂದ || (61)

ದೇವ ನಿಜಬಲವಪ್ರಮೇಯವಿದನೀಕ್ಷಿಸನ |
ದಾವ ಲೋಕಂಗಳುಂ ವ್ಯಥೆಗೊಳುತಲಿದೆಜಗ |
ತ್ಪಾವನನೆ ಕರುಣಾಕಟಾಕ್ಷದಿಂದೀ ಮಹಾತೇಜಸ್ಸಿನಲ್ಲಿ ಬಳಿಕ ||
ಓವಿ ಶಾಂತಂಗೈವುದೆಲೆ ತಪೋಧನ ಗರ್ವ |
ವೀ ವಸುಮಹೀಪತಿಗೆ ಬಯಲಾಯ್ತು ಕೃಪೆಯಿಂದ |
ದೇವರ್ಷಿತತಿಗಳಂ ನಿಟ್ಟಿಪುದೆನಲ್ಮೌನಿ ಸಂತಸಂಗೊಂಡನೊಲಿದು || (62)

ಹರನ ವರದಿಂ ತನಗೆ ಬಂದ ಶಸ್ತ್ರಂಗಳುಂ |
ಹರಿದು ನಿಷ್ಫಲಮಾದುದೀಕ್ಷಿಸುತ ಗಾಧಿಸುತ |
ಮರುಗಿ ತನ್ನೊಳ್ತಾನೆ ಲಜ್ಜೆಗೊಂಡಿಂತೆಂದ ಬಿಸುಸುಯ್ಯುತಳಲಿ ಬಳಲಿ ||
ಧರಣಿಯೊಳ್ ಕ್ಷತ್ರಿಯರ ಬಲಮದೇಂ ಸುಡು ಮಹ-|
ತ್ತರಬಹ್ಮತೇಜೋಬಲಂ ತಿಳಿಯೆ ಬಲಮಲ್ತೆ |
ಮರುಗಿ ಫಲಮೇನೊಂದು ಬ್ರಹ್ಮದಂಡದೊಳಸ್ತ್ರತತಿಗಳುಂ ಪೋದವೈಸೆ || (63)

ಆವ ವಿಧದಿಂದಾದಡಾನು ಬ್ರಾಹ್ಮಣನಪ್ಪೆ |
ಪಾವನತರದ ತಪವನಾಚರಿಪೆನೆಂದೆನುತ |
ಮಾ ವಸುಮತೀರಮಣ ಸತಿವೆರಸಿ ಕೊಡನಸುತನಿರ್ಪ ದೆಸೆಗೈದಿ ಬಳಿಕ
ಓವಿ ಸಾಸಿರ ವರುಷ ಘೋರತಪಮಂ ಮಾಡೆ |
ದೇವರ್ಷಿಗಣಸಹಿತಲೈತಂದು ಚತುರಾಸ್ಯ |
ಕೋವಿದನು ವಾಕ್ಯದಿಂದಿಂತೆಂದ ಗಾಧಿನಂದನನೊಳತಿಪ್ರೇಮದಿಂದ || (64)

ನಿನ್ನ ತಪದಿಂ ಚತುರ್ದಶಲೋಕಜನರೆಲ್ಲ |
ಬನ್ನಬಡುತಿದೆ ಕುವರನೀ ಮಹತ್ಕಾರ್ಯದಿಂ |
ನಿನ್ನೆಣಿಕೆ ರಾಜರ್ಷಿಸಮನೆಂದು ಪೇಳುತ್ತಲೈದೆ ಸರಸಿಜಪೀಠನು ||
ಖಿನ್ನನಾಗುತ ಕುಶಿಕಸುತನಧಿಕದುಃಖದಿಂ |
ದನ್ನೆಗಂ ರೋಷಸಂಭವಿಸಿ ತನ್ನೊಳ್ತಾನೆ |
ಎನ್ನ ತಪಸಿಗೆ ಫಲವು ದೊರೆಯದಾದುದೆನುತ್ತ ಚಿಂತಿಸಿದ ತಳ್ಳಂಕದಿ || (65)

ಕುವರರಂ ನಾಲ್ವರು ಹವಿ[1](ಷ್ಯಂದ ದೃ)ಢನೇತ್ರ |
ಸುವಿರಳದ ಮತಿ ಮಧು (ಷ್ಯ)ಂದಂ ಮಹಾರಥಂ |
ಭುವಿಯೊಳತಿಧಾರ್ಮಿಕಂ ಸತಿಸಹಿತಲೊಂದೆಡೆಯೊಳಿಟ್ಟು ವಿಶ್ವಾಮಿತ್ರನು ||
ತವಕದಿಂ ಮಗುಳೆದಾರುಣತಪವನೆಸಗುವಡೆ |
ಲವಲವಿಕೆಯಿಂದೈದಲಲ್ಲೊಂದು ಕಾರ್ಯಸಂ |
ಭವನಾದ ಪರಿಯ ವಿಸ್ತರಗೈವೆ **ಶ್ರೀರಾಮಪುರದರಸ** ನೀಂ ಲಾಲಿಸು || (66)

ಸಂಧಿ 17 ಕ್ಕಂ ಪದಂಗಳ್ 1007

---

# ಹದಿನೆಂಟನೆಯ ಸಂಧಿ

ಸೂಚನೆ || ತರಣಿಗೋತ್ರತ್ರಿಶಂಕುರಾಯನಂ ಸಶರೀರ |
ಸುರರ ನಗರಿಗೆ ಕಳುಪಿ ರುಚಿಕಸುತನಂ ಕಾಯ್ದು | [ಸುತನು ||
ಪರಮೇಷ್ಠಿಕೃಪೆಯಿಂದ ಬ್ರಹ್ಮರ್ಷಿಪದದೊಳುಂ ರಾಜಿಸಿದ ಕುಶಿಕ

ಮೇನಕಾತ್ಮಜೆ ಕೇಳ್ವುದಾ ಮುನಿಪನಧಿಕದು-|
ಮ್ಮಾನದಿಂ ಪದಿನಾಲ್ಕುಲೋಕಗಳ್ನಡುಗುವೊಲ್ |
ಭಾನುಸಪ್ತಾರ್ಚಿಗಳು ನಿಷ್ಪ್ರಭೆಗಳಪ್ಪಂತೆ ಕ್ರೂರತಪದಿಂದೆಸೆದಿರೆ ||
ಸೂನಾಸ್ತ್ರನಣ್ಣನೆಡೆಗೈದಿ ಲೇಖಾನಿಚಯ |
ವೀ ನೆಲದವಸ್ಥೆಯಂ ವಿಸ್ತರಿಸುತಿರಲಿತ್ತ |
ಮಾನಿನೀಮಣಿ ಕೇಳು ಮಗಳೊಂದು ವೃತ್ತಾಂತಮೊದವಿದುದ ಪೇಳ್ವೆ ನಯದಿ || (1)

---

1 ಹವಿಷಾಂದ್ರವ್ಮೃಢನೇತ್ರ || 2 ಮಧುಚ್ಛಂಧ—
ಅಥಾಸ್ಯ ಜಜ್ಞಿರೇಪುತ್ರಾ ಸತ್ಯಧರ್ಮಪರಾಯಣಾಃ ||
ಹವಿಷ್ಯಂದೋ ಮಧುಷ್ಯಂದೋ ಧೃಢನೇತ್ರೋ ಮಹಾರಥಃ || ೩ ||
(ವಾ. ರಾ.—೫೭ ನೆಯ ಸರ್ಗ.)

ಧರಣಿಯೊಳಗುಳ್ಳಖಿಳಪತ್ತನೋತ್ತಂಸಶುಭ |
ಕರವೆಸರನಾಂತಯೋಧ್ಯಾನಗರದಧಿನಾಥ |
ತರಣಿವಂಶೋತ್ತಮತ್ರಿಶಂಕುನೃಪಸತ್ತಮಂ ದೇಹದಿಂದಾ ಸಗ್ಗದ ||
ಇರವನೀಕ್ಷಿಪೆನೆಂಬ ಕಾಂಕ್ಷೆಯಿಂದೈದಿ ಕುಲ |
ಗುರುವಸಿಷ್ಠನ ಪೊರೆಗೆ ನಿಜಮನೋಭೀಷ್ಟಮ-|
ನ್ನೊರೆದನೆಳ್ಳನಿತು ಮಾಜದೆ ಭಾವಭಕ್ತಿಯಿಂ ವಂದನಂಗೈದು ಮುದದಿ || (2)

ಕೇಳಿ ನೃಪವರ್ಯನಾಡಿದ ನುಡಿಯ ಮುನಿವರಂ |
ಪೇಳಿದಂ ಸಶರೀರದಿಂದ ಸಗ್ಗವ ಕಾಣು |
ವಾಳುತನ ಮೂಲೋಕದೊಳಗುಂಟೆ ದುರ್ಬುದ್ಧಿಯನ್ನು ನೀಂ ನೆನೆದೆಯೆಂದು ||
ನಾಳೀಕಪೀಠನಿಂಗಳವಹುದೆ ಪೋಗು ಮಗು |
ಳಾಲಸ್ಯವೇಕೆ ನಿಜಮಂದಿರಕೆ ಧರ್ಮದಿಂ |
ದಾಳು ರಾಜ್ಯವ ಸುಖದಿ ಪಿತೃಪಿತಾಮಹರಂತೆ ಮಗುಳೆನಲ್ಕರಸ ಮುನಿದು || (3)

ಖಿನ್ನತನದಿಂ ದಕ್ಷಿಣಾಶೆಗೈದುತಲಿರ-|
ಲ್ಕನ್ನೆಗಂ ಗುರುಪುತ್ರರಾಶ್ರಮಂ ಕಣ್ಗೊಳಿಸೆ |
ಸನ್ನುತಿಸುತೆರಗಿ ವಾಸಿಷ್ಠರೊಡನಿಂತೆಂದನಾ ಭೂಮಿಪಾಲನೊಲಿದು ||
ಎನ್ನಕುಲಕಧಿನಾಥನೆಂದು ನಿಮ್ಮಯ ಮರೆಯ |
ನನ್ನಿಯಿಂ ಪೊಕ್ಕೆ ಮನ್ನಿಸಿ ಕಾಯ್ದು ಸತ್ಕೀರ್ತಿ |
ಯನ್ನಾಳವೇಳ್ಕೆನುತ ಮಗುಳೆ ವಂದಿಸಿ ಪೇಳ್ದ ಮನದಭೀಷ್ಟವನವರೊಳು || (4)

ಯಾಗಮಂ ಮಾಡಿಪುದು ಸಶರೀರದಿಂ ಸಗ್ಗ |
ಮಾಗುವಂದದೆ ಗುರುವಸಿಷ್ಠರಿಂದಪಮಾನ |
ಮಾಗಿ ಬಂದೆನು ಜೀಯ ಮತ್ಕುಲಕೆ ಗತಿಪುರೋಧಸರೆ ಪೂರ್ವಾನುಮತದಿ ||
ನೀಗಿದೆನ್ನಭಿಮತವ ಸಲಿಸುವುದು ಕಿಂಕರನ |
ಭಾಗಧೇಯವು ನೀವೆ ಗುರುತನೂಜನ್ಮರಿರ |
ಶ್ರೀಗುರುವಿನಿಂದಧಿಕರೆಂದು ಯಾಚನೆಗೈವೆನೆಂದೊಡವರಿಂತೆಂದರು || (5)

ನರನಾಥ ನೀನಧಿಕದುರ್ಬೋಧನಪ್ಪೆಗಡ |
ಗುರುವಿನಿಂದಾಗದುರುಕಜ್ಜವೆಮ್ಮಿಂದಹುದೆ |
ತರುಮೂಲವನ್ನುಳಿದು ಶಾಖಾಗ್ರದವಲಂಬಿಯಾದ ತೆರನಾಯ್ತು ಬಳಿಕ ||
ಕರುಣದಿಂದಾದ ಗತಿಯುನು ತೋರ್ಪೊಡಾತನೇ |
ನೆರೆ ಸಮರ್ಥನು ಮರುಳೆ ಬಾಲಿಶಂ ನೀನಾದೆ |
ಮರಳು ನಿಜಪಟ್ಟಣಕ್ಕೆನೆ ನರಾಧಿಪನಧಿಕರೋಷದಿಂದಿಂತೆಂದನು || (6)

ಕುಲಪರಂಪರೆಯಿಂದಲಿಕ್ಷ್ವಾಕುವಂಶಜರ |
ಸಲಹುವಡೆ ದೇವತಾಕೃತಿ ವಸಿಷ್ಠರೆಯೆಂದು |
ಬಲುಪರಿಯ ನಂಬಿದ್ದರವರು ಧಿಃಕೃತಿಗೈದರದರಿಂದ ನಿಮ್ಮಡಿಗಳ ||
ನಲವಿಂದ ಪ್ರಾರ್ಥಿಸಿದರುಂ ನೀವೆ ಗಣಿಸದಿರೆ |
ನೆಲದೊಳಿನ್ನಾರಧಿಕರುಂಟವರ ಮರೆಯೊಗುವೆ |
ಪಲುಬಿ ಫಲವೇನೆಂದು ಮರಳುವ ಮಹೀಶನಂ ನೋಡಿ ಮುಗುಳಿಂತೆಂದರು || (7)

ಫಡ ನೃಪಾಧಮನೆ ಸಂತಾನಪಾಂಸನೆ ಪೂರ್ವ |
ಪೊಡವಿಪರು ಪೂಜಿಸಿದ ನಿಜದೈವವನ್ನುಳಿದು |
ಪೊಡವಿಯೊಳು ಮತ್ತೊರ್ವನಾಶ್ರಯಿಪೆನೆಂಬೆಗಡ ನೀಚ ದುರ್ಮೇಧೆಯಿಂದೆ ||
ಕಡುಕ್ರೂರಚಾಂಡಾಲನಹುದೆಂದು ಶಾಪಮುಂ |
ಕೊಡುತ ಗುರುಪುತ್ರರುಂ ಧಿಕ್ಕರಿಸಿ ಮರಳಲಾ |
ಪೊಡವಿಪತಿ ವಿಪ್ರರಿಂದವಮಾನವನ್ನಾಂತನೇನೆಂಬೆ ವಿಧಿಕೃತವನು || (8)

ಇಟ್ಟ ಭೂಷಣ ಕಬ್ಬುನಗಳಾದವಾ ಕ್ಷಣದೊ |
ಳುಟ್ಟ ಪೀತಾಂಬರಗಳುಂ ಮಲಿನವಶವಾಗೆ |
ದೃಷ್ಟಿಗತಿಘೋರಮೆನೆ [1](ಧ್ವ)ಸ್ತಾಲಕಂಗಳುಂ ಮಲರೂಪಿತಾಂಗದಿಂದೆ ||
ಗುಟ್ಟು ಬಯಲಾಗಿ ಚಾಂಡಾಲರೂಪವನಾಳೆ |
ನಿಟ್ಟಸುತ ಪರಿವಾರಮಂತ್ರಿಗಳ್ ತ್ಯಜಿಸಿ ನಿಜ |
ಪಟ್ಟಣವ ಸಾರಿದರದೇನೆಂಬೆ ಭೂಸುರರ ವಾಕ್ಯಾಸ್ತ್ರಕಟ್ಟಳೆಯನು || (9)

ಪರಿವಾರಮಂತ್ರಿಗಳ್ ಪರಿದೋಡೆ ನಿಜನಗರ |
ಕರಸನತಿದುಃಖದಿಂ ತೊಳಲಿ ಬಳಲುತಲೊರಲಿ |
ಮರುಗಿ ಬಿಸುಸುಯ್ಯುತ್ತ ಪಥವಿಡಿದು ದಕ್ಷಿಣಕೆ ನಡೆತಂದ ಕಡುಚಿಂತೆಯಿಂ ||
ಪರಮರ್ಷಿಸತ್ತಮಂ ಕುಶಿಕವಂಶೋದ್ಭವಂ |
ಪರಮತಪದಿಂದಿರಲ್ಕಂಡು ವಂದನೆಗೈದು |
ಕರಗಳಂ ಮುಗಿದು ದೂರದಿ ನಿಂದಿರುವ ನೃಪನ ನಿಟ್ಟಿಸಿದ ಮುನಿರಾಯನು || (10)

ಸಿಂಗರದ ಭೂಷಣಾಂಬರಮೆಲ್ಲಮುಂ ಪೋಗಿ |
ಸಂಗಡಿಸಿ ಚಾಂಡಾಲನಾಕಾರಮತಿಘೋರ |
ಕಂಗಳಿಗೆ ಘೋರರೂಪಾಗಿ ಭೂಭುಜತಿಲಕನೆಸೆದಿರಲ್ನೋಡಿ ಮೌನಿ ||
ಪುಂಗವಂ ಕರುಣದಿಂದಿಂತೆಂದನೆಲೆ ನೃಪೋ |
ತ್ತುಂಗ ರವಿಕುಲತಿಲಕ ಮತ್ತೆಯೀ [2]ದು(ರ)ವಸ್ಥೆ |
ಸಂಗತಿಯುದಾರದೆಸೆಯುಂದಾಯ್ತು ಪೇಳೆನಲ್ಕರಸ ಬಿನ್ನಪಗೈದನು || (11)

1 ಧೃಸ್ತಾಲಕಂಗಳುಂ
2 ದುರಾವಸ್ಥೆ.

ಸಶರೀರದಿಂ ಸಗ್ಗಕೈದವೇಳ್ಕೆಂದೆನುತ ।
ಕುಶಲದಿಂ ಕ್ರತುಶತಂಗಳ ಮಾಡಲದರಿಂದ ।
ವಶಮಾಗದಿರೆ ಫಲಂ ಗುರುವಸಿಷ್ಠಂಗರುಪಲವರು ಧಿಕ್ಕರಿಸೆ ಬಳಿಕ ॥
ಕುಶಿಕಸುತ ತತ್ಪುತ್ರರೆಡೆಗೈದಿ ಬಿನ್ನವಿಸೆ ।
ವಿಸದ ನುಡಿಗಳ ಕೇಳುತವರು ಫಲವಿೂಯದಿರೆ ।
ರಸೆಯೊಳತಿ ದುರ್ಘಟದೊಳೀ ಪರಿಯ ವಚನದಿಂ ಗೈದರೈಸೆ ॥ (12)

ನುಡಿಯೆನನ್ಯತವ ಕ್ಷತ್ರಧರ್ಮಮಂ ಧಿಕ್ಕರಿಸೆ ।
ಯಡಿಗೆರಗದಿರೆ ಪಿರಿಯರಂ ಕಂಡು ಪ್ರಜೆಗಳ-।
ನ್ನೊಡನೆ ಸದ್ಧರ್ಮದಿಂ ಪಾಲಿಸದೆ ಪೀಡಿಸೆನದೆಂದಿಗುಂ ಸಾಧುಜನರ ॥
ನಡೆಯನನುಸರಿಸಿರ್ದು ಎನಗೆ ಮತ್ತೀ ರೂಪು ।
ತೊಡರಿದುದು ದೈವಯೋಗಾನುಗತಿಯಿಂದಕಟ ।
ಪೊಡವಿಯೊಳು ಗತಿಹೀನರಿಗೆ ನೀನೆ ಗತಿಯೆನುತಲರಿತು ಮರೆಯೊಕ್ಕೆ ಮುನಿಪ ॥

ಆವ ವಿಧದಿಂದಿದಕುಪಾಯಮಂ ನೆನೆದೊಡಂ ।
ದೈವಾನುಗತಿಯ ಮಿೂರುವರಳವೆ ಧರಣಿಯೊಳು ।
ಜೀವರಾಶಿಗಳಿಂಗೆ ಭವದೀಯ ಚಿತ್ತವೇನರಿಯದುದೆ ಧರೆಯೊಳೆನ್ನಂ ॥
ಕಾವರಿನ್ನಿಲ್ಲಕಟ ನಿನ್ನಂಘ್ರಿಯೊಂದುಳಿದು ।
ಪಾವನಚರಿತ್ರ ಮದ್ವೃತ್ತಾಂತಮೆಲ್ಲಮಂ ।
ತೀವಿ ಬಿನ್ನಪಗೈದೆ ಮದ್ಭಾಗಧೇಯಮೆಂದರಸ ವಿಜ್ಞಾಪಿಸಲ್ಕೆ ॥ (14)

ತರಣಿವಂಶಜಪೇಳ್ದ ದೈನ್ಯನುಡಿಗಳ ಕೇಳಿ ।
ಕರಗಿತಂತಃಕರಣ ಕೌಶಿಕಮಹಾಮುನಿಗೆ ।
ಪರಮಧಾರ್ಮಿಕಶಿಖಾಮಣಿಗದೇನೆಂಬೆನಾಂ ಕುಸ್ತರಿಸಿ ನೃಪತಿಲಕನ ॥
ಮರುಗಲೇತಕ್ಕರಸ ಸಶರೀರದಿಂ ಸಗ್ಗ ।
ದಿರವನಿತ್ತಪೆ ನಿನಗೆ ಭಯಬೇಡ ಗಾಧಿಜನ ।
ಮರೆಯೊಕ್ಕರಿಗೆ ಮನೋರಥಸಿದ್ಧಿ ಧರೆಯೊಳುಂ ಕರತಳಾಮಳಕಮಲ್ತೆ ॥ (15)

ಮೇದಿನಿಯೊಳುಳ್ಳ ಭೂಸುರರೆಲ್ಲರಂ ಕರೆಸಿ ।
ಸಾದರದಿ ಕ್ರತುಗಳಂ ಮಾಡಿಸುವೆ ಗುರುಶಾಪ ।
ಭೇದವಿಂದಂತ್ಯಜಾಕೃತಿಯಾಂತ ವಿಗ್ರಹದಿ ತ್ರಿದಿವದೊಳ್ಮೆರೆವಂದದಿ ॥
ಸಾಧುಜನಸಮ್ಮತದಿ ಸರ್ವಜನರರಿವಂತೆ ।
ಮೋದಯುತನಂ ಮಾಳ್ಪೆನಂಜದಿಹುದೆಂದೊರೆಯು ।
ತಾ ದಯಾನಿಧಿ ಸುತರ ಶಿಷ್ಯರುಗಳಂ ಕರೆದು ಪೇಳ್ದ ಮುಂತಣಕಜ್ಜಮಂ ॥ (16)

ದ್ಯುಮಣಿವಂಶತ್ರಿಶಂಕುವಿಗೆ ಗುರುವಿನುರುಶಾಪ |
ಸಮನಿಸಲು ಬಂದೆಮ್ಮ ಮರೆಯೊಕ್ಕ ಕತದಿಂದ |
ಮಮತೆಯಿಂ ಸಶರೀರದಿಂ ಸುರಾಲಯಕೈದೆ ಸಪ್ತತಂತುವನೆಸಗುಪ ‖
ಕ್ರಮುವ ನಿಟ್ಟಿಸಿ ಮಹರ್ಷಿಗಳೆಲ್ಲ ದಯುದಿಂದ |
ಲೆಮಗೊಲಿದು ಬಹುದೆನುತಲಾನೊರೆದ ಮಾಳ್ಕೆಯೊಳ್ |
ಸುಮತಿಗಳಿಗೆಚ್ಚರಿಸಿ ಚೆಚ್ಚರದೊಳೊಡಗೊಂಡು ಬಂದು ದ್ವಿಜೋತ್ತಮರನು ‖

ಆರದೇನೆಂದು ನುಡಿದಪರದನ್ನೆಲ್ಲಮುಂ |
ತೋರಿ ವಂಚನೆಯಿಲ್ಲದೆನ್ನೊಳರಿಪುವುದೆಂದು |
ಧೀರನಪ್ಪಣೆಗೊಟ್ಟು ಕಳುಪಲ್ಕುಮಾರಕರು ಛತ್ರದೊಡಗೊಂಡು ಬಳಿಕ ‖
ಧಾರಿಣಿಯೊಳುಳ್ಳಖಿಳಮುನಿವರರಿಗೆಚ್ಚರಿಸಿ |
ಮಿೂರದೈತಂದರಾ ಮುನಿರಾಯನಿದ್ದೆಡೆಗೆ |
ಕ್ರೂರತನದಿಂ ಮಹೋದಯುವಸಿಷ್ಠಾತ್ಮಜರನುಳಿದು ಜವದಿಂದಲೈದಿ ‖ (18)

ಧರಣಿಯೊಳಗುಳ್ಳ ಭೂಸುರರೆಲ್ಲರುಂ ಬಂದ |
ರರಿತು ನಿಮ್ಮಯ ಶಾಸನವ ವಸಿಷ್ಠಾತ್ಮಭವ |
ರಿರದೆ ನಿಷ್ಠುರವಚನದಿಂದೆಂದರೆಮ್ಮೊಡನೆ ಲಾಲಿಸುವುದನಘ ದಯದೆ ‖
ಸುರಮುನಿಗಳೆಂತುಂಬರೋ ಹವಿರ್ಭಾಗಗಳ |
ಗುರುಶಾಪಹತಕಚಾಂಡಾಲ ಯಾಗವ ಮಾಳ್ಪ |
ನರರೆ ಕ್ಷತ್ರಿಯನು ಮಾಡಿಸುವನೀ ನೆಲದೊಳಗೆ ಯೋಗ್ಯತರಕರ್ಮದಲ್ಲಿ ‖ (19)

ವಿನುತ ಧಿಕ್ಕರಿಸಿದರೆನಲ್ಕೆ ವಿಶ್ವಾಮಿತ್ರ |
ಕನಲಿ ಕಿಡಿಕಿಡಿವೋಗಿ ಋಷಿನಿವಹದೊಳಗೆಂದ |
ಘನತರದ ತಪದಿಂದಲಿರ್ದನಘನಂ ತಮ್ಮ ಗರ್ವದಿಂ ನುಡಿದರೈಸೆ ‖
ಅನಿಬರುಂ ಭಸ್ಮವಾಗೀ ಕ್ಷಣದಿ ಯಮಲೋಕ |
ವನು ಸಾರ್ದು ಸಪ್ತಶತಜನ್ಮಂಗಳಲ್ಲಿ ಶವ |
ಶುನಿಗಳಾಹಾರದಲಿ ನಿರ್ದಯದಿ ಚರಿಸುವರು ಮದ್ವಾಣಿಯಿಂದಲವರು ‖ (20)

ಕ್ರೂರಮುಷ್ಟಿಕನಾಮದಿಂದಖಿಲಲೋಕಸಂ |
ಚಾರಗೈವುತಲಿರಲಿಯೆನುತ ಶಪಿಸುತ ಮೌನಿ |
ತೋರಕೋಪದೊಳಾ ಮಹೋದಯನ ಶಪಿಸಿದಂ ದುರ್ಬುದ್ಧಿಯಿಂದ ನುಡಿದ ‖
ಕಾರಣದಿ ಲೋಕದೂಷಿತನಾಗಿ ಜೀವಗಳ |
ಹಾರಿಸುತ ವಿಕೃತರೂಪಿಂ ನಿಷಾದತ್ವಮುಂ |
ಸಾರಿ ದುರ್ಗತಿಗಿಳಿವುದೆಂದೊರೆದು ಗಾಧಿಸುತ ಮುಗುಳೆಂದ ಮುನಿಗಳೊಡನೆ ‖

ವರತಪೋಬಲದಿಂದ ತರಿದಾ ವಸಿಷ್ಠಸುತ |
ರಿರವ ಭೂಸುರರೊಡನೆ ಪೇಳ್ದ ಕುಶಿಕಾತ್ಮಜಂ |
ಶರಣರಕ್ಷಕ ದಾನಿಯಿಕ್ಷ್ವಾಕುವಂಶಭವ ವಿಶ್ರುತತ್ರಿಶಂಕುರಾಜ ||
ಶರಿರಸಹ ಸುರಲೋಕಮಂ ನೋಳ್ಪ ಕಾಂಕ್ಷೆಯಿಂ |
ಮರೆಯೊಕ್ಕನೆನ್ನನೀ ನೃಪತಿ ಸಶರೀರದಿಂ |
ತೆರಳಿ ತ್ರಿದಶಾಲಯವ ಕಾಣ್ಬಂತೆ ಯಾಗಮಂ ಗೈಯಿರೆಂದಂಕೈಪೆಯೊಳು || (22)

ಆ ನುಡಿಯನಾಲಿಸುತಲಾ ಮುಮುಕ್ಷುಗಳೆಲ್ಲ |
ಮೌನದಿಂ ತಮ್ಮೊಳಗೆ ತಾವೆ ಯೋಚನೆಗೈದ |
ರೇನೆನ್ನಲಸದಳಂ ಕಡುಕೋಪಿ ಕುಶಿಕಸುತ ನುಡಿದ ನುಡಿ ತಪ್ಪಲರಿದು ||
ದೈನ್ಯದಿಂದರುಪಿದಡೆ ಲಾಲಿಸದೆ ಬೈದಪ ಕೃ |
ಶಾನುಸಮನೀ ಮೌನಿಯದರಿಂದ ನಿಜಕುಲಜ |
ಸಾನಂದದಿಂ ಸಗ್ಗಕೈದುವಂದದಿ ಕ್ರತುವನೆಸಗವೇಳ್ಕೆಂದು ತಿಳಿದು || (23)

ನೆರೆದ ಭೂಸುರರೆಲ್ಲ ವರಮುನಿಯ ನೇಮದಿಂ |
ದುರುತರದ ಯಾಗಮಂ ಶಾಸ್ತ್ರೋಕ್ತದಿಂ ರಚಿಸೆ |
ಹರುಷದಿಂ ಗಾಧಿಜ ಹವಿರ್ಭಾಗಕೋಸುಗ ನಿಖಿಲದೇವತೆಗಳನಾಗ ||
ಕರೆಯಲ್ಕೆ ಬಾರದಿರೆ ಕ್ರೋಧಶಿಖಿ ಮುಂಬರಿದು |
ಕರದಿ ಸ್ರುವವನೆತ್ತೆ ಕಂಪಿಸೆ ಜಗತ್ತ್ರಯಂ |
ನರನಾಥನಂ ಕರೆವುತಿಂತೆಂದ ನೋಡೆಲವೊ ಮತ್ತಪಸ್ಸಿನ ಬಗೆಯನು || (24)

ಜಗತಿಯೊಳಗಾರಾದೊಡಂ ಗಾತ್ರಸಮಮಾಗಿ |
ಪೊಗಲರಿಯ ಸಗ್ಗಮಂ ಸ್ವಾರ್ಜಿತತಪೋಬಲದ |
ಮಿಗಿಲಾದ ತೇಜದಿಂದೈದು ಸಶರೀರದಿಂದವ್ಯಯವನೆನೆ ಮುನಿಪನ ||
ಸೊಗಸಿನ ಸರಸ್ವತಿಯನಾಲಿಸಿ ತ್ರಿಶಂಕುನೃಪ |
ಜಿಗಿದನಂಬರಕಾ ಮುನೀಂದ್ರರುಂ ನೋಡುತಲಿ |
ಬಗೆಬಗೆಯೊಳುಂ ನುತಿಸಲೇನೆಂಬೆ ಕೌತುಕವನಾ ಮಹರ್ಷಿಯ ಮಹಿಮೆಯ ||

ಅಡರಿ ನಿಜಲೋಕದೆಡೆಗೈತಂದ ನೃಪತಿಯಂ |
ಕಡುಗೋಪದಿಂದಿಂದ್ರ ನಿಟ್ಟಿಸುತಲಿಂತೆಂದ |
ಜಡನೆ ಗುರುಶಾಪಹತ ನಿನಗೆ ತ್ರಿದಶಾಲಯಮಯೋಗ್ಯ ಭೂತಳಕೆ ಮರಳಿ ||
ಕೆಡೆವುದೆನಲಾ ನುಡಿಗೆ ಮುಗ್ಗಿ ವಸುಧಾಧಿಪತಿ |
ಯುಡಿವುತಲಿ ಪಾವನಚರಿತ್ರ ವಿಶ್ವಾಮಿತ್ರ |
ಬಿಡದೆನ್ನ ರಕ್ಷಿಸುವುದೆಂದೊರಲುತೈತರಲ್ಕಂಡನಾ ಮುನಿತಿಲಕನು || (26)

ನಿಲ್ಲು ನಿಲ್ಲೆಲೆ ರಾಯ ಭಯಬೇಡವೆನುತೊರೆದು |
ಚೆಲ್ಲಿ ಬಹ ಕೋಪದಿಂ ಋಷಿನಿವಹದೆಡೆಯೊಳಗೆ |
ಬಲ್ಲಿದದ್ವಿತಿಯಚತುರಾಸ್ಯನೆಂಬಂದದಿಂ ತೆಂಕದಿಶೆಯೊಳ್ ಸೃಜಿಸಿದಂ ||
ಸಲ್ಲಲಿತ ಸಪ್ತರ್ಷಿನಿಚಯಮಂ ವೇಗದಿಂ |
ನಿಲ್ಲದತಿಕ್ರೋಧದಿಂದಿಂತೆಂದನಿಂದ್ರನಂ |
ವಲ್ಲಭನ ಲೇಖಾಸಮೂಹಮಂ ನಿರ್ಮಿಸುವೆ ತತ್ಕ್ಷಣದೊಳಿಲ್ಲಿಗೆನುತ || (27)

ನುಡಿದ ಮಾತ್ರದಿ ದೇವಋಷಿಯಕ್ಷಕಿನ್ನರರ್ |
ನಡುಗಿ ಕಮಲಜನೆಡೆಗೆ ಪೋಗಿ ಪೇಳುತಲಾತ |
ನೊಡಗೊಂಡು ಮೌನಿವರನಿರ್ದಲ್ಲಿಗೈತಂದು ನುತಿಸಿ ಪರಿಪರಿಯಿಂದಲಿ ||
ಕಡುಗೋಪ ಶಾಂತಮೆಂದೆನಿಸದಿರೆ ಪೊಂಬೊಡೆಯ |
ನುಡಿದ ತಾಪಸವರ್ಯನುರುಧೈರ್ಯನಾರ್ತಜನ |
ರೊಡೆಯ ಲಾಲಿಸು ಪೇಳ್ವೆನೊಂದುಪಾಯವ ಶಾಂತಮಯನಾಗಿ ಮಮತೆಯಿಂದ||

ಗುರುಶಾಪಹತಕನೀ ರಾಜ ಸಶರೀರದಿಂ |
ಬರುವಡಸದಳ ತ್ರಿದಿವಕೆಲೆ ತಪೋಧನ ಜಗ-|
ದ್ಭರಿತಮಹಿಮಾಕಲಿತ ನೀನರಿಯದುದೆಯೆನಲ್ಕಮಲಭವನೊಡನೆಂದನು ||
ದೊರೆಗೆ ನಾಂ ಭಾಷೆಯನ್ನಿತ್ತೆನನೃತವ ನುಡಿಯೆ |
ಮರಳಿ ಸಗ್ಗವ ನಿರ್ಮಿಪುದ ಮಾಣೆನೆಂದೆನಲ್ |
ಸರಸಿಜೋದ್ಭವನಧಿಕಮೃದುಮಧುರವಾಣಿಯಿಂದುಪಚರಿಸುತಿಂತೆಂದನು || (29)

ಕೃತಕೃತ್ಯಸತ್ಕೀರ್ತಿವಂತ ಸಗ್ಗವ ಪೊಂದಿ |
ವಿತತಭೋಗದೊಳೆಸೆವ ತೆರದೊಳ್ ತ್ರಿಶಂಕು ನೃಪ |
ನತಿಶಯದ ವಾಕ್ಸಾರದೊಳಗಮರಸಂಕಾಶದಗ್ನಿಪಥಪೊರವಳಯದಿ ||
ಸತತ ಶಾಶ್ವತದಿಂದಮೊಪ್ಪಿರಲಿ ನಕ್ಷತ್ರ |
ತತಿಗಳುಂ ಸಪ್ತಋಷಿಗಳು ಧರಾಧಿಪನೊಡನೆ |
ಗತಿವಿಡಿದು ಸಂಚರಿಸಲೀ ಲೋಕಮುಳ್ಳನಕ ಯತಿಕುಲೋತ್ತಂಸ ನಿನ್ನ || (30)

ಚರಿತ ಮೂಲೋಕದೊಳ್ ಪರಿಮಳಿಸಲೆಂದೆಂಬ |
ವರವ ಕಮಲಾಸನಂ ಕೊಡಲಖಿಳದೇವರ್ಕ |
ಳುರುತರದ ಹರ್ಷದಿಂದಂತಾಗಲೆಂದೆನುತ ನುತಿಸಲ್ಕೆ ಗಾಧಿಸುತನು ||
ಕರುಣದೊಳೊಡಂಬಟ್ಟು ಕಳುಪಲದಿತಿಯ ಸುತರ್ |
ನೆರಸಿ ನಿಜಮಂದಿರಕೆ ನಡೆಯಲಜನೀ ಮೌನಿ |
ಮರಳಿ ಚಿಂತಿಸಿ ತಾಪಸೋತ್ತಮರ ನಿಟ್ಟಿಸುತಲಿಂತೆಂದ ಲಜ್ಜೆಯಿಂದ || (31)

ತಪವನೆಸಗುವೆನೆಂದು ಬಂದಡೀ ದಿಕ್ಕಿನೊಳು |
ವಿಪುಳವಿಘ್ನಂ ಪ್ರವರ್ತನಮಾಯ್ತುಮದರಿಸಿಂ |
ಗುಪಿತದಿಂ ಪಶ್ಚಿಮಾಶೆಯ ಸಾರ್ವೆನೆಂದೊರೆದು ಬಂದತುಲವೇಗದಿಂದ ||
ಶಪಥದಿ ವಿಶಾಲಪುಷ್ಕರದ ಬಳಿ ಘೋರತಪ |
ಗುಪಿತದಿಂ[1]ದಿರ(ಲ)ಯೋಧ್ಯಾನಾಥನೃಪವರ್ಯ |
ತಪನವಂಶಜನಂಬರೀಷಾಖ್ಯ ಯಾಗಮಂ ಮಾಡಲುಜ್ಜುಗಗೊಂಡನು || (32)

ಯಾಗಮಂ ಮಾಡುತಿರೆ ಯಮಿಜನಗಳೊಡನೆರೆದು |
ಬೇಗ ಲೇಖರ್ಷಭಂ ಯಜಮಾನಪಶುವನುಂ |
ರಾಗದಿಂ ಕದ್ದೊಯ್ಯಲಾ ವಿಪ್ರಸಂತತಿಯು ನಿಟ್ಟಿಸುತ ಪಶುನಷ್ಟಮಂ ||
ಆಗಲಿಂತೆಂದರೆಲೆ ಭೂನಾಥ ಪಶು ಪೋದು |
ದೀಗಲದರಿಂ ನಿನಗೆ ಹಾನಿ ಬಿಡದದರಿಂದೆ |
ಪೋಗಿ ನರಪಶುವ ನೀಂ ತಂದು ಪ್ರಾಯಶ್ಚಿತ್ತಮೆಸಗುವುದು ಜಗದೊಳೆನಲು|| (33)

ಕೇಳುತಲುಪಾಧ್ಯಾಯನೊರೆದ ವಾಣಿಯನರಸ |
ತಾಳಿ ಕಡುಚಿಂತೆಯಂ ಧರೆಯೊಳಗದಾವ ಸುರ |
ರೂಳಿಗಕೆ ತನುಜನಂ ಕೊಟ್ಟಪನೊ ಶಿವಯೆನುತಲರಸುವರೆ ರಥವನಡರಿ ||
ಕೇಳುತ್ತ ದೇಶದೇಶಂಗಳಲಿ ಚರಿಸಿ ಕ-|
ಟ್ಬಾಳು ನಗರಗ್ರಾಮಋಷಿಗಳಾಶ್ರಮಗಳಲಿ |
ಬೋಳೆಯರ ಪತಿಯೆಸದ ಕೃತ್ಯಮಂ ನೆನೆನೆನೆದು ಮರುಗುತಲೆ ನಡೆತಂದನು||

ದೇಶದೇಶವ ತೊಳಲುತಂಬರೀಷಾಖ್ಯನೃಪ |
ಭಾಸುರದೊಳೈತಂದು ಭೃಗುತನಯರುಚಿಕನಿಹ |
ದೇಶಕಂ ನಡೆತಂದಂ ಶುಚಿಯುತಮುನೀಶಗಂ ವಂದಿಸುತಲಿಂತೆಂದನು ||
ಈಶ ಯಾಗದ ಪಶುವದೃಶ್ಯಮಾಗಲು ಧೇನು |
ಸಾಸಿರವನಿತ್ತು ನರಪಶುವತಹುದೆಂದೆನುತ |
ಭೂಸುರರ್ ಪೇಳಲೈತಂದು ಬೆದಕಿದೆನಖಿಳಭೂತಳವ ಬೇಸರದಲೆ || (35)

ಎಲ್ಲರಸಿ ಕೇಳಿದಡೆ ಯಾಗಕ್ಕೆ ತನುಭವರ |
ನುಲ್ಲಾಸದಿಂ ಪಶುವ ಕೈಕೊಂಡು ಕೊಡುವರುಗ |
ಳಿಲ್ಲಮಿದಕೇನೆಂದು ಚಿಂತಿಸುತಲೈತಂದೆ ತವಚರಣದರುಶನಕ್ಕೆ ||
ಬಲ್ಲವನೆ ಗೋಸಹಸ್ರವ ಕೊಂಡು ನಿಜತನಯ |
ರಲ್ಲೊರ್ವನಂ ದಯದಲಿತ್ತಡೆಯು ಯಾಜ್ಞೀಯ |
ಸಲ್ಲಲಿತಪಶುದೊರೆತುದೆಂದು ಸಂತಸದಿಂದ ಪೋಪೆನೆನೆ ರುಚಿಕ ನುಡಿದಂ|| (36)

---

1 ಗುಪಿತದಿಂದಿರಲಿತ್ತ.

ಪಿರಿಯ ಮಗನಂ ಕೊಡೆನು ನರನಾಥ ವಿಕ್ರಯಕೆ ।
ಸಿರಿಯ ಬಯಸೆನೆನಲ್ಕೆ ತತ್ಪತ್ನಿಯಾ ನುಡಿಯ ।
ಸರಸದಿಂ ಲಾಲಿಸುತಲಂಬರೀಷನೊಳೆಂದಳಾಂ ಕನಿಷ್ಠನ ಶುನಕನ ॥
ಹರಿದು ತಾಂ ಕೊಡಲಾರೆನೆನೆ ಶುನಶ್ಶೇಫನೀ ।
ಪರಿಯ ನಿಟ್ಟಿಸುತರಸನೊಡನೆಂದ ಬೊಪ್ಪನುಂ ।
ಪಿರಿಯಾತ್ಮಭವನೀಯ ಮಾತೆ ಕಿರಿಯಾತನಂ ಕೊಡೆನೆಂದು ಪೇಳ್ವಳೈಸೆ ॥ (37)

ಅದರಿಂದ ಮಧ್ಯಮನ ತನ್ನ ವಿಕ್ರಯಗೈವ ।
ರಿದು ಸಿದ್ಧಮೆಂದರಿತೆ ಭೂಮೀಶ ಗೋಗಣವ ।
ಸದಯ ಭಾರ್ಗವನಿಗಿತ್ತೆನ್ನ ಕರೆದೊಯ್ಯುವುದೆನಲರಸ ಸಂಪ್ರೀತಿಯಿಂದ ॥
ಬುಧಶಿರೋಮಣಿರುಚಿಕಗಿತ್ತು ಗೋಸಾಸಿರವ ।
ಚದುರಿಂದಲಾ ಶುನಶ್ಶೇಫನ ಶಂತಾಗದೊಳ್ ।
ಪದುಳದಿಂ ಕುಳ್ಳಿರಿಸಿ ಪಥವಿಡಿದನಾ ಕ್ಷಣದಿ ಲಭಿಸಿತಿಷ್ಟಾರ್ಥಮೆನುತ ॥ (38)

ಬಾಲಕನನೊಡಗೊಂಡು ಬರುತಿರಲ್ ನರನಾಥ ।
ಕಾಲಕಂಠನ ನೇತ್ರಶಿಖಿಯಂತೆ ಬಿಸುಗದಿರ ।
ಮೂಲೋಕಮಂ ತಾಪಗೊಳಿಸೆ ನೀರಡಿಕೆಯಿಂದೈದಿ ಪುಷ್ಕರಗಳೆಡೆಯ ॥
ಸಾರವರನೆಳಲೊಳುಂ ವಿಶ್ರಮಿಸೆ ನೃಪತಿವರ ।
ಬಾಲಕಂ ರಥವಿಳಿದು ನೀರ್ಗುಡಿವಡೈತರಲ್ ।
ಶೀಲಸದ್ಗುಣನಿಲಯ ಕುಶಿಕಸುತ ತಪದಿಂದಲಿರುತಿರಲ್ ಹರ್ಷಗೊಂಡು ॥ (39)

ಚರಣಯುಗಳಕೆ ನಮಿಸಿ ವಿಜ್ಞಾಪನಂಗೈದ ।
ತ್ವರಿತದಿಂ ತನ್ನ ವೃತ್ತಾಂತಮಂ ಯಮಿತಿಲಕ ।
ಸುರಪವಿಕ್ರಮನಂಬರೀಷಭೂಪಾಲಕಂ ಯಜ್ಞೀಯಪಶುವಿಗೆಂದು ॥
ವರಮೌನಿಭಾರ್ಗವನ ನರಪಶುವ ಬೇಡಿದರೆ ।
ಪಿರಿಯ ಸುತನಂ ಕೊಡೆನೆನಲ್ಕೆ ಮನ್ಮಾತೆಯುಂ ।
ಕಿರಿಯಾತನಂ ಕೊಡುವುದಿಲ್ಲೆಂದು ವಿಕ್ರಯಂಗೈದರೆನ್ನಂ ನೃಪತಿಗೆ ॥ (40)

ಪಿತಮಾತೆದಾಯಾದ್ಯಬಾಂಧವರು ತನಗಿಲ್ಲ ।
ಯತಿವರ್ಯ ನೀನೆ ಗತಿಯೆಂದು ಶರಣಂಬೊಕ್ಕೆ ।
ಕ್ಷಿತಿಪತಿಯ ಯಾಗಸಂಪೂರ್ಣಮಪ್ಪಂದದಿಂದೆನಗೆ ದೀರ್ಘಾಯುಮೊದವಿ ॥
ಯತಿಶಯದಿ ಬಾಳ್ವಂತೆ ಮಾತುಲಮಹಾಭಾಗ ।
ಮತಿಯುತೋತ್ತಮ ನೀನೆ ಮಾಳ್ಪುದೆಂದೆರಗಿ ಮುನಿ ।
ಸುತ ಬೇಡಿಕೊಳೆ ದಯಾಪರಗಾಧಿನಂದನಂ ಕೊಡುತಭಯಮಂ ನುಡಿದನು ॥

ಬೆದರದಿರು ಮುನಿತನಯ ಬೇಗದಿಂದಭಿಮತಗ |
ಳೊದಗುವುದೆನುತ್ತೊರೆದು [1](ಸೈ)ಪಿನಿಂ ನಿಜಸುತರ |
ಮುದದಿಂದ ಕರೆದೆಂದನೆಲೆ ಧರ್ಮಶೀಲರಿರ ಮೂಲೋಕದೊಳು ಪುತ್ರರ ‖
ಉದಯಮುಂ ಬಯಸುವರದೇಕೆ ಪ್ರಿಯಕಾಮ್ಯಂಗ |
ಳೊದಗಿಪರೆ ಭಾಷೆಯುಂ ಸಲಿಸುವಡೆ ಕಾಲಮಿದೆ |
ಚದುರಿಂದ ಸಕಲಾರ್ಥಗಳ ಬಲ್ಲರಹುದೈಸೆಯುಸುರ್ವೆ ಮುಂದಣ ಕಾರ್ಯವ ‖

ಪರಲೋಕಹಿತಬಯಕೆಯಿಂ ಸುತರ ಬಯಸುವುದು |
ಚಿರಕಾಲಕಿಂದೊದಗಿತವಸರಂ ಮುನಿಪುತ್ರ |
ತರಳನೆನ್ನಂ ಮರೆಯ ಪೊಕ್ಕನೀತನ ಜೀವಮುಂ ಕಾಯ್ದು ನಮಗೆ ಪ್ರಿಯುವ‖
ಬರಿಸುವುದು ಪರಿಪೂತರೆನಿಸಿ ನರಪತಿ ಮಾಳ್ಪ |
ಸುರುಚಿರದ ಯೊಗಕೆ ಧನಂಜಯುಸುರಾದ್ಯರಂ |
ಹರುಸಗೊಳಿಸುವುದೆಂದೆನಲ್ಕೆ ಕೋಪದಿ ಸುತರು ತಾತನೊಡನಿಂತೆಂದರು ‖ (43)

ಆವ ವಿಧದಿಂದಾದೊಡನ್ಯರಂ ವಂಚಿಸುತ ।
ಕಾವುದುಚಿತವು ತನ್ನ ತನಯುರಂ ಲೋಕದೊಳ |
ಗೀ ವಿಧದಿ ನಿಜಪುತ್ರರನ್ನಿತ್ತು ಪರಸುತನ ಕಾಯ್ವ ಯೋಚನೆಗೈಯುವ ‖
ಭಾವಮುಂ ಕೇಳ್ದರಿಯೆವಯ್ಯವೀ ಕಾರ್ಯಮುಂ |
ಕೋವಿದರು ಮೆಚ್ಚುವರೆ ಶುನಿಯ ಮಾಂಸವನುಣಲ್ |
ಪಾವನವೆ ಜಗತಿಯೊಳಗೆನೆ ಕನಲಿ ಕೌಶಿಕಂ ಶಪಿಸಿದಂ ಡಿಂಭಕರನು ‖ (44)

ಎಲೆ ಧರ್ಮವರ್ಜಿತದುರಾತ್ಮರಿರ ಮದ್ವಾಕ್ಯ |
ಮಲಘು ಲಘುವೆನಿಸಿ ಮುಗುಳುತ್ತರಂಗಳನಿತ್ತಿ |
ರೆಲೆ ವಸಿಷ್ಠರ ತನಯುರಂತೆ ನಾಯಿಯ ಮಾಂಸವಂ ಭುಜಿಸುತನವರತವು ‖
ಚಲಿಸುವುದು ಪತ್ತುಸಾಸಿರವರುಷಮೆಂದೊರೆದು |
ಸುಲಲಿತದ ನುಡಿಯಿಂ ಶುನಶ್ಶೇಫನೊಡನೆಂದ |
ನೊಲವಿನಿಂದಾ ಮೌನಿರಾ[2](ಯನ)ಸುರಕ್ಷೆಯುಂ ಕಟ್ಟಿ ಮುಗುಳತಿಹರ್ಷದಿ ‖ (45)

ಪೇಳಿದ ರಹಸ್ಯದೊಳಗುಭಯುಗಾಥೆಗಳನ್ನು |
ತಾಳಿ ನೀನೈದಿ ನರನಾಥನ ಸುಯಜ್ಞದೊಳು |
ಪೇಳದಾರೊಳ್ ಜಪಿಸಲಿಷ್ಟಾರ್ಥಮುಹುದೆನುತಲೊರೆದು ಬೀಳ್ಕೊಡಲಾಜ್ಞೆಯ ‖
ತಾಳಿ ಮಸ್ತಕದೊಳೈತಂದು ಋಷಿದಾರಕ ನಿ |
ರಾಳದಿಂ ನೃಪತಿ ನಡೆ ಪೋಪಮಾಲಸ್ಯಮು-|
ನ್ನಾಳಿ ಫಲವೇನೆನಲ್ ರಥವೇರಿ ನಡೆತಂದನಂಬರೀಷನ ನಗರಿಗೆ ‖ (46)

---

1 ವೈಪಿನಿಂ

2 ಮೌನಿರಾಮುಯ ಸುರಕ್ಷೆಯುಂ

ಕ್ರತುಶಾಲೆಗೈತಂದು ದ್ವಿಜರೊಡನೆ ಪೇಳೆ ನೃಪ |
ನತಿಶಯದಿ ಶಾಸ್ತ್ರೋಕ್ತಮಾಗಿ ಪಶುಪೂಜೆ ಸಂ |
ಗತಿಯ ಕಲ್ಪಿಸಿ ರಕ್ತವಸ್ತ್ರವನ್ನಳವಡಿಸಿ ತಂದು ವೈಷ್ಣವಯೂಪಕೆ ||
ಕ್ಷಿತಿಸುರರ್ ಬಂಧಿಸೆ ಶುನಶ್ಶೇಫನೇಕಾಂತ |
ಮತಿಯಿಂದಲಗ್ನಿಯಂ ಭಜಿಸಿ ಗಾದೆಗಳೆರಡ |
ಯತಿ ಪೇಳ್ದ ತೆರದೊಳೇಕಾಂತದೊಳ್ ಜಪಿಸಲ್ಕೆ ತೃಪ್ತಿಗೊಂಡೈತಂದರು || (47)

ಪೊಗಳೆ ಸಂತೋಷದಿಂದಿಂದ್ರನಿಂದ್ರಾವರಜ |
ರೊಗುಮಿಗೆಯೊಳೈತಂದು ಭೂಸರತನೂಭವಗೆ |
ಮಿಗಿಲಾಯುಷವನಿತ್ತು ನೃಪಮೌಳಿಯೆನಿಪಂಬರೀಷನೊಡನಿಂತೆಂದರು ||
ಜಗತಿಯೊಳು ನೀಂ ಧನ್ಯಮೀ ಕ್ರತುವಿನಿಂದಾವು |
ಸೊಗಸಿನಲಿ ತುಷ್ಟರಾದೆವು ರಾಜ ಭಾರ್ಗವನ |
ಮಗನ ಮರಳಿಪುದೆಂದು ಪೇಳಿ ಬಿಜಯಂಗೈದಲಿತ್ತ ವಿಶ್ವಾಮಿತ್ರನು || (48)

ಸಾಸಿರ ಸುವರ್ಷವತಿ ಘೋರತಪಮಂ ಮಾಡೆ |
ವಾಸವಾದಿಗಳೊಡನೆ ಚತುರಾಸ್ಯನೈತಂದು |
ಭಾಸುರತಪಸ್ವೀಕ ನೀನೆಂದೊರೆದು ನಡೆಯೆ ನಿಜನಿಲಯಕಿತ್ತಲಧಿಪ ||
ಬೇಸರದೆ ಮಗುಳೆ ತಪಮಂ ಮಾಡುತಿದ್ದ ಮುನಿ |
ವಾಸಿಯಿಂ ಪುಷ್ಕರದ ತೀರದೊಳಗನಿತರೊಳ್ |
ಸ್ತ್ರೀಶಿರೋಮಣಿ ಮೇನಕಾಂಗನೆಯು ಮಜ್ಜನಂಗೈವೊಡೈತಂದಳೊಲಿದು || (49)

ಏನೆಂಬೆನಾ ಮಹಾಮೇನೆಯ ಕಟಾಕ್ಷಗಳು |
ಬಾನೆಡೆಯ ಮಿಂಚಿನೊಲು ಬೆಳಗಿದುದು ದಿಕ್ತಟವ |
ನೂನದಿಂದೊಡನಂಗವಟ್ಟದುರುಪರಿಮಳಂ ಮೇಲ್ವರಿಯೆ ತಳಿರಡಿಗಳ ||
ಯಾನಕೆ ಮರಾಳಗಳ್ವಂಚಿಸಿದವಾಗ ಪರಿ |
ಧಾನದಿಂದಧರದ ಸುರಾಗತೆಗೆ ಚಿಗುರ್ದಂತೆ |
ಕಾನನಂ ಕೆಂಪಡಸಿತಲ್ಲಲ್ಲಿ ಸುಂದರಿಯ ಬರವಿನೊಳ್ ನಿಮಿಷಾರ್ಧದಿ || (50)

ಬರೆ ಜಗನ್ಮೋಹ[1](ನಾಸ್ಪದ)ತರುಣಿ ಮುನಿವರಂ |
ಸ್ಮರಶರಕ್ಕೀಡಾಗಿ ಕರೆದು ಮಾಧುರ್ಯದಿಂ |
ದೊರೆದನೆಲೆ ಹರಿಣಾಕ್ಷಿ ದಯದಿಂದ ರತಿಪತಿಯ ಕೇಳಿಯೊಳ್ಬೆರೆದು ತನ್ನ ||
ಪೊರೆಯೆ ದತ್ತಿಗರಾರು ನೀನಲ್ಲದಂಗಜನ |
ಕರಿಯೆ ಸಂಜೀ[2](ವಿ)ನಿಯೆ ಕಮನಚಿಂತಾಮಣಿಯೆ |
ಸರಸಿಜಸುವಾಣಿಯೆಂದೆನುತ ಕುಸ್ತರಿಸಲ್ಕೆ ಸುರಸುದತಿ ನಗುತೆಂದಳು || (51)

---

1 ಜಗನ್ಮೋಹನಸ್ಪರೆ

2 ಸಂಜೀವನಿಯೆ

ಧನದಸುತನಿಂದ್ರಸುತಚಂದ್ರಕಂತುವಸಂತ |
ರೆನಿಪ ಕಮುನರ ತೋಳ ತೆಕ್ಕೆಯೊಳ್ ರತಿಸುಖವ |
ನನವರತಲನುಭವಿಪ ಮೃದುಲರಸಭಾವಯುತಲಲಿತಕಾಂತಾರನ್ನೆಗೆ ||
ನನೆದು ಮಳೆಯೊಳ್ ಬಿಸಿಲೊಳೊಣಗಿ ತನು ಕೃಶಮಾದ |
ಮುನಿಯೊಡನೆ ಸಂಬಂಧಮುಮತೆ ಜನಿಸುವುದೆಂತು |
ತಿನೆ ಖಂಡಶರ್ಕರೆಯನುಳಿದು ಹಿಂಡಿಯನಾರು ಬಯಸುವರು ಭೂತಳದೊಳು ||

ಮಾಲತಿಯ ಪರಿಮಳವನುಂಬ ಭೃಂಗಿ ತಮಾಲ |
ಜಾಲದೊಳಗಭಿರತಿಯನೆಸಗುವುದೆ ಮುನಿತಿಲಕ |
ಲೋಲಲೋಚನೆಯರತಿಶಯವ ನಿರಶನವ್ರತಿಗಳೇಂ ತಿಳಿವರಕಟ ಮುನಿಪ ||
ಲೀಲೆಯಿಂ ತವಚರಣದೂಳಿಗಕೆ ಮನ್ಮನಂ |
ಲಾಲಿತ್ಯಗೊಂಬುದೆಂತೆಂದೆನಲ್ಕಪ್ಸರೆಯ |
ಶೀಲಮಂ ನಿಟ್ಟಿಸುತ ಕೌಶಿಕಂ ನಗುತೆಂದನತಿಕುತೂಹಲದ ನುಡಿಯ || (53)

ನೀರಸಾಕೃತಿಯಪ್ಪ ಮೃಗನಾಭಿ ಲೋಕದೊಳ್ |
ಸಾರತರರಸಿಕರಂ ಸೊಗಸುಗೊಳಿಸದೆ ಮರುಳೆ |
ತೋರತನುಲಾವಣ್ಯ ಕಾರಣವೆ ಸುದತಿಯರ ಮನದ ಬಯಕೆಯ ಸಲಿಪಡೆ ||
ಚಾರುತರಸತ್ಕಲಾಕೌಶಲವನರಿತಿರ್ದ |
ಡಾರಾದರುಂ ಚೆಲ್ವನಾರಿಯರ ಮೆಚ್ಚಿಪರು |
ನೀರೆ ನೀನರಿಯದುದೆಯೆನಲು ಸಂತಸಗೊಂಡು ಸಾರಿದಳ್ ಸ್ಮರಕೇಳಿಯಂ ||

ಮತ್ತಕಾಶಿನಿಯೊಡನೆ ಮುನಿರನ್ನನತಿಸುಖದ |
ಬಿತ್ತರವನನುಭವಿಸುತನವರತವೆಡೆಬಿಡಿದೆ |
ಪತ್ತು ವತ್ಸರಗಳನ್ನೊಂದು ವಾಸರದಂತೆ ನೀಗಿದಂ ಭೋಗದಿಂದ ||
ಮತ್ತೊಂದು ದಿನ ಕುಶಿಕತನಯ ತನ್ನೊಳ್ತಾನೆ |
ಚಿತ್ತದನುತಾಪದಿಂ ಚಿಂತಿಸುತಲಿದು ಶಕ್ರ |
ಕೃತ್ರಿಮುನೆಯೆಂದರಿತು ಮೌನದಿಂ ಕಿನಿಸಾಂತು ಕುಳ್ಳಿರ್ದು ನಿಟ್ಟಿಸುತಿರೆ || (55)

ಆ ತಪೋಧನನಿರ್ಪ ಪರಿಯ ನೋಡುತಲತುಲ |
ಭೀತಿಯಿಂ ಮೇನಕೆಯು ನಡುಗುತಲಿ ಕೈಮುಗಿದು |
ಕಾತರದಲಿರೆ ಕಂಡು ಕಡುಮೃದೂಕ್ತಿಗಳಿಂದ ಕುಸ್ತರಿಸಿ ಕಳುಪುತವಳ ||
ಜಾತರೋಷದೊಳೆದ್ದು ನಡೆದನುತ್ತರದಿಶಾ |
ಕೌತೂಹಲಾನ್ವಿತದ ಕೌಶಿನೀ ತೀರಕ್ಕೆ |
ಭೂತನಾಥನ ತೆರದೊಳತಿಘೋರತಪವನುಂ ಮಾಡಿದಂ ಭುವನ ನಡುಗೆ || (56)

ಪುಟ್ಟಲತಿಭಯ ದೇವತತಿಗೆ ಜವದಿಂದ ಕಂ |
ಗೆಟ್ಟು ಶಕ್ರಾದಿಗಳ್ ಬಂದು ಕಮಲಜಗೆ ಪೊಡ |
ಮಟ್ಟು ಬಿನ್ನಪಗೈಯಲಮರರನ್ನೊಡಗೊಂಡು ಕೌಶಿಕಾತ್ಮಜನ ಪೊರೆಗೆ ||
ಥಟ್ಟನೈತಂದು ಪೇಳಿದ ಗಾಧಿಸುತನೊಡನೆ |
ಕಟ್ಟುಗ್ರತಪದಿಂದ ತುಷ್ಟನಾದೆನು ವತ್ಸ |
ಕೊಟ್ಟಪೆ ಮಹರ್ಷಿತ್ವವನು ಬೇಡು ನೀನೆನಲ್ಕಿಂತೆಂದನೆದ್ದು ನಮಿಸಿ || (57)

ತಾತ ನೀನೆನ್ನ ತಪದಿಂ ತುಷ್ಟ ನಾದಡೆಯು |
ಭೂತಳವು ಮೆಚ್ಚುವೊಲ್ ಬ್ರಹ್ಮರ್ಷಿಗಣದೊಳುಂ |
ಖ್ಯಾತನಂ ಮಾಡೆಂದು ಬಿನ್ನವಿಸೆ ಪೊಂಬೊಡೆಯನಿಂತೆಂದನುಚಿತದಿಂದ ||
ಶೀತಾತಪಂಗಳಂ ಸಹಿಸಿ ನೀಂ ಕೆಲಕಾಲ |
ಭೀತಿಯನ್ನುಳಿದಕ್ಷಜಯಗೈವುದೆಂದೊರೆಯೆ |
ಮಾತನಾಲಿಸಿ ಗಾಧಿಸುತನುಗ್ರತರತಪವನೆಸಗಿದಂ ಕೌತುಕದೊಳು || (58)

ಹಿಮಕಾಲದೊಳ್ ಜಲದಿ ಪ್ರಾವೃಟ್ಸುಕಾಲದೊಳ್ |
ಗಮಕದಿಂದಂಬರದಿ ಘರ್ಮದೊಳ್ ಪಂಚಾಗ್ನಿ |
ಯಮಿತೋಷ್ಣಮಧ್ಯದೊಳ್ ಮರುತಭಕ್ಷಣೆಯಿಂದ ಕರಗಳೂರ್ಧ್ವಕ್ಕೆ ನೆಗಹಿ ||
ಮಮತೆಯಂ ನೀಗಿ ದಾರುಣತಪದೊಳಿರೆ ಮೌನಿ |
ಯಮರೇಶ ನಿಖಿಳದೇವರ್ಕಳಾಲೋಚಿಸುತ |
ಸಮುದೇಭಗಮನೆ ರಂಭೆಯೊಳೆಂದನೀ ಪರಿಯನೆಲ್ಲ ವಿಸ್ತರಿಸಿ ನಯದಿ || (59)

ಹಿಮಶೈಲದೊತ್ತಿನೊಳ್ ಕೌಶಿನೀತೀರದೊಳ್ |
ಭ್ರಮೆಯುಳಿದು ಗಾಧಿಸುತನುರುತಪದೊಳೆಸೆದಿರ್ಪ |
ರಮಣೀಯರೂಪಾಂತು ಪೋಗಿ ನೀನಾ ಯತಿಯ ಮೋಹವಶನೆಂದೆನಿಪುದು ||
ಸುಮನಸರ ಕಾರ್ಯಮಿದು ರಂಭೆ ನಿನಗೆ ಸಹಾಯ |
ಸುಮಬಾಣ ಶುಭ್ರಾಂಶುಕೀರಸಾರಿಕೆಗಳಿಂ |
ಕಮನೀಯತಂಬೆಲರಿನೊಡನೆರದು ನಾಂ ಬಪ್ಪೆನೆನಲೆಂದಳಮರೇಶನೊಳ್ || (60)

ಹರ(ನ) ನಿಟಿಲಾಗ್ನಿಕಲ್ಪಕ್ರೋಧಿಯಾ ಮೌನಿ |
ತರುಣಿಯರ ಕಂಡಡಾಕ್ಷಣಕೆ ಶಪಿಸದೆ ಮಾಣ |
ಬರಿದೆ ಪಡುವಾಯಾಸಮಲ್ಲದದು ಫಲಜನಿಸದೆಲೆ ನಿಲಿಂಪಾಧಿನಾಥ ||
ಹರುಷಗೊಳುತೆಂದನೆಲೆ ರಂಭೆ ನೀಂ ಭಯದಿಂದ |
ಮರುಗದಲೆ ಮ[1](ಚ್ಛಾ)ಸನಂಗೈದಡಾಂ ನಿನಗೆ |
ಬರುವುದೇನುಂಟದಂ ಪರಿಹರಿಪೆನೆಂದಭಯಮೀಯಲಾ ಸತಿ ವಿಭವದಿ || (61)

---

1 ಮತ್ಸಾಸನಂ.

ನಲಿವ ಸೋಗೆಗಳಂಚೆಕೊಂಚೆಪರಭೃತಕೀರ |
ಚೆಲುವ ಮಂದಾನಿಲಂ ಚಂದ್ರಮಂ ಮನ್ಮಥನ |
ಬಲದೊಡನೆ ಬಂದು ವಿಶ್ವಾಮಿತ್ರ ತಪಮೆಸಗುತಿರ್ಪ ತಾಣವನು ಪೊಂದಿ ||
ಕಲರವದ [1]ಕಲ(ಕಲ)ಗಳಂ ತೋರಿ ತಾಳಸಂ |
ಕಲಿತರಾಗವ ಪಾಡಿ ಕಲುಮರನು ಮೋಹಿಪಂ |
ತೊಲಿದು ನಾನಾವಿಧದ ವಂಚನೆಗಳಿಂ ದೇವಸುದತಿ ಸುಳಿದಾಡುತಿರಲು || (62)

ಪರಿಮಳದಿ ಸಂಭರಿತವಾಗಲೆಣ್ದೆಸೆಗಳುಂ |
ಪರಿಪರಿಯ ಗೀತಮಾಧುರ್ಯದಿಂದಲಿ ಹೃದಯ |
ಸರಸಿರುಹವ್ಯಾಕೋಚವಾಗಲೀಕ್ಷಿಸಿದನಾ ಗಾಧಿನಂದನ ಹರ್ಷದಿ ||
ಬೆರೆದು ಸರಸಿಜಬಲದಿ ಬರುವ ಸುರರಂಗನೆಯ |
ಪರಿಯ ಕಾಣುತ ಶಕ್ರಕೃತಕುಟಿಲಮೆಂದರಿತು |
ಉರಿಯನುಗುಳ್ವಕ್ಷಿಯುಗದಿಂದ ಬಿಡುಗಣ್ಣಬಲೆಯಂ ನೋಡುತಿಂತೆಂದನು || (63)

ಕೊಡಹುತ್ತ ಹೃಷಿಕಗಳನಡಿಗಿಸುತ ಪಸುತೃಷೆಗ |
ಳಡಿಗಡಿಗೆ ತನು ಕೃಷಿಸುವಂದದಿ ನಿರಾಹಾರ |
ಮಡಸಿ ತಪದೊಳಗಿರ್ಪ ಮೌನಮಂ ನೀಗಲೆಂದೈತಂದೆ ದುರ್ಮನದಲಿ ||
ಸುಡು ಮತಿಯು ದುರ್ಭಗೆ ದುರಾಚಾರಯುತರಂಭೆ |
ಕೆಡೆ ಶಿಲಾಕಾರದಿಂ ಪತ್ತುಸಾಸಿರವರುಷ |
ಕೊಡನೆ ಬ್ರಾಹ್ಮಣನೋರ್ವನುದ್ಧರಿಪ ಮತ್ಕ್ರೋಧಕಲುಷಿತಳನೆಂದು ಶಪಿಸಿ ||

ಮನದನ್ನೆ ಕೇಳು ವಿಶ್ವಾಮಿತ್ರನೀ ಪರಿಯ |
ಘನತರದ ಕೋಪದಿಂ ಶಪಿಸಿ ರಂಭೆಯಮರ್ಷ |
ಕೊನೆಗಾಣದಿರೆ ಸ್ಮರಾದಿಗಳೆಲ್ಲ ಭೀತಿಯಿಂದರುಗಿದರು ಸಿಲ್ಕದಂತೆ ||
ಅನಿತರೊಳ್ ಮೌನಿ ತನ್ನೊಳ್ತಾನೆ ಚಿಂತಿಸುತ |
ಮಿನಿತುಂ ತಪೋವಿಘ್ನಮೇಂಗೈದೆ ರೋಷ ಬಂ |
ಧನಕಾರಿಯಲ್ಲದಾರ್ಗೊಳ್ಳೆಯದು ಶಿವಶಿವಾಯೆನುತ ಮರುಗುತಲೆ ಮಗುಳೆ || (65)

ಕೋಪವೆಂಬುದು ನಿಖಿಳಪಾಪಗಳ ತವರುಮನೆ |
ತಾಪಂಗಳುರುನಿಲಯು ಸಕಲಹಿಂಸಾಗಾರ |
ರೂಪನಳಿಸುವ ಶಮನದೇಶೀಯಮದರಿಂದ ಪುಟ್ಟುವುದನರ್ಥಮದರಿಂ ||
ಕೋಪಿಸೆನು ಶ್ವಾಸಮಂ ಬಿಡದೆ ಬಂಧನಗೈವೆ |
ಶ್ರೀಪತಿಯ ಪದದಾಣೆ ಶತವರುಷಕೊಮ್ಮೆ ಕೈ |
ಲಾಪನಿತಮುಸುರ್ವಿಡುವೆ ನಿಜತಪೋನಿಷ್ಠೆಯಿಂ ಬ್ರಾಹ್ಮಣ್ಯದೊರಕುವನ್ನ|| (66)

---

1 ಕಲರವಂಗಳಂ.

ಉಸುರ ಬಿಡದುಸುರದಲೆ ಉಣ್ಣದೊರಗದೆ ತೃಷೆಯ-|
ಪಸರಮಂ ವೀಕ್ಷಿಸದೆ ಪತ್ತುಸಾಸಿರವರುಷ |
ಮೆಸಗುವೆಂ ತಪವನೆಂದಾ ಗಾಧಿನಂದನಂ ಮಾಡಿ ತನ್ನೊಳ್ ಶಪಥಮಂ ||
ದೆಸೆಯನುಳಿದಂ ಹೈಮವತಿಯ ಭಾಸ್ಕರನುದಿಪ |
ದೆಸೆಯೊಳಗೆ ಘೋರತರವಾಗಿ ಬಿಡದಾಚರಿಸಿ |
ಪೊಸತರದಿ ತಪವನೆಸಗಿದ ಪ್ರತಿಜ್ಞೆಯನುಳಿಯದೇನೆಂಬೆನದ್ಭುತವನು || (67)

ಬಂದೆರಗುವತಿವಿಘ್ನರಾಶಿಗಳ ಸಮುದಯಗ |
ಳೊಂದ ಗಣಿಸದೆ ದಶಸಹಸ್ರವತ್ಸರ ತಪವ |
ಛಂದದಿಂದೆಸಗಿದಂ ವ್ರತಪೂರ್ಣವಾಗಲಾ ಮೌನಿ ಭೋಜನಗೈವರೆ ||
ಒಂದು ಪಿಡಿಯಕ್ಕಿಯಂ ಪಾಕಗೈದುಣಲೆಳಸೆ |
ಬಂದು ಯಾಚಿಸಿದಂ ದ್ವಿಜನ್ಮನಂತೆ ಬಿಡೌಜ |
ಕುಂದದಾ ಮುನಿಯಿತ್ತ ನಲಿದು ಸಿದ್ಧಾನ್ನಮಂ ನಿರ್ಮಲಮದೆಂತೊ ಮನದ ||

ಮೌನದಿಂದನುಮಾನಗೊಳ್ಳದಾ ಬಾಡಬಗೆ |
ಸಾನುರಾಗದಲಿ ಸಿದ್ಧಾನ್ನಮಂ ಕೊಟ್ಟು ಮು-|
ತ್ತೇನೊಂದನೆಣಿಸದಲೆ ಧೃತಿಯಿಂದಲುಚ್ಛ್ವಾಸನಿಶ್ವಾಸನಾಗಿ ತಪವ ||
ಜ್ಞಾನನಿಧಿಯಾಚರಿಸಲುತ್ತಮಾಂಗದಿ ಧೂಮ |
ತಾನುದಿಸಿ ಪದಿನಾಲ್ಕುಲೋಕಮಂ ನಡುಗಿಸಿದು |
ದೇನೆಂಬೆನುರಿಯೋಡಿ ಬಿಟ್ಟ[1](ಧೂಮ)ಗಳೆನಲ್ದೇವತತಿ ತಲ್ಲಣಿಸಿತು || (69)

ಉರುತರತಪಸ್ಸಿನ ಸುತೇಜದಿಂ ಭಾಸ್ಕರನು |
ಸುರಯಕ್ಷಕಿನ್ನರೋರಗಸುಪರ್ಣಾದಿಗಳ್ |
ಮೆರೆದರಲ್ಲಲ್ಲಿ ಖದ್ಯೋತಂಗಳಂದದಿಂ ಮಂದರಶ್ಮಿಕರಾಗುತ ||
ಮರುಗಿ ಕಲ್ಮಷರೂಪರಾಗಿ ಖಿನ್ನತೆಯಿಂದ |
ಸರಸಿಜಾಸನನೆಡೆಗೆ ನಡೆತಂದು ನಿಜಭಾವ |
ಭರಿತಸದ್ಭಕ್ತಿಯಿಂದೆರಗಿ ಬಿನ್ನವಿಸಿದರು ಸಕಲದೇವಪ್ರಮುಖರು || (70)

ದೇವ ಕುಶಿಕಾತ್ಮಜನು ಕ್ರೂರತಪದಿಂದಿರ್ಪ |
ನಾವನೇಕವಿಧಂಗಳಿಂದಂತರಾಯಗಳ |
ಸಾವಧಾನದೊಳೆಸಗಿದರು ಗಣಿಸದಭಿವೃದ್ಧಿಗೈದಾತ್ಮಸಾಧನಗಳ ||
ಭಾವಶುದ್ಧದಲೆಸಗುತಿಪ್ಪ ವೃಜಿನಸ್ವಲ್ಪ |
ತಾವೆನಿಸಿದನಘನಾತನ ಮನೋಭೀಷ್ಟಮಂ |
ನೀವೀಯದಿರೆ ಚರಾಚರವಿನಾಶನಗೈವನಾ ತಪೋಮಹಿಮೆಯಿಂದ || (71)

---

1 ಧಾನ್ಯಗಳೆನಲ್.

ವ್ಯಾಕುಲಗಳಾದುವೆಣ್ದೆಸೆ ಧೂಮ ವ್ಯಾಪಿಸಿತು |
ಸಾಕಲ್ಯಮಾಗಿ ಸಾಗರಗಳೆಲ್ಲವು ಕುದಿದು |
ನಾಕನಿಳಯಂ ನಡುಗಿ ಕುಧರಗಳ್ ಸಿಡಿಯುತಿನೆ ಭೂಮಿ ಕಂಪನಮಾದುದು ||
ಶ್ರೀಕರದ ಚಿತ್ರಪುತ್ತಳಿಗಳಾದುದು ಲೋಕ |
ನೇಕಶುಭ್ರಾಂಶು ತಾರೆಗಳು ನಿಷ್ಪ್ರಭೆಯೆಂದ |
ಲಾಕರ್ಷಣಂಗೈದನನಿಲ ಸುಳಿಯದೆ ಭಯದೊಳಡಗಲಿಚ್ಛೈಸಿರ್ಪನು || (72)

ಮೂರುಲೋಕವನುಳುಹಲೋಸುಗಂ ಪೊಂಬೊಡೆಯ |
ಕಾರುಣ್ಯದಿಂದ ಕೌಶಿಕನಿಪ್ಪ ತಾಣಮಂ |
ಸಾರಿ ಮನದಿಷ್ಟಮಂ ಕೊಡುವುದೆಂದಮರಗಣ ಬಿನ್ನವಿಸಲಂಚಿದೇರಂ ||
ಭೂರಿಲೋಚನಮುಖ್ಯರೊಡಗೊಂಡು ನಡೆತಂದು |
ಸಾರಮೃದುವಾಣಿಯಿಂ ಬೆಸಗೊಂಡನೆಲೆ ಮುನಿಪ |
ಘೋರತಪದಿಂದ ಹರ್ಷಿತನಾದೆ ನಿರ್ಜರಸಮೂಹದೊಡನೈತಂದೆನು || (73)

ಮೂಲೋಕದಲಿ ಸಾಟಿಯಿಲ್ಲದಿಹ ತಪದಿಂದ |
ನೀ ಲೋಕಪೂಜ್ಯಕರ ಬ್ರಾಹ್ಮಣ್ಯಮಂ ಪಡೆದೆ |
ಶೀಲಸದ್ಗುಣನಿಲಯ ದೀರ್ಘಾಯುವನ್ನೀವೆನೀ ಮರುದ್ಗಣಸಹಿತಲೆ ||
ಆಲಸ್ಯಮಂ ಮಾಡದೀ ಕಷ್ಟವನ್ನುಳಿದು |
ಪಾಲಿಪುದು ನಿಜಧರ್ಮಮಂ ಸುಖದೊಳೆಂದು ಗೋ |
ಲೋಲನುಸುರಲ್ ಗಾಧಿನಂದನಂ ವಂದಿಸುತ ಮಾರುತ್ತರಂಗೊಟ್ಟನು || (74)

ಕಿಂಕರತೆಯಿಲ್ಲದಿಹ ಬ್ರಾಹ್ಮಣ್ಯ ದೀರ್ಘಾಯು |
ಶಂಕೆಯಿಲ್ಲದೆಯೆನಗೆ ಬಂದುದುಂಟಾದಡೆಯು |
ಓಂಕಾರಮಾ ವಷಟ್ಕಾರವೇದಂಗಳುಂ ಸ್ವಾಧೀನಮಾಗಲೆಂದು ||
ಪಂಕಜಾಸನತನಯನೆನಗೆ ಬ್ರಹ್ಮರ್ಷಿಯೆಂ |
ಬಂಕಿತದಿ ಕರೆಯಲೆನ್ನಭಿಮತ ಕೃಪಾದೃಷ್ಟಿ |
ಯಂಕುರಿಸೆ ಪಾಲಿಪುದೆನಲ್ಕಖಿಲಸುರರುಸಹ ಕಮಲಭವನಿಂತೆಂದನು || (75)

ಸಂದೇಹಮೇನಿದಕರುಂಧತೀಪತಿ ನಿನ್ನ |
ಹೊಂದಿ ನೇಹದಲಿ ಬ್ರಾಹ್ಮಣಮೌಳಿ ಮಾಣಿಕ್ಯ |
ಮೆಂದೆನಲಿ ಸುಖಿಯಪ್ಪುದೆನುತೊರೆದು ಬೊಮ್ಮಸಹ ನಿಜನಿಲಯಕೈದೆ ಸುರರುಂ ||
ಬಂದು ಕೌಶಿಕನೆಡೆಗೆ ಬಿಜ್ಜೆಗನ ಮಗನಾಗ |
ಬಂಧುತ್ವಮಂ ಬಳಸಿ ಬಹುವಿಧದಿ ಸನ್ಮಾನ |
ದಿಂದ ಮನ್ನಣೆಗೈದು [1]ಭೂ(ದೇವ)ರಗ್ರಭವ ನೀನಪ್ಪೆಯೆನುತೊರೆಯಲು || (76)

---

1 ಭೂಜನ್ಮರಗ್ರಭವ.

ಗಾಧಿನಂದನ ಧರ್ಮಮೂರ್ತಿ ಬ್ರಾಹ್ಮಣ್ಯಮಂ |
ಶ್ರೀಧರನ ಕೃಪೆಯಿಂದ ಪಡೆದು ಸಂಭ್ರಮದಿಂದ |
ಲೀ ಧರೆಯು ಮೆಚ್ಚುವಂದದಿ ಪೂಜೆಗೈದಡಾ ಸಾರಸಾಸನ ತನಯನು ‖
ಬೋಧಸ್ವರೂಪ ಸದ್ಧರ್ಮಪರನಾಮ್ನಾಯ |
ವೇದಿಗಳೊಳುತ್ತಮು ತಪೋನಿಗ್ರಹಂ ನಿಖಿಲ |
ಸಾಧುಜನಸಹಕಾರಿಯೆನಿಸಿ ಸಂಚರಿಸುತ್ತ ಮೆರೆದ ರಘುಕುಲವಲ್ಲಭ ‖ (77)

ರಾಮಲಕ್ಷ್ಮಣರ ಸನ್ನಿಧಿಯೊಳು ಶತಾನಂದ |
ನಾ ಮಹಾಮೌನಿಯ ಚರಿತ್ರೆಯಂ ವಿಸ್ತರಿಸೆ |
ಪ್ರೇಮದಿಂದಾಲಿಸುತ ಜನಕನೃಪಕುಲತಿಲಕನಿಂತೆಂದ ಕುಶಿಕಜಂಗೆ ‖
ಸ್ವಾಮಿ ಕಾಕುತ್ಸ್ಥಸಹ ಕೃಪೆಯಿಂದಲೈತಂದು |
ಕಾಮಿತಗಳಿತ್ತು ಕೃತಕೃತ್ಯನೆಂದೆನಿಸಿದುದ |
ಕೀ ಮಹಿಯೊಳಾನೇಸು ಧನ್ಯನೋ ಮತ್ಪುಣ್ಯಫಲವನೇಂ ವರ್ಣಿಸುವೆನು ‖ (78)

ಅಪರಿಮಿತಗುಣಮಪ್ರಮೇಯಬಲಮುಂತಪಗ |
ನಪರಿಮಿತತೇಜಾಢ್ಯನೇಕಚಾರಿತ್ರಗಳ |
ವಿಪುಳಮೆನೆ ರಾಮನಭ್ಯಾಶೆಯಲಿ ಮುನಿಯಿಂದಲಾಂ ಕೇಳ್ದು ತಳುವಿಲ್ಲದೆ ‖
ಜಪಿತಾಂ ವರಿಷ್ಠ ಭೂಯೋಭೂಯ ಕೇಳ್ವೆನೆಂ |
ದುಪಮೆಗೈವುದು ಚಿತ್ತವೃತ್ತಿಯಾದರು ಜೀಯ |
ತಪನಮಂಡಲ ಲಂಬಮಾನಮಾಗೊಪ್ಪಿರುವದಪ್ಪಣೆಯನೀಯೆ ದಯದಿ ‖ (79)

ತರಣಿಯುದಿಸಲ್ಬಂದು ಸಂದರ್ಶನಂಗೈದು |
ಹರ್ಷಸಾಗರದೊಳೋಲಾಡುತಿಹೆನೆಂದೊರೆದು |
ಚರಣಯುಗಳಕ್ಕೆರಗಿ ಬೀಳ್ಕೊಂಡು ನಿಜನಿಲಯಕೈದಿದಂ ಮಿಥಿಲೇಶನು ‖
ಕರುಣಾವನಧಿ **ರಾಮಪುರ**ದರಸಲಕ್ಷ್ಮಣರ |
ತ್ವರಿತದಿಂದೊಡಗೊಂಡು ವಾಟಕೈದಿದ ಮೌನಿ |
ಪರಮರ್ಷಿಸಮುದಯಂ ಪೂಜಿಸುತ ನುತಿಸುತಿರಲಾನಂದಮಯನಾಗುತೆ ‖ (80)

ಸಂಧಿ ಹದಿನೆಂಟಕ್ಕಂ ಪದಂಗಳ್ 1087

---

# ಹತ್ತೊಂಬತ್ತನೆಯ ಸಂಧಿ

ಸೂಚನೆ ॥ ತರುಣೇಂದುಶೇಖರಶರಾಸನವ ಶೈಥಿಲ್ಯ |
ಕರಮೆನಿಸಿ ಲೀಲೆಯೋಳ್ ಭೂಸೂರಸುರಾಸುರರ |
ನೆರವಿ ಸಂಸ್ತವಗೈಯಲಮಿತವೈಭವದಿ ರಾರಾಜಿಸಿದ ರಘುವೀರನು ॥

ಒಡಹುಟ್ಟಿದಳ ನಿಲಯಕೂಣಯುವನೆಸಗಿ ಮು-|
ತ್ತಡರಿ ಲೋಕೇಶಮುಸ್ತಕದಗ್ರಮಂ ದ್ವಿಜರ |
ನೊಡನೆ ಸಂಕಟಗೊಳಿಸಿ ನಿಶಿಯಗತಿವಿಡಿದಿರ್ಪ ರಾಜಾಭಿಧಾನ ಮಾತ್ರಂ ॥
ಎಡೆಗೊಳಲ್ ಶಶಿ ತದಾಶ್ರಯದಿಂದ ಕುವಲಯಗ |
ಳಡಿಗಡಿಗೆ ಕುಮುದಮಾಂತಪುದಚ್ಚರಿಯೆ ಲಘಿಮ |
ಗಡಸಿದುನ್ನತ ಪತನಬೀಜಮೆಂಬೊಲ್ ಚಂದ್ರ ಚರಮಗಿರಿಗೀಳಿದನಗಜೆ ॥ (1)

ದ್ವಿಜನಿಕರ ಸನ್ಮಾರ್ಗವೃತ್ತಿಯನ್ನನುಕರಿಸೆ |
ಭಜಿಸೆ ಪದ್ಮಾಸನಾಭ್ಯಾಸಮಂ ಹಂಸರುಗ |
ಳಜನಿಲಯ ಗೀರ್ವಾಣಲಕ್ಷ್ಮೀಸಮೃದ್ಧಿಕರಮಾಗೆ ರಜನೀದಿತಿಜರು ॥
ತ್ಯಜಿಸಿ ಗರ್ವಾಂಧತೆಯನೆಣ್ದೆಸೆಗಳಂ ಸಾರೆ |
ಗಜಬಜಿಸೆ ದುರ್ವೃತ್ತರಾಜಮಂಡಲ ಬೇಗ |
ವಿಜಯರಘುವೀರನಪ್ರತಿಮಪ್ರತಾಪಮೋಯೆನಲಹಸ್ಕರನುದಿಸಿದಂ ॥ (2)

ಆರಕ್ತನಾಗುತೈಂದ್ರೀಮುಖದಧೀನಾಥ |
ಚಾರುತರಮೆನಲು ಜೃಂಭಣಗೈವುತಮರೇಂದ್ರ |
ಸಾರಥಿಗೆ ನೇಮಿಸಿದ ತೇರ ಸಿಂಗರಿಸೆಂದು ಮಿಥಿಲಾನಗರಿಗೈದಲು ॥
ಮೇರುಚಾಪನ ಚಾಪಖಂಡನೆಯ[1](ಸಾಗರದ |
ದಾರಿಕೆಯ ಮದುವೆಯುಂ) ಮಾಳ್ಪರುಜ್ಜುಗಗೊಂಬು |
ದೋರಂತೆ ನಿಜಮನೋರಥರಮಾನಾಥನಂ ನಿಟ್ಟಿಪಭಿಲಾಷೆಯಿಂದೆ ॥ (3)

ಸುರಪ ಮಿಥಿಲಾಪುರಕ್ಕೈದುವೀ ಶುಭವಾರ್ತೆ |
ಪರಿಕಲಿಸೆ ಗಂಧರ್ವಯಕ್ಷಕಿನ್ನರಸಿದ್ಧ |
ರುರಗಮರುತಾದಿಗಳ್ಬಂದರತಿವೇಗದಿಂದತಿಮನೋಹರ್ಷದಿಂದ ॥
ಪರಮರ್ಷಿದಿಕ್ಪಾಲಸರಸಿಜೋದ್ಭವಮುಖ್ಯ |
ರುರುತರಾನಂದಸಂದೋಹದಿಂದೈತಂದ |
ರರಿನಿಕೃಂತನ ಶರಣದುರಿತೋಪಶಾಂತ ಶ್ರೀಕಾಂತನಂ ಕಾಣ್ಬೆವೆಂದು ॥ (4)

---

1 ಚಾಪಖಂಡನೆಯನುದಧಿಯ ಕು | ಮಾರಿಯ ವಿವಾಹಮಂ

ಪಾಕಶಾಸನಮುಖ್ಯದಿವಿಜರಂಬುಜನಿಲಯ |
ಲೋಕಪಾಲಕಸಿದ್ಧಚಾರಣರ್ ಮೌನಿಗಳ |
ನೇಕಸಂಭ್ರಮದಿಂದ ನಿಜನಿಲಯಕೊಡಗೊಂಡು ಬರಲು ಮಿಥಿಲಾನಗರಕೆ ||
ಬೇಕಾದ ವಸ್ತುಗಳನಿತ್ತು ಸತ್ಕರಿಸಿದಂ |
ಶ್ರೀಕಾಂತಗೇಕಾಂತ[1](ದೊಳು ಶರಣನಾ)ಖ್ಯಾನ |
ವ್ಯಾಕುಲಿತಮಾನಸದೊಳತಿಭಕ್ತಿಯುತನಾಗಿ ಸಜ್ಜನರ್ಮೆಚ್ಚುವಂತೆ || (5)

ಸುದತೀಮಣಿಯ ಮದುವೆಯಂ ಮಾಳ್ಪ ಜನಕನೆರೆ |
ಬದುಭುತದ ವಾರ್ತೆಯನ್ನಾಲಿಸಿದ ಮಾತ್ರದೊಳ್ |
ಕದನಕರ್ಕಶಪಂಕ್ತಿಕಂಠ ಘಟಕರ್ಣಾದಿದಾನವರ ಪಡೆ ಬೇಗದಿಂ ||
ಕುಧರಂಗಳೈತಂದ ಮಾಳ್ಕೆಯೊಳ್ ಬರೆ ಕಂಡು |
ಬೆದರಲನಿಮಿಷನಿಕರಮಾಪುರಂ ತಲ್ಲಣಿಸೆ |
ಬೆದರದೆ ನೃಪಾಗ್ರಣಿ ವಿದೇಹನಂದನನಿರ್ದನತಿಮನೋಹರ್ಷದಿಂದ || (6)

ಅಂಗ ನೇಪಾಳ ಪಾಂಚಾಳ ಕರ್ಣಾಟಕಾ |
ವಂಗ ಬರ್ಬರ ಘೋಟ ಲಾಟ ಕಾಶ್ಮೀರಂ ಕ |
ಳಿಂಗ ದ್ರಾವಿಡ ಚೋಳ ಕೇರಳಂ ಸೌರಾಷ್ಟ್ರಮಾಂಧ್ರ ಗುಜ್ಜರ ಮಾಗಧ ||
ಬಂಗಾಳ ಕೊಂಕಣ ವರಾಟ ಮಲೆಯಾಳಮು-|
ಖ್ಯಂಗಳವನೀನಾಥರೈತಂದರತುಲಿತಬೆ |
ಡಂಗಿನಿಂ ವೈದೇಹಿಯನ್ನೊಲಿಪ ಕಾಂಕ್ಷೆಯಿಂದತಿಮನೋಹರವೇಗದಿ || (7)

ಮನುಮುನಿಗಳಂ ಪೊರೆಯಲನುಪಮಿತಹಾರ್ದದಿಂ |
ವನಧಿಮೇಖಲೆಯೊಳವತರಿಸಿದಚ್ಯುತನಿಂಗೆ |
ಘನತರಾಮೋದಮಹುದೀಕ್ಷಿಸಿ ಕೃತಾರ್ಥತೆಯ ತಾಳ್ದಪೆವೆನುತ್ತ ಮುದದಿ ||
ತನತನಗೆ ಪದಿನಾಲ್ಕುಲೋಕವಾಸಿಗಳೆನಿಪ |
ಜನರು ನಡೆತರೆ ಕಂಡು ಜನಕ ಸಂತೋಷದಿಂ |
ಸನುಮಾನಗೈವುತ ಯಥೋಚಿತದಿ ಸತ್ಕರಿಸಿ ಬೆಸಗೊಂಡ ಕುಶಲಗಳನು || (8)

ಬಳಿಕ ಕುಲಗುರುಶತಾನಂದರನ್ನೊಡಗೊಂಡು |
ಘಳಿಲನೈತಂದು ವಿಶ್ವಾಮಿತ್ರನಂಘ್ರಿಯುಗ |
ನಳಿನಂಗಳಂ ಪೂಜೆಗೈದು ರಾಘವಲಕ್ಷ್ಮಣಾದ್ಯರಂ ಕುಸ್ತರಿಸುತ ||
ಜಳಜಭವಮುಖ್ಯದೇವರ್ಕಳು ಮುನೀಶ ಭೂ |
ತಳದೊಳುಳ್ಳಖಿಳಭೂಭುಜರೆಲ್ಲ ವಹಿಲದಿಂ |
ನಿಲಯಕೈತಂದಿರ್ಪರಿಂದೀ ಸ್ವಯಂವರಕೆ ಮುನಿಕುಲೋತ್ತಂಸ ದಯದಿ || (9)

---

1 ಶ್ರೀಕಾಂತಗೇಕಾಂತಶರಣಕಾಖ್ಯಾನ |

ಭುವನೇಶನಣುಗರುಗಳೊಡವೆರೆದು ಬೇಗದಿಂ |
ಸವನಮಂದಿರದೆಡೆಗೆ ನಡೆತಂದು ಮುಂದಪ್ಪ |
ಕುವಲಯಾಧಿಪ ಕಜ್ಜಮಂ ನಿರೂಪಿಸವೇಳ್ಕುಮೆನುತ ಬಿನ್ನವಿಸಿ ದಯದಿ ||
ಭವಸನ್ನಿಕಾಶಯತಿವರ್ಯನಂ ಯಜ್ಞೀಯ |
ಭವನಕ್ಕೆ [1](ಕರೆ)ತಂದು ಕಾರ್ತಸ್ವರಾಂಕಿತದ |
ಶಿವಪೀಠದೊಳು ಕುಳ್ಳಿರಿಸಲಾಗ ಮುನಿಪನಿಂತೆಂದ ಮೃದುನುಡಿಗಳಿಂದೆ || (10)

ದೇಶದೇಶದ ಭೂಮಿಪಾಲಮುಖ್ಯರು ಭಾರ |
ತೀಶಮುನಿಗಂಧರ್ವಯಕ್ಷಸಿದ್ಧೋರಗಶ |
ಚೀಶರುಂ ಮೂಲೋಕದೊಳಗುಳ್ಳ ದಾನವಾಧ್ಯಕ್ಷರೈತಂದಿರ್ಪರು ||
ಈಶನ ಶರಾಸನವ ತಂದಲಂಕೃತಿಗೈದು |
ಮೀ ಸುರಾಸುರನೆರವಿ ನೋಳ್ಪಂತೆ ಮಾಳ್ಪುದೆನೆ |
ಭೂಸುರೋತ್ತಮನೊಳಾ ಚಾಪವೃತ್ತಾಂತಮಂ ವಿಸ್ತರಿಸಿ ಪೇಳ್ದ ನೃಪತಿ || (11)

ಕಮಲಜೋದರಭವಂ ದಕ್ಷಪ್ರಜೇಶ್ವರಂ |
ವಿಮಲಮತಿಯಿಂದ ಬಿಡುಗಣ್ಣವರ ಪೋಷಣೆಗೆ |
ಮಮತೆಯಿಂದೆಸಗಿದ ಪವಿತ್ರಕರಮನ್ಯುವಂ ವಿಧ್ಯುಕ್ತಮಾಗಿ ನಯದಿ ||
ಕ್ರಮದಿಂ ಹವಿರ್ಭಾಗಗಳನೀವ ಸಮಯದೊಳ್ |
ಸುಮನಸರಿಗಿತ್ತು ಪಶುಪತಿಯ ವರ್ಜಿಸಲಾತ |
ಗಮಿತಕೋಪೋತ್ಪತ್ತಿಯಾಗಲುರುಕೋದಂಡವಿಡಿದು ಸುರರೊಡನೆಂದನು|| (12)

ಎಲೆ ಸುಪರ್ವಾಣರಿರ ದುರ್ವಾರಗರ್ವದಿಂ |
ಸಲುವ ಭಾಗಾರ್ಧಮಂ ಉಳಿಸಿ ಮಖದೊಳ್ನೀವು |
ಗೆಲವಿನಿಂ ನಿಜಭಾಗಗಳಕೊಂಡಿರದರಿಂದ ವಧಿಪೆನೆಲ್ಲರನೀಗಲೆ ||
ನಿಲವುದೆನೆ ಭಯದಿಂ ನಿಲಿಂಪಪತಿ ನುತಿಗೈಯ |
ಲೊಲಿದಾಗಳೆಣ್ಮಯ್ಯನಿತ್ತನವರಿಗೆ ಧನುವ |
ಸಲಹೆಂದು ಮದ್ವಂಶಭವ ದೇವರಾತ(ನಿ)ಂಗಿತ್ತರಿದ ಪೂರ್ವದ(ಲ್ಲಿ) || (13)

ಅಂದಿನಿಂದೀ ಧನೂರತ್ನಮಂ [2](ಸೂ)ಕ್ತಿಯಿಂ |
ಮಂದಿರದೊಳಿಟ್ಟು ಪೂಜಿಸುತಿರ್ಪರವನಿಪರ್ |
ಪೊಂದಿ ಪಿಡಿದೆತ್ತಲಲುಗಿಸಲಸಾಧ್ಯವು ಮೂರುಲೋಕದೊಳಗುಳ್ಳವರ್ಗೆ ||
ಬಂಧುರಕೃಪಾವನಧಿ ಲಾಲಿಪುದು ಯಾಗಮಂ |
ಛಂದದಿಂ ಮಾಡಲೋಸುಗ ಧರಾಶೋಧನೆಯ |
ನಂದು ಗೈಯಲ್ [3](ಸೀ)ರದಗ್ರದಿಂದುದಿಸಿದಳಪೂರ್ವಸೊಬಗಾಂತ ಕುವರಿ || (14)

---

1 ನಡೆತಂದು. 2. ಶುಕ್ತಿಯಿಂ. 3. ಗೈಯಚ್ಚೀರದಗ್ರದಿಂ.

ಸೀತಾಸಮುದ್ಭೂತವಾಗಲಾ ಬಾಲಕಿಗೆ |
ಸೀತಾಭಿಧಾನಮಂ ರಚಿಸಿ ಮದ್ಗೃಹದೊಳತಿ |
ಪ್ರೀತಿಯಿಂ ಪುತ್ರಿಯೆಂಬಭಿಮಾನದಿಂದಾನು ಸಲಹುತಿರೆ ಕೆಲವು ದಿನಕೆ ||
ಶೀತಾಂಶುಮುಖಿ ಬಾಲಚಂದ್ರನಂದದಿ ಬೆಳೆಯ |
ಲೀ ತರುಣಿ ವೀರ್ಯಶುಲ್ಕಳೆಯೆನುತ ನಿಶ್ಚೈಸಿ |
ಭೂತಳದೊಳುಳ್ಳಖಿಳಮನುಜರಿಂಗಾನೊರೆದೆ ಸರ್ವಜನಸಂಸ್ತುತದಲಿ || (15)

ಹರನ ಕೋದಂಡಮಂ ಕರದಿಂದ ಪಿಡಿದೆತ್ತಿ |
ತಿರುವನೇರಿಸಿದಡಾವಾತನಾದರು ತನ್ನ |
ತರಳೆಗಧಿನಾಥನಹನೆಂದುಸುರಲೈತಂದರಖಿಳಾವನೀಪಾಲರು ||
ಸರಭಸದೊಳಾ ಧನುವ ನಿಟ್ಟಿಸಿ ಮಹದ್ಯತ್ನ |
ವೆರಸಿ ನಿಜನಿಜಬಾಹುಬಲಗಳಂ ತೋರಿಸಿದ |
ರುರುತರದ ಕೋದಂಡ ಕದಲದಿರಲತಿರೋಷಯುತರಾಗುತಿಂತೆಂದರು || (16)

ಕುಲಚೆಲುವುಸಂಪದಗಳನ್ನುಳಿದು ಬಾಹುಳ್ಯ |
ಬಲಪರೀಕ್ಷೆಗೆ ಧನೂರತ್ನಮಂ ತೋರಿ ಭೂ |
ಲಲನೆಯರಸರನೆಲ್ಲ ಭಂಗಿಸಿದ ಮಿಥಿಲೇಶನಧಿಕಭೂಭುಜಪಾಂಸನಂ ||
ತಲೆಯರಿದು ಬಿಸುಡವೇಳ್ಕೆನುತಲಾಲೋಚಿಸುತ |
ಕೊಲೆಗಡಕರಾಗಿ ಚತುರಂಗಮಾರ್ಬಲಸಹಿತ |
ಬಲಿದು ಪುಟಭೇದನವ ಮುತ್ತಿದರದೇಂ ಪೇಳ್ವೆ ಪನ್ನೆರಡುವರುಷ ಮುಳಿದು || (17)

ಕಾದಿದೆನು ಪ್ರತಿಭೂಪರೊಡನೆ ಬಲಮುಳ್ಳನಿತ |
ಮಾದುದಿಲ್ಲವು ಪುರೋಪದ್ರವಂ ಮಿಗುಳಿದಕೆ |
ಹಾದಿಯಿನ್ನೇನೆನುತ ಬಿಸುಸುಯ್ದು ಚಿಂತಿಸಿ ಕನಲ್ದು ಕಡುಭೀತಿಯಿಂದ ||
ಆದಿತೇಯರಿಗೆ ಮೊರೆಯಿಡಲವರು ಕರುಣದಿಂ |
ದಾಧರಿಸೆ ಚತುರಂಗಬಲಕಪ್ಪಣೆಯಗೊಡಲು |
ಭೇದಿಸಿಯೆ ರಿಪುಭಟರನೋಡಿಸಿ ಮನೋವ್ಯಥೆಯ ನೀಗಿದೆ ಮಹಾಮುಹಿಮನೆ ||

ದೇವ ನಿನಗೋಸುಗದೊಳೀ ಪೂರ್ವವೃತ್ತಾಂತ |
ಭಾವ ಪೇಳಲ್ಪಟ್ಟುದೆನ್ನಿಂದ ಮುಂದಪ್ಪ-|
ದಾವ ವಿಧ ಬೆಸನೀಯಲನುಮತಿಯೊಳಾಂ ನಡೆವೆನೆನಲು ವಿಶ್ವಾಮಿತ್ರನು ||
ದೇವಾಸುರಾದಿಭೂಭಜನೆರವಿ ನೆರೆದಿದೆಕೊ |
ದೇವ ರಘುವರಸಿಂಹರಿಗೆ ಹರನ ಚಾಪಮಂ |
ಸಾವಧಾನದಲಿ ಕಾಣ್ಬಡಿಪುದೆನಲಾ ಧರಾನಾಥ ಮಂತ್ರಿಯೊಳೆಂದನು || (19)

ಕೈಶೋರವಿಧುಶಿಖಾಮಣಿಯ ಕೋದಂಡಮಂ |
ಶೈಶವಾಕೃತಿಯಾಂತ ಮನುವಂಶಧರಣೀಶ |
ಲೇಶರಿಗೆ ತೋರಲ್ಕೆ ತಹುದೆನೆ ಹಸಾದವೆಂದೈದಿ ಮಂತ್ರೀಶ ನಯದಿ ||
ಈಶನಾಜ್ಞೆಯು ತಾಳ್ದು ಸಚಿವಾಗ್ರಣಿಯು ತಾ ರ |
ಮೇಶನಂಘ್ರಿಯ ನೆನೆವುತಷ್ಟಸಾಸಿರಭಟರ |
ವಾಸಿಯಿಂದೆಡೆಗೊಂಡು ಚಾಪವಿದ್ದೆಡೆಗೈದಿ ವಂದನಂಗೈದು ಮುದದಿ || (20)

ಗಾಲಿಯೆಂಟರ ಶಕಟಕಳವಡಿಸಿ ಚರರು ಸಂ |
ಚಾಲನಂ ಗೈದು ಭರದಿಂ ತಂದರಾ ಸಭೆಗೆ |
ಮೂಲೋಕ ನಿಟ್ಟಿಸುತಲಾಶ್ಚರ್ಯಗೊಂಡರೇನೆಂಬೆನು ಶರಾಸನವನು ||
ಮೇಲೆಮೇಲಲ್ಲಲ್ಲಿ ನೆರೆದ ಬಾಹುಜಜನರ |
ಕೋಲಾಹಲಧ್ವಾನವೆಣ್ದೆಶಾತಳಗಳಂ |
ಲೀಲೆಯಿಂ ಶಬ್ದಾಯಮಾನವೆಂದೆನಿಸಿತೈ ಪುರವು ತಲ್ಲಣಗೊಳ್ಳುವೊಲ್|| (21)

ಗೌರವನ ಶರಾಸನಂ ಬರೆ ಕಂಡು ನಿಮಿವಂಶ |
ದರಸನಿದಿರಾಗೈದಿ ನಮಿಸಿ ಪೂಜಿಸಿ ಲೋಕ |
ದರಸುಗಳ್ಸುರರಸುರರೆಲ್ಲರುಂ ಕೇಳ್ವಂತೆ ನುಡಿದಂ ಸಭಾಮಧ್ಯದಿ ||
ತಿರುವನೇರಿಸಿ ಶರವ ತೊಡಿಸಿದಂಗಾತ್ಮಜೆಯ |
ಪರಿಣಯಂಗೈದೀವೆನಿದು ಸತ್ಯವೆಂದೊರೆದು |
ಹರುಷದಿಂ ಕುಶಿಕಸುತನೊಡನೆ ಕುಳ್ಳಿರ್ದನಾ ಜನಕಾಖ್ಯವಿಖ್ಯಾತನು || (22)

*ರಾಜವೌಳಿಯ ದಿವ್ಯಧನು ಸಭಾಮಧ್ಯದಲಿ |
ಪೂಜೆವಡೆದಿರೆ ನಿಟ್ಟಿಸುತ ಭೂಭುಜೋತ್ತಮಸ |
ಮಾಜಸಂಭ್ರಮಚಿತ್ತರಾಗುತಲೆ ಮೊದಲಾದ ಮಾನಹಾನಿಗಳ ನೆನೆದು ||
ವಾಜೆಯಿಂದಿರಲಿತ್ತಲಾದಿತೇಯಾರಿಗಳ |
ರಾಜದಶಗಳ ಕುಂಭಕರ್ಣ ಪ್ರಹಸ್ತ ಸುರ |
ರಾಜಜಿತುಮುಖ್ಯದಾನವರೆಲ್ಲ ಹರುಷದಿಂದೆದ್ದರಾ ಬಿಲ್ಗೊಂಬರೆ || (23)

ಕದನಕರ್ಕಶ ಚತುರ್ದಶಲೋಕದಲ್ಲಣಂ |
ಮದನಹರಕೋದಂಡವೆತ್ತಿ ಜನಕಾತ್ಮಜೆಯ |
ಮದುವೆಯಾಗದೆ ಮಾಣೆನೆನುತ ನಿಶ್ಚೈಸುತಂ ದಶವೌಳಿಗಳನಲುಗಿಸಿ ||
ಚದುರಿನಿಂದೆದ್ದು ವಿಂಶತಿಭುಜಂಗಳನೊದರಿ |
ಮುದದಿಂದ ಕಟಕಹಾರಾದಿಗಳ ಸೈಪಿಟ್ಟು |
ಬೆದರೆ ನೆರೆದಿಹ ರಾಜಸಮುದಯಂ ಮೋದದಿಂದಡಿಯಿಡುವ ಸಮಯದೊಳಗೆ ||

---

* ಇಲ್ಲಿ ಮುಂದಕ್ಕೆ ಹೇಳುವ, ರಾವಣನು ಶಿವಧನುಸ್ಸನ್ನು ಎತ್ತುವ ವೃತಾಂತವೂ, ಪರಮೇಶ್ವರನು ಸ್ವಯಂವರಮಂಟಪಕ್ಕೆ ಬಂದು ಶ್ರೀರಾಮನ ಲೀಲೆಯನ್ನು ಕಂಡು ಆನಂದಿಸುವ ಸಮಾಚಾರವೂ ವಾಲ್ಮೀಕಿರಾಮಾಯಣದಲ್ಲಿರುವುದಿಲ್ಲ.

ಕಂದುಗೊರಳನ ಪ್ರೀಯದಣುಗ ಸಾಸಿರ ಕರಗ |
ಳಿಂದ ಶರಚಾಪಗಳ ಪಿಡಿದು ಮತ್ತಾ ನೆಲಕೆ |
ಬಂದ ಮುದದಿಂದ ಬಲಿನಂದನ ನಿಜೌನ್ನತ್ಯ ಲೋಕವಿಶ್ರುತಮೆನಿಪರೆ ॥
ಮಂದರದಕೋಡಗಳ ಪೋಲ್ವ ದಶಮಸ್ತಕಗ |
ಳಂದವಡೆದಿರೆ ಮಣಿಕಿರೀಟದೀಧಿತಿಯಿಂದ |
ಲಿಂದುಶೇಖರನ ಚಾಪವ ನೋಳ್ಪ ರಾವಣನ ಕಾಣುತತಿಹಾಸಮೆಸಗಿ ॥ (25)

ಕಾಲಿಲ್ಲದವನು ಕೈಲಾಸಯಾತ್ರೆಯ ಬಯಸು |
ತಾಲೋಕಿಪಂತೆ ತಣ್ಗದಿರಭೂಷಣನಿಂದೆ |
ಪಾಲಿತದ ಕೋದಂಡಮನ್ನೆತ್ತಲೆಳಸುತಾಯತವಾಗಿ ಬರ್ಪೆ ಮರುಳೇ ॥
ಮೂಲೋಕದೊಳು ಸುರಾಸುರರು ನಿಟ್ಟಿಸಲಳುಕಿ |
ಕೋಲಾಹಲವನುಳಿದು ಮೂಕರಂದದಿ ತಾವು |
ಬಾಲಭಾವದೊಳಿರಲ್ ಬಾಲಿಶದಶಾಸ್ಯನೀನೆಂತು ಯತ್ನೀಕರಿಸಿದೆ ॥ (26)

ನಿಲುಕದುದಕವ ಬಯಸಿ ಬಾಯಾರಿ ಬಳಲುತಿಹ |
ನೆಲದಿ ಬಾಳ್ವರೊಳೆಲವೊ ವಿಂಶತಿಭುಜಂಗಳಂ |
ತಲೆಗಳಂ ಪತ್ತ ಪೊತ್ತಿಹೆನೆಂಬ ಗರ್ವದಿಂದೀ ಚಾಪವನ್ನು ತಳೆಯೆ ॥
ಗೆಲವಿನಿಂ ಕಾಂಕ್ಷಿಸಿಹೆ ಮರುಳೆ ಕಲಿಮನುಜರಿಂ |
ಪಲಬಗೆಯ ಮಾನಹಾನಿಗಳಾದುದಂ ಮರೆದೆ |
ಎಲವೊ ದೌಷ್ಟ್ಯದೊಳೆನಲ್ ಕನಲಿ ರಾವಣನೆಂದ ಬಾಣನೊಳ್ ಖತಿಗೊಳ್ಳುತೆ ॥

ಮೂರುಲೋಕವನುದರದೊಳಗಿಟ್ಟ ಶಿವನಿಪ್ಪ |
ತಾರಾಚಲವನೆತ್ತಿ ದಿಕ್ಪಾಲಕರ ಸದೆದ |
ಧೀರನ ಮಹಾಬಾಹುಗಳ ನೀಚಯಿಳಿಗೈದೆ ವಟದ ಬೀಳಲುಗಳಂತೆ ॥
ನೂರುಪತ್ತಾದಕರಗಳನಾಂತು ರಣಮುಖದೊ |
ಳಾರ ನೀಂ ಗೆಲಿದೆ ಮತ್ತಾರ ಪಾಲಿಸಿದೆ ನೀ |
ನಾರ ಸಮನೆಂದೆಸಿಸಿಕೊಂಡಿರ್ಪೆಯೆನೆ ಬಾಣನಿಂತೆಂದನತಿಕ್ರೋಧದಿ ॥ (28)

ಬೊಪ್ಪನಂ ಕಾಣ್ಬೆನೆಂದೈದುವೆಡೆಯಲಿ ಶೇಷ |
ನೊಪ್ಪೊತ್ತ ಭೂಭಾರಕಾ ಕರಂಗಳನಿತ್ತು |
ತಪ್ಪದೀರೈದಾವಸರಮನಂತನ ನೇಹಮಂ ಬಳಸಿದತಿಧೀರನ ॥
ಬೆಪ್ಪೆ ನೀನೆಂತರಿವೆಯತಿಲಘಿಮನಿಗೆ ಬಾಯ |
ಲಿಪ್ಪುದೇ ಕಾಠಿನ್ಯ ನಿಜಬಲೋದ್ಧತಿಯ ತೋ |
ರಿಪ್ಪೆಯಾದೊಡೆ ಪೇಳ್ದ ನುಡಿ ಸಹಜಮೆಂದೆನಲ್ದಶಮೌಳಿ ಭುಜಗಳೊದರಿ ॥ (29)

ತಿರುಹಿ ಮುಂಗೈಗಡಗಗಳನು ಕಾಸೆಯನುರದ |
ಸೆರಗ ಸಂವರಿಸುತ್ತ ಮಣಿಕುಂಡಲಂಗಳಂ |
ಭರದಿ ಕರ್ಣಂಗಳಿಗೆ ಶೆಕ್ಕಿ ಮುಕುಟವನೊಲೆದು ಕಾಳಾಂಜನಾದ್ರಿಯಂತೆ ||
ಹರನ ಚಾಪದ ಪೊರೆಗೆ ಸಾರಿ ಮೊಳಕಾಲಿಂದ |
ಧರಣೀತಲವನೊತ್ತಿ ಸಾಲಭುಜಗಳ ಚಾಚಿ |
ಸುರರಾಜದಲ್ಲಣದಶಾಸ್ಯ ನಿಜಸತ್ವದಿಂದೆತ್ತಿದಂ ವರ ಚಾಪವ || (30)

ಪವನಾಶನಾಶೆಯಿಂ ರತ್ನಸಾನುವ ಸುತ್ತಿ |
ತವಕದಿಂದೆದ್ದು ಮೇಣೆತ್ತುವಂದದಿ ದೈತ್ಯ |
ನಿವಹಾಧಿನಾಥ ನಿಜಕರಗಳಿಪ್ಪತ್ತರಿಂ ಪಿಡಿದು ಮುಷ್ಟಿಯಲಿ ಬಳಿಕ ||
ನೆವರಿ ಮುಗುಳೌಂಕಿ ತಕ್ಕಿಸಿ ಬಲ್ಮೆಯಿಂದೆತ್ತಿ |
ಲವಲವಿಕೆಯಿಂದಾಡನಗಿದು ನಾನಾವಿಧದಿ |
ಬವಣುವಡಲಾ ಧನೂರತ್ನಮಲ್ಲಾಡದಿರಲತಿರೋಷವೆಗ್ಗಳಿಸುತಾ || (31)

ಪಲುಮೊರೆದು ಭುಜಗಳಪ್ಪಳಿಸಿ ಹೂಂಕರಿಸುತ್ತ |
ನೆಲಮೊದೆದು ಕೋದಂಡವಪ್ಪಿ ಸತ್ವದಿ ಸಿಂಹ |
ಬಲದಶಾಸ್ಯನು ತನ್ನ ಸರ್ವಶಕ್ತಿಯ ಮೀರಿ ಮುಂಡಿಯನ್ನೂರಿ ಮುಗುಳೆ ||
ನೆಲದಿಂದ ಕಟಿತನಕವೆತ್ತಲ್ ಮಹಾದೇವ |
ಬಿಲುವಜೇಯಂ ಭರದಿ ತೊಡೆನಡುಗಿ ಕರಜೋಲ್ದು |
ಬಲಗುಂದಿ ಭೂತಳಕೆ ಕೆಡೆದ ನೆರೆದಿಹ ಸುರಾಸುರನೆರವಿ ನೋಡುತಿರಲು || (32)

ಕಕ್ಕಸದ ಕಂದುಗೊರಳನ ಶರಾಸನಕಸುರ |
ಸಿಕ್ಕಿ ಬಡಿಗೋಲ ಮೂಷಕದಂತೆ ಕಣ್ಬಿಟ್ಟು |
ಕಕ್ಕಿದಂ ಶೋಣಿತವ ನಿರಿನಿಟಿಲುನಿಳಿಲೆಂದು ನೆಗ್ಗಿದುದು ಮೂರ್ಧ್ನಿ ಭರಕೆ ||
ಕಕ್ಕುಲಿತೆ ಬಡುವುದಂ ಕಂಡು ಸುತಘಟಕರ್ಣ |
ಮಿಕ್ಕ ದಾನವರೆಲ್ಲ ಮಿಡುಕುತಿರೆ ನೆರೆದಿರ್ಪ |
ರೆಕ್ಕತುಳನೃಪನಿಲಿಂಪಾದಿಗಳ್ ಘೊಳ್ಳೆಂದು ಗಹಗಹಿಸಿ ಹಾಸ್ಯಮೆಸಗೆ || (33)

ತನ್ನ ಬಲವರಿಯದಾವಾತ ಕಾರ್ಯಾಂತರಗ |
ಳನ್ನೆಸಗಲೆಳಸುವವನೀ ಪರಿಯ ಬಹುಮಾನ |
ದುನ್ನತಂ ಪೋಗಿ ತನು ನಿಲ್ಲುವಡಸಾಧ್ಯಮುಹುದಿದು ತಥ್ಯ ದಶಮೌಳಿಯ ||
ಬನ್ನಬಡುವುದ ನೋಡಿರೆಂದು ಭೂಭುಜರೆಲ್ಲ |
ಖಿನ್ನತೆಯನೆಣಿಸುತಿರೆ ದೇವದಾನವನಿವಹ |
ಮಿನ್ನೇನು ಗತಿಯೆನುತಲೆವೆ ಮಿಸುಕದೀಕ್ಷಿಸುತಲಿರ್ದರತಿಚಿಂತೆಯಿಂದ || (34)

ಕರಿಚರ್ಮಧರನ ಕೋದಂಡದಡಿಯೊಳ್ ಸಿಲುಕಿ ।
ನರಳಿ ದಶಕಂಠ ನಾನಾಪರಿಯಲೊರಲುತಲಿ ।
ಸರಸಿಜಾಸನನಿತ್ತ ದಿವ್ಯವಾಗ್ಬಲದಿಂದಲುಳಿದು ಪೆರಸಾರಿ ಬಳಿಕ ॥
ಕರಗಳಂ ಮುಗಿದು ವಂದಿಸಿ ತನ್ನ ಬಲದೊಡನೆ ।
ಶಿರಗಳಂ ಬಾಗಿ ನಿಜನಗರಿಗೈದಿದನಿತ್ತ ।
ವರತಪೋಧನಕುಶಿಕನಂದನಂ ಸಂಭ್ರಮದೊಳೀಕ್ಷಿಸಿದ ಮಿಥಿಲೇಶನ ॥ (35)

ವೇದಶಾಖೆಗೆ ಶಿಖಾಮೌಕ್ತಿಕ ಮುನೀಂದ್ರರ ಸ ।
ಮಾಧಿಪಾಲ್ಗಡಲಿಗಮಿತೋನ್ನತದ ಜೊನ್ನಮತಿ ।
ಭೇದವಿಲ್ಲದ ಬುದ್ಧಿದೀಪ ಸಚರಾಚರದ ಚೈತನ್ಯ ದೇವತತಿಯ ॥
ನಾದರಿಪ ಕಲ್ಪತರುವೆನಿಪ ದಿವ್ಯಜ್ಯೋತಿ ।
ಮೋದದಿಂದಂಬರದಿ ಕರ್ಮರಘಹಾರ ಶರ ।
ದಾದಿಚಂದ್ರಮನಂತೆ ತೋರ್ದುದಾ ಮುನಿವರಗೆ ತ್ರಿಜಗತ್ಪ್ರಪೂರ್ಣಮಾಗೆ॥ (36)

ಪೊಳೆವ ಶುಭ್ರಾಭ್ರನಿಜತೇಜ ಭೂಮಿತಳ-।
ಕ್ಕಿಳಿದು ಬರೆ ತನ್ಮಧ್ಯ ತೋರ್ದುದತಿಲಾವಣ್ಯ ।
ದಳೆದ ಪುಂಗವ ಚಟುಲಘೋಟಕಾಧಿಷ್ಠಾನಮೆನಿಸುತೀರ್ಯೆದು ಭುಜದಿ ॥
ಪೊಳೆದಾಯುಧಂಗಳಿಂದಂಕದೊಳು ಹರಿನೀಲ ।
ಪೊಳಪಾಂತ ನಾರಿಯಿಂ ಪಂಚವದನಂಗಳಿಂ ।
ಬಳಸಿ ಬಹ ಪ್ರಮಥಗಣವರರಿಂದೆ ಮಾರಹರಮೂರ್ತಿ ಗಾಧೇಯನಿಂಗೆ॥ (37)

ಕೊರಳೊಳು ಕರೋಟಿಯುರುಮಾಲೆಯಿಂ ಲೀಲೆಯಿಂ ।
ಶಿರದಿ ಮಿನುಗುವ ಚಂದ್ರರೇಖೆಯಿಂ ಜೋಕೆಯಿಂ ।
ಧರಿಸಿದಿಭಚರ್ಮದಂಬರದಿಂದ ನಭದಿಂದ ಭೂತಳದ ಪುಣ್ಯರಾಶಿ ॥
ಬರುವುದಂ ಕಂಡ ಮುನಿಯೊಲವಿನಿಂ ನಲವಿನಿಂ ।
ಹರುಷದಿಂದೆದ್ದು ಸನ್ನುತಿಯಿಂದ ಗತಿಯಿಂದ ।
ಕರುಣಾನಿಧಿಯ ಚರಣಕೆರಗಿದಂ ತುರುಗಿದಂತಾನಂದಮಯನಾಗುತ ॥ (38)

ಸಕಲಾಗಮಾರ್ಥಪ್ರಣವಗೋಚರನೆ ಮೌನಿ ।
ನಿಕರಹೃನ್ನಿಲಯಸಂಚರಭಾನು ಭಾನುಮಿಾ ।
ಪ್ರಕರರಜನೀಕರಕೃಶಾನುನೇತ್ರತ್ರಯ ಸುರೇಶ ಹರ ವ್ಯೋಮಕೇಶ ॥
ಮುಕುತಿಭಾಗ್ಯನೆ ದೃಷ್ಟಿಪಥಗತಿಯಲಳವಟ್ಟು ।
ಸುಕರಮೂರುತಿ ಲೋಕದಾಲೋಕನಕ್ಕೆ ಸ ।
ನ್ನಿಕಟದಲಿ ಕೃಪೆಯಿಂದ ಶ್ರೀಣ್ಬಟ್ಟೆಯಾನೇಸು ಕೃತಿಯೊ ಕರುಣಾಪಾತ್ರನೆ॥ (39)

ಎಂದು ಗಾಧೇಯನಾನಂದದಿಂ ಸಂತವಿಸಿ |
ಮುಂದಕೈತರೆ ಯೋಗಿವೃಂದ ಬಹುವಿಧನುತಿಗ |
ಳಿಂದ ಜಯಜಯರಾವಮೆಸಗಿ ಕೈಮುಗಿದಿರಲ್ ನೋಡುತತಿಹರ್ಷದಿಂದೆ ||
ಬಂದು ಮೈಥಿಲಿಯರಸನಂ ನೋಡುತತುಲಮುದ |
ದಿಂದ ಕರುಣಾರಸಾಪಾಂಗದಿಂದೀಕ್ಷಿಸುತ |
ಮಂದಹಾಸದಿ ಗಜಾಸುರಮಥನ ಪೊಗಳಿದಂ ಪುಳಕಮಯನಾಗಿ ಜವದಿ || (40)

ನಾಮುಮಂ ಮರೆದೊಮ್ಮೆ ನೆನೆದರಘರಾಶಿಗಳ |
ಸ್ತೋಮ ನಾಶನವೈದಿ ಮುಕ್ತಿಭಾಜನರಪ್ಪ |
ರೀ ಮಹೀಜನರೆಂದು ಶ್ರುತಿತತಿಗಳೊರಲುತಿಹ ಪರಬೊಮ್ಮ ರಘುವಂಶದಿ ||
ಪ್ರೇಮದಿಂ ಮಾನುಷಾಕಾರದಿಂ ಜನಿಸಿ ಮ-|
ತ್ತೀ ಮಹಾಸಭೆಗೈದಿ ಕುಳ್ಳಿರ್ಪುದಂ ಕಾಣ |
ಲೀ ಮಹದ್ಭಾಗ್ಯವನದೇನೆಂದು ಬಣ್ಣಿಸುವೆನರಸ ನಿಜಪುಣ್ಯಫಲವ || (41)

ನೀನೆ ಕೃತಕೃತ್ಯ ನೃಪಮುಕುಟಮಣಿ ರಾಜರ್ಷಿ |
ನೀನೆ ಮತ್ಪ್ರೀತಿಯುತನೆಂದೊರೆವುತಾ ಮ್ಲಾನ |
ದಾನಂದದಿಂದೈದಿ ಸುಕುಮಾರತೆಯನಾಂತು ಶೋಭಿಪ ಕುಮಾರಕರನು ||
ಜ್ಞಾನನಿಧಿ ನೋಡಿ ಸಂತೋಷದಿಂದಪ್ಪಿ ನಿಗ |
ಮಾನುಮತವಾಣಿಯಿಂ ಪೊಗಳಲ್ಕೆ ರಘುವೀರ |
ಸಾನಂದದಿಂದನುಜಸಹಿತ ಸಾಷ್ಟಾಂಗಪ್ರಣಾಮಗೈದಂ ಮೋದದಿ || (42)

ಎರಗಿದ ಕುಮಾರಕರನೆತ್ತಿ ಮಗುಳಪ್ಪಿದಂ |
ಹರುಷದಿಂದಂಕದೊಳ್ಕುಳ್ಳಿರಿಸಿ ಮೃದುಮಧುರ |
ತರವಾಗ್ವಿಲಾಸದಿಂ ನುತಿಗೈದು ತಂಗದಿರಭೂಷಣಂ ನುಡಿದನಿಂತು ||
ದುರುಳರಂ ನಿಗ್ರಹಿಸಿ ಪರಮರ್ಷಿಗಳ ಪೊರೆದು |
ಸುರಜಾಲಮಂ ಕಾಯ್ದ ಪರಮಪುರುಷನೆ ಜಗ-|
ದ್ಭರಿತಸದ್ಗುಣವ ಪೊಗಳಲ್ಕದೆಂತಳವಹುದು ನಿಗಮಾಗಮಂಗಳಿಂದೆ || (43)

ಕೋದಂಡಮನ್ನೆತ್ತಿ ಕೋಮಲ ಸುಗಾತ್ರೆಯಂ |
ಮೇದಿನಿಯ ತನುಜೆಯನಯೋನಿಜೆಯ ಚಿತ್ತಾನು |
ಮೋದಕಾರಿಣಿಯ ಪರಿಣಯಗೈವುದೆಲೆ ದೇವಮಾಲಸ್ಯಮಿನ್ನೇತಕೆ ||
ಸಾಧನದಿ ನೀಂ ವಿಷ್ಣು ಧರಣಿಜೆಯು ರಮೆ ನೀನ |
ನಾದಿನಿರ್ದೇಶ್ಯಹರ ನಿರ್ಗುಣ ಪರಾತ್ಪರ ಶು |
ಭೋದಧಿಯು ಯೋಗಮಾಯಾವೃತದೊಳಿರೆ ನಿನ್ನನರಿಯರ್ಕೈ ಮೂಢಜನರು ||

ಹರ ನಾನು ಹರಿಯೆ ನೀನೆಂಬೆರಡು ಶಬ್ದಂಗ |
ಳಿರುವವಲ್ಲದೆ ವಸ್ತುವೇಕ ಭೇದವನೆಣಿಸಿ |
ನರಕಭಾಜನರಪ್ಪರಿದು ಸಿದ್ಧವೆಮ್ಮಿರ್ವರೊಳ್ ಭೇದಬುದ್ಧಿಯೆಸಗಿ ||
ಬರಿದಹಂಕಾರನಿತರೆನಿಪ(ರ್ಕೈ) ಜೀವಿಗಳು |
ಬರುವುದತಿರೋಷಖೇದ ಜ್ಞಾನಬಲದಿಂದ |
ಧರಣಿಯೊಳಭೇದವಾನಂದಕರಮೆನಿಪುದಿದು ಸತ್ಯಂ ಮದೀಯಮತವು || (45)

ಇನಿತೊರೆಯೆ ಶಿವ ಮಹಾಮೌನಿಗಣವಿೂ ನ್ನುಡಿಯ |
ತನತನಗೆ ಹರುಷದಿಂದಾಲಿಸುತ ಹಿಗ್ಗುತಿರ |
ಲನಿತರೊಳ್ಕೌಶಿಕತಪೋಧನಂ ನಿಮಿವಂಶದರಸನೊಡನಿಂತೆಂದನು ||
ಜನಪ ನೆರೆದಿದೆ ಮೂರು ಲೋಕದೊಳಗುಳ್ಳಖಿಳ |
ಜನರೆಲ್ಲರೀ ಮಹೋತ್ಸವವ ನೋಳ್ಪಾಸೆಯಿಂ |
ಘನಕೇಶಸನ್ನಿಧಿಯಲುರುಚಾಪಮಂ ತೋರ್ಪುದೀ ದಶರಥಾತ್ಮಜಂಗೆ || (46)

ಎನೆ ಜನಕನತಿಹರುಷದಿಂದೆದ್ದು ಸ್ಮರಮಥನ |
ಧನುರತ್ನಮಿಪ್ಪೆಡೆಗೆ ಪೋಗಿ ಪೂಜಿಸಿ ನಮಿಸಿ |
ವಿನಯದಿಂ ಮುನಿನಾಥಗೀ ಪರಿಯನುಸುರಲ್ಕೆ ಗಾಧಿಯ ತನೂಜಾತನು ||
ಘನಹರ್ಷದಿಂ ದಾಶರಥಿಯನೀಕ್ಷಿಸಿ ನಗುತ |
ದಿನಕರಾನ್ವಯಸಿಂಹ ಹರಶರಾಸನವ ನೀಂ |
ಮನನೊಲಿದು ನಿಟ್ಟಿಸುವುದೆನೆ ಕಕುತ್ಸ್ಥಜ ಬೇಗ ಮುನಿತಿಲಕಗಭಿವಂದಿಸಿ || (47)

ನೀಲನೀಲಾಂಗ ಸುವಿಶಾಲ ಪಾಲಾಶಾಕ್ಷ |
ಬಾಲಬಾಲಾರುಣಾಕ್ಷರಜಾಲ ಲಾಲಿತ್ಯ |
ಶೀಲ ನಾಳೀಕಕರಯುಗಳದೊಳ್ ನಾಳೀಕಚಾಪಮಂ ಧರಿಸಿ ಮುದದಿ ||
ಸಾಲಸಾಲ ನೃಪಾಲಲೋಕಮಾಲೋಕಿಸಲು |
ಮೇಲಿಮೇಲಾನಂದಲೀಲಾವಿಲಾಸದಿಂ |
ಬಾಲ ದೋಲಾಯಮಾನಗಳ ಮಾನಸಕಿತ್ತನಿತ್ತರದ ಸಭೆಗೆ ಕ್ಷಣದಿ || (48)

ಕಮನೀಯತರ ಕಾಕಪಕ್ಷದ ವಿಲಾಸದಿಂ |
ಸುಮನೋನುರಾಗಧರ ಸುಮನಿಭದ ಹಾಸದಿಂ |
ಸುಮಶರಾಯತ ನಿಯುತಕೋಟಿಗಳನೊಮ್ಮೊಮ್ಮೆ ಸೃಜಿಸುವ ಕಟಾಕ್ಷದಿಂದೆ ||
ರಮಣೀಯದಾಯತಸುವತ್ಸದಿಂದಲಿ ವತ್ಸ |
ಶಮ[1](ದಮಾಭ್ಯಾಸದೊ)ಳ್ ನಿಂದೆರೆ ನಿರೀಕ್ಷಿಸುತ |
ರಮೆಗರಸನೀತನೇಯೆಂದು ಮೌನಿಸಮಾಜ ಮಾನಸದಿ ಹಿಗ್ಗುತಿರಲು || (49)

---

1 ಶಮಥನಾಭ್ಯಾಸೆಯೊಳ್.

ಮೇರುವೆತ್ತಣುವೆತ್ತ ಮೇಣು ಹರಕರಚಾಪ |
ದಾರೋಪಣೆಯದೆತ್ತ ಕಾರುಣ್ಯ ದಶರಥಕು |
ಮಾರಕರು ತಾವೆತ್ತ ಲೋಕೋತ್ತರಬಲಾಢ್ಯರಿಂಗಾಗದಿಹ ಕಜ್ಜಮಂ ||
ತೀರಿಸುವನೆಂತಕಟ ಕುತುಕಮೆಂದೆನುತಲ್ಲಿ |
ಚಾರಣರ್ಸಿದ್ಧಗಂಧರ್ವಪನ್ನಗ[1](ರು) ಯ-|
(ಕ್ಷೋ)ರಗರ್ತಮತಮಗೆ ಸಂಶಯವನಾಂತಿರುವ ಸ್ವಾಂತದಿಂ ದಿಟ್ಟಿಸಿದರು || (50)

ಅನಿತರೊಳ್ ರಘುಕುಲಲಲಾಮನಾ ಸಭೆಯೊಳಗೆ |
ಮುನಿಪನಪ್ಪಣೆವಡೆದು ಮುದದಿಂದ ವಂದಿಸುತ |
ವಿನಯದಿಂದಭ್ರಕುಂಡಲನನುಜ್ಞೆಯನಾಂತು ವಿಕ್ರಮದಿ ಚಾಪದೆಡೆಗೆ ||
ಸನುಮತದೊಳೈತಂದು ನಿಟ್ಟಿಸುತ ದಿಕ್ಪಾಲ |
ಮನುಮುನಿಗಳಿಂಗೆರಗಿ ಮೋದದಿಂದಾತ್ಮಕುಲ |
ದಿನನೆನಿಪ ದಿನಕರನ ನೆನೆದು ಕರಗಳ ಮುಗಿದು ಕಮಲಜಂಗಭಿವಂದಿಸಿ || (51)

ಲೀಲೆಯಿಂದಲಿ ಧನೂರತ್ನವನ್ನರೆನಿಮಿಷ |
ಮಾಲೋಕನಂಗೈದು ಮಮತೆಯಿಂ ನೆರೆದ ಸುರ |
ಜಾಲ ಕೌತೂಹಲದ ವೇಣಿಯವಗಾಹಮಂ ಮಾಳ್ಪಂತೆ ವಾಮಕರದಿ ||
ಶೂಲಪಾಣಿಯ ಶರಾಸನವ ನೆಗಹುತ ಕುಸುಮ |
ಮಾಲೆಯಂ ತಚ್ಛಿಖೆಯಲಿಟ್ಟಂತೆ ಗುಣವನತಿ |
ವೇಲ ಸತ್ಕರದಿಂದ ತೊಡಿಸುವನಿತರೊಳಾದುದೇವೇಳ್ಪೆನಚ್ಚರಿಯನು || (52)

ಮದಕರಿ ಮೃಣಾಳಕಾಂಡವನು ಪಿಡಿದಿಚ್ಛೆಯಿಂ |
ಚದುರಿಂದ ಬಾಗಿಸಲ್ ಶಿಥಿಲಮಾಗುವ ತೆರದಿ |
ಪದುಮಾಕ್ಷ ಸಿಂಜಿನಿಯ ತೊಡಿಸಲಾ ಕೋದಂಡ ಮಧ್ಯಪ್ರದೇಶದಲ್ಲಿ ||
ಭಿದುರಹತಿಯಿಂ ಶೈಲಮೊಡೆವವೊಲ್ ತತ್‌ಕ್ಷಣದೊ |
ಳದುರುತಿಕ್ಕಡಿಯಾಗಲಾ ಸಮಯದೊಳ್ ರಾವ |
ಮುದಯಿಸಿತು ಸಂವರ್ತಭೈರವಾಟೋಪದುರುಡಂಬರವಿಡಂಬಿಯೆನಿಸಿ || (53)

ಕೋಟಿಸಿಡಿಲೊಮ್ಮೊಮ್ಮೆ ಬಿಡದೆ ಗರ್ಜಿಸಲು ಶತ |
ಕೋಟಿಹತಿಯಿಂ ಕುಧರತತಿಗಳುರುಳ್ವಂತೆ ಶತ |
ಕೋಟಿಗಾಘೇಯಮೈಥಿಲಕುಮಾರರನುಳಿದ ಪದಿನಾಲ್ಕುಲೋಕಜನರು ||
ಸೂಟಿಯಳಿದತುಳಮೂರ್ಛೆಯನಾಳೆ ಜಲಧಿಗಳ್ |
ತಾಟಾಡೆ ಶರಧಿಮೇಖಲೆ ನಡುಗಲಮರರವ |
ಧೂಟಿಯರು ನಿಜನಾಥರನ್ನರಸಲಲ್ಲಲ್ಲಿ ತ್ರಿದಿವಾದಿ ಲೋಕಗಳಲಿ || (54)

1 ಪನ್ನಗಯಕ್ಷ | ರೋರಗರ್ತನುತಮಗೆ.

ತುಡುಕಲಲುಗಿಸಲೀಕ್ಷಿಸುವರಸಾಧ್ಯ[1](ಮದೆನಿಪ) |
ಪೊಡವಿಧರಚಾಪಮಿಕ್ಕಡಿಯಾಗಲೀಕ್ಷಿಸುತ |
ಮೃಡ ಮನೋಹರ್ಷದಿಂದೆದ್ದು ದಶರಥತನಯನನ್ನಪ್ಪಿ ನಸುನಗುತ್ತಲಿ ||
ಬಿಡದೆ ಗಲ್ಲಗಳಲುಗಿ ಚುಂಬಿಸುವ ನೇಹದಿಂ |
ತೊಡೆಯ ಮೇಲಿಟ್ಟು ವಿಶ್ವಾಮಿತ್ರನೊಡನೆಂದ |
ಪೊಡವಿಪರೊಳೇಂ ಕೃತಾರ್ಥನೊ ಜನಕ ಲೋಕಗಳ ಜನಕನಿಗೆ ಸುತೆಯೊವರೆ ||

ಎನೆ ರಾಜಮೌಳಿಮಿಥಿಲಾಧೀಶನಭಿನಮಿಸಿ |
ವಿನಯದಿಂ ಪೂರ್ವವೃತ್ತಾಂತಮಂ ಸಂವಿತತ |
ಮೆನಲು ವಿಜ್ಞಾಪಿಸಿದ ದೇವನಾಂ ಕ್ರತುಗೈವೆನೆಂದು ಧರಣೀತಳವನು ||
ಘನತೆಯಿಂ ಶೋಧಿಸಲು ಸೌವರ್ಣಮಯಪೇಟ |
ಮಿನುಗೆ ಕಂಗಳಿಗದಂ ಪಿಡಿದೆತ್ತಿ ನಿಟ್ಟಿಸಲು |
ನನೆಗಣೆಯನಂ ಪೆತ್ತ ಪದ್ಮೆಗಿಮ್ಮಡಿಯಾಗಿ ರಾಜಿಸಿದಳಣುಗಿ ಶುಭದಿ || (56)

ಲೇಸನೀಯುವ ಸುವಾಸಿನಿಯ ಕಾಣಲ್ ಚಿತ್ತ |
ದಾಸೆಯಿಂದಾತ್ಮಭವಳೆಂದೆನಿಸಿತದರಿಂದ |
ಲೇಸುದಿನ ಪಾಲಿಸಿದಡೀ ತರುಣಿ ತನುಜಾತೆಯೆಂದೆನಿಪಳೆಂತಿವಳ್ಗೆ ||
ವಾಸಿಯನ್ನೀವ ಧವನೆಲ್ಲಿರ್ಪನಿದು ಚೋದ್ಯ |
ರಾಶಿಯಾಗಿದೆ ವಸುಮತೀಗರ್ಭದೊಳು ಪೊಳೆವ |
ಕೂಸಿನಾಕೃತಿ ತೋರ್ದುದತಿಶಯಮಿದೇನೆಂದು ಚಿಂತಿಸಿದೆ ಮೌನದಿಂದೆ || (57)

ಮತ್ತಕಾಶಿನಿಯು ನೆಲದೊಳ್ ಕಾಣ್ಬೊಡಿದು ತನಗಿ |
ದುತ್ತಮವೊ ಹೊಲ್ಲೆಹವೊ ಶಿವಶಿವಾ ವ್ಯಾಕುಲತೆ |
ಯೆತ್ತಣಿಂದಡಸಿದುದೊ ನಿರಪೇಕ್ಷೆಯಿಂದಾದುದಾಯಿತದಕೇನೆನುತಲಿ ||
ತತ್ತರಂಗೊಳುವನಿತರೊಳ್ ಶರಚ್ಚಂದ್ರಿಕಾ |
ಮೊತ್ತ ಭೂತಳಕಿಳಿದು ಬಪ್ಪಂತೆ ಸಿತಮೇಘ |
ದೊತ್ತಿನಲಿ ಪೊಳೆದುದತುಲಿತಕಾಂತಿಮಯರೂಪನೊಂದು ಜಗದಾನಂದದಿ|| (58)

ಪಾತಕಂಗಳ ಕುಜಾತಂಗಳಿಗೆ ಮಾರುತಂ |
ಭೂತಳದೊಳುಳ್ಳ ಸಜ್ಜನಭಾಗಧೇಯಂ ವಿ |
ನೀತರುಗಳಾನಂದ ಸಕಲಸೌಭಾಗ್ಯಗಳ ಕಂದ ಹರಿಗುಣವೃಂದದ ||
ರೀತಿಗಳಿಗಾಲಯವೆನಿಪ್ಪ ಪುರುಷಾಕೃತಿಯ |
ಮಾತರಿಶ್ವಾನುಗತಿವಿಡದು ರಸೆಗೈತಪ್ಪ |
ಜೋತಿಯಂ ಕಂಡು ವಿಸ್ಮಿತನಾಗುತೆವೆಗಳಂ ಮಿಡುಕದೀಕ್ಷಿಸಿದೆ ಜೀಯ || (59)

1 ಸಾಧ್ಯಮದೆನಿಪ್ಪ.

ವಲ್ಲಕಿಯ ವಾಮಭುಜದೊಳಗಿಟ್ಟು ಹರಿಕಥೆಯ |
ಸಲ್ಲೀಲೆಯಿಂ ಗೀತಮುಯಮೆನಿಸಿ ಬಾಜಿಸುತ |
ಮುಲ್ಲಾಸದಿಂದಲಾನಂದಾಬ್ಧಿಯೊಳ್ಮುಳುಗುತಾಳುತೇಳುತ್ತ ನೆಲಕೆ ||
ಬಲ್ಲಿದ ಜಟೇರೂಪವಾಂತಯತಿಯ್ಯೆತರಲು |
ನಿಲ್ಲದಾನಿದಿರೆದ್ದು ವಿಧಿಯಿಂದ ಪೂಜಿಸುತ |
ಮೆಲ್ಲನೊಡಗೊಂಡುಬಂದರ್ಘ್ಯಪಾದ್ಯಾಸನಗಳಿತ್ತು ಕುಳ್ಳಿರಿಸಿ ಬಳಿಕ || (60)

ಉರುತರತಪೋರಾಶಿ ಭವದಾಗಮನದಿಂದೆ |
ಪರಿದುದಘರಾಶಿ ಮುಂದಪ್ಪ ಶುಭಸೂಚಕಗ |
ಳೊರೆದಪವದೇಸು ಧನ್ಯನೊ ಭವಚ್ಚರಣಯುಗ ಸಂದರ್ಶನಂಗೈವರೆ ||
ಪರಿಪಾಕಮಾಯ್ತೆನ್ನ ನಿಯಮಾದಿಯೋಗಫಲ |
ಭರಿತಮಾದುದು ದೇವಯೆನುತ ವಂದಿಸಿ ಮಗುಳೆ |
ಪರಿಪರಿಯ ನುತಿಗಳಿಂ ಪೊಗಳೆ ಸಂತಸದಿಂದ ಸರಸಿಜಾಸನತನಯನು || (61)

ನೆಲದಿ ಬಾಳುವ ಮಹಾರಾಜಗೋತ್ರೋತ್ತಂಸ |
ನಲಘುಮತಿ ನೀನಲ್ತೆ ಭುವನತ್ರಯಂಗಳಿಗೆ |
ಕಲಿತಮಾಗಿಹ ಭಯಾವಹಕಾರ್ಯವಶವರ್ತಿಯಾಯಿತ್ತಾಗ ನಿನ್ನ ಪುಣ್ಯ ||
ಫಲವನಿನ್ನೇನೆಂಬೆನೆನುತಾ ಮುನೀಶನೆನೆ |
ಲೊಲಿದು ಮತ್ತಿಂತೆದೆನೆಲೆ ದೇವ ತವಚರಣ |
ಬಲುಹಿಂದಲಖಿಳೇಷ್ಟಮುಪ್ಪುದೇನತಿಶಯಮೆ ಮಂದಾರಕೈಗ್ಗಬ್ಬಿರೆ || (62)

ಎಂದನಂತರದಿ ಮದ್ವೃತ್ತಾಂತಮೆಲ್ಲಮಂ |
ಛಂದದಿಂ ಬಿನ್ನವಿಸೆ ಕೇಳಿ ಹರ್ಷಾನಂದ |
ದಿಂದಲಾ ಮುನಿ ನುಡಿದನಿಂದಪ್ಪ ಕಜ್ಜಮಂ ಯೋಗಬಲದಿಂ ಜಾನಿಸಿ |
ಇಂದಿರಾಪತಿ ಧರಣಿಯಿಂದುದಿಸಿ ನಿಜತನುಜೆ |
ಯೆಂದೆನಿಸಿಕೊಂಡಿರ್ಪಳೀ ಕನ್ನಿಕಾಮಣಿಯ |
ಬಂಧುರಸ್ನೇಹದಿಂ ಸಲಹುವುದು ಸಕಲಶುಭಮೊದಗುವುದು ನಿನಗೆ ಬಳಿಕ || (63)

ರವಿವಂಶಭವದೊಳ್ ರಮಾನಾಥ ದಯದಿ ಸಂ |
ಭವಿಸಿ ರಾಮಾಖ್ಯೆಯಿಂ ಸಲಹಿ ಕೌಶಿಕಮುಖವ |
ಸುವಿವೇಕಮುಳ್ಳಂಗನೆಯ ಮಾಳ್ಪ ಪಾಷಾಣರೂಪಗೌತಮನರಸಿಯ ||
ತವಕದಿಂ ಮಿಥಿಲೆಗೈತರುವನೀ ಕಾಮಿನಿಯ |
ನವಿರಳದ ಭಕ್ತಿಯಿಂದಾತಗರ್ಪಿಸಿ ಮಹೋ |
ತ್ಸವವ ನಿಟ್ಟಿಸಿ ಕೃತಾರ್ಥತೆವಡೆವುದೆನಲಾ ಮಹಾತ್ಮನೊಡನಿಂತೆಂದೆನು || (64)

ಜಗದೀಶನೇಂ ಕಾರಣದಿ ಜಗತಿಯೊಳ್ ಜನಿಸಿ |
ಸೊಗಸಿಂದ ಮಾನಷಾಕೃತಿವೆತ್ತು ಮನ್ನಗರಿ |
ಗೊಗುಮಿಗೆಯ ದಯದಿಂದಲೈತಪ್ಪನೆಂತರಿವೆನೆಂತೀವೆ ಸುತೆಯನವಗೆ ||
ಬಗೆಗೆ ಗೋಚರಮಪ್ಪ ತೆರದಿಂದಲರುಪೆನಲ್ |
ನಗುತಲಾ ನಾರದ ಭವಿಷ್ಯವಾರ್ತೆಯ ಪ್ರಿಯದಿ |
ಸೊಗಸಿಂದ ವಿಸ್ತರದಲೊರೆದನತಿಹಾರ್ದದಿಂದೆನಗೆ ಪರತತ್ವಮೆನಲು || (65)

ಭೂಸುರೋತ್ತಮವಿಶ್ರವಸುಮೌನಿಯಿಂದೊರ್ವ |
ಭಾಸುರತರಕ್ಷು ದಶಮೌಳಿ ಪುಟ್ಟಿರುವನವ |
ಬೇಸರಿಪ ಸುರಮುನೀಂದ್ರರ ಕುಲವ ಕಮಲಭವವರದೃಪ್ತನಾಗಿ ಭಯದಿ ||
ವಾಸವಾದಿಪ್ರಮುಖರೆಲ್ಲ ಕ್ಷೀರಾಬ್ಧಿಯೊಳ್ |
ವಾಸವಾರ್ಚಿತಚರಣನೆಡೆಗೈದಿ ಬಿನ್ನವಿಸ |
ಲೀ ಸುರೋತ್ತಮರ ದೈನ್ಯವ ನೋಡುತಭಯಮನ್ನಿತ್ತಂ ರಥಾಂಗಪಾಣಿ || (66)

ದಿನಮಣಿಯ ವಂಶಮಣಿ ಪಂಕ್ತಿರಥಕೃತಸವನ |
ಘನಪಲೋದಯ ಕೌಸಲಾಗರ್ಭಸಂಭೂತ |
ನೆನಿಸಿ ಸುರರಿಷ್ಟಾರ್ಥಮಿೂಯೆ ಕುಶಿಕಾತ್ಮಜನ ಸಪ್ತತಂತುವ ಸಲಹುತೆ ||
ವಿನಯದಿಂದಕ್ಷಪಾದನ ರಾಣಿಯಂ ಕಾಯ್ದು |
ಮನುಮುನಿಗಳೆಡೆಯಲೆಲರುಣಿವೆಡೆಯ ಚಾಪಮ |
ನ್ನನುವಿಂದ ಭಂಗಿಸುವನಾತ ಮೇಘಶ್ಯಾಮ ಶ್ರೀರಾಮನೆಂದರಿವುದು || (67)

ಎಂದೊರೆದು ಸುರಮೌನಿಯೈದಲಾ ಕುವರಿಯಂ |
ಇಂದಿರೆಯೆನುತ್ತರಿದು ಪೋಷಿಸುತಲತುಳಮುದ |
ದಿಂದ ರಘುವೀರನಂ ಕಾಣಲೋಸುಗ ಮನದೊಳಾಲೋಚಿಸುತ್ತನುದಿನಂ ||
ಇಂದುಭೂಷಣಶರಾಸನವನೆತ್ತಿದರಿಂಗೆ |
ನಂದನೆಯನೀವೆನೆಂಬೀ ಪರಿಯ ವಾರ್ತೆಯಂ |
ಬಂಧುರದಿ ಪರಪಿದೆಂ ನಿಖಿಲಭೂಭುಜರೆಲ್ಲ ದಿಟ್ಟಿಸಲಸಾಧ್ಯಮೆನಿಪ || (68)

ಆದರಿಂದ ನೆರೆದರಖಿಲಾವನೀಪಾಲಕರು |
ಸದಯರೈತಂದರಾಮ್ನಾಯವೇದೋತ್ತಮರು |
ವಿದಿತಮಾದುದು ಬಾಲಬಲ ಸಕಲರಾಜನ್ಯಸಂತತಿಯ ಚಾಪದಿಂದೆ ||
ಪದುಮಾಕ್ಷನಂ ಭವತ್ಕೃಪೆಯಿಂದ ನಿಟ್ಟಿಸುತ |
ಮುದಮಾಂತೆನಾತ್ಮೇಚ್ಛೆ ಪರಿಪೂರ್ಣಮಾ[1](ಯ್ತು) ತವ |
ಪದಪದ್ಮದರ್ಶನದೊಳಾಯ್ತುಖಿಳಮಾನಂದನಿಧಿ ಹಸ್ತಗತಮೆಂಬೊಲು || (69)

---

1 ಪರಿಪೂರ್ಣಮಾಯಿತು.

ಜನನಾಥನೀ ಪರಿಯ ಬಿನ್ನವಿಸೆ ಕೇಳಿ ಮಹ |
ಮುನಿನಾಥ ಜಾತಹರ್ಷಾನಂದದಿಂದ ರಘು |
ಜನನಾಥನಿಂಗಣುಗಿಯನ್ನಿತ್ತು ಸಂಭ್ರಮದಿ ವೈವಾಹಗೈವುದೆಂದು ||
ದಿನನಾಥಶಶಿಬೃಹದ್ಭಾನುಲೋಚನನೆಡೆಯ |
ಲನುವಿನ್ನಿರೂಪಿಸಲು ಭವದೀಯ ಚಿತ್ತಕೇ |
ನನುಮತವು ತನ್ಮತಮದೆಂದು ಮಿಥಿಲಾನಾಥ ವಿಜ್ಞಾಪನಂಗೈಯಲು || (70)

ಕುಶಿಕಸುತ ವಿನಯದಿಂದೊರೆದ ಜನಕಾಖ್ಯನೊಳು |
ಪಶುಪತಿಯ ಸಮ್ಮುಖದೊಳುದ್ವಾಹಮನ್ನೆಸಗು |
ದಶರಥಮಹೀಪಾಲಮೊದಲಾದ ಬಂಧುಗಳ ಸತ್ವರದಿ ಪ್ರೀತಿಯಿಂದ ||
ವಿಶದಲೇಖನಮುಖದಿ ಬರಿಸು ಸಂಭಾರ ಸಂ |
ವಶಮಪ್ಪೊಲಾಜ್ಞಾಪಿಸುವುದಮಾತ್ಯರುಗಳಿಗೆ |
ನಿಸಿ ಬಪ್ಪುದೈದು ಸಂಧ್ಯೋಪಾಸನಕ್ರಮಕೆ ಕಾಲಮನ್ನತಿಗಳೆಯದೆ || (71)

ಎನುತ ವಿಶ್ವಾಮಿತ್ರನೊರೆಯೆ ನಿಮಿಕುಲದರಸ |
ಸನುಮತಿಸಿ ಸಾಷ್ಟಾಂಗವೆರಗಿ ಬೀಳ್ಕೊಂಡು ಮ-|
ತ್ತನುವಿಂದ ನಿಜಸದನಕೈದಿದಂ ಮಂತ್ರಿಗಣದೊಡವೆರೆದು ಸಂತೋಷದಿ||
ಘನನಿಭಶ್ಯಾಮ ಶ್ರೀ**ರಾಮಪುರಿ**ವಲ್ಲಭಂ |
ತನಯಳಿಗೆ ವರನಪ್ಪನೆಂಬುತ್ಸವದಿ ಲೋಕ |
ಸನುಮತದಿ ನಿಧಿಯ ವಶಗೈದವಂ ಆನಂದಗೊಳುತುಬ್ಬುವಂತೆ ಮುದದಿ || (72)

ಸಂಧಿ 19 ಕ್ಕಂ ಪದಂಗಳ್ 1159

---

# ಇಪ್ಪತ್ತನೆಯ ಸಂಧಿ

ಸೂಚನೆ || ಅಮರೇಂದ್ರಸಖದಶಸ್ಯಂದನಮಹೀಪತಿಯ |
ಮಮತೆಯಿಂ ಕರೆಸಿ ತತ್ಸುತಗೆ ನಿಜನಂದನೆಯ | [ಮತಿಯೊಳು ||
ನಿಮಿಕಲೋತ್ತಂಸಕಂ ನಿಶ್ಚಯಂಗೈದನಜಸುತಮುಖ್ಯರನು

ಲಲಿತಾಬ್ಜನೇತ್ರೆ ಕೇಳ್ ಸೀರಧ್ವಜಂ ತನ್ನ |
ನಿಲಯದೊಳಗಿರಲಿತ್ತ ಹರಿದಶ್ವನುತ್ತರದ |
ನಿಲಯಸ್ಥರಿಗೆ ಶುಭೋದಯವಾರ್ತೆಯಂ ಪೇಳಿ ಬಹೆನೆಂದು ಪಶ್ಚಿಮದಿಶಾ ||
ಜಲಧಿಯಂ ಸಾರಿ ಕನಕಾಚಲವ ನೆರೆಬಳಸಿ |
ನಲವಿಂದ ಪೂರ್ವಶಿಖರವನೇರಲಾಗ ದ್ವಿಜ |
ಕಲಕಲಂ ಪೆರ್ಚಲೆಚ್ಚತ್ತು ಮಿಥಿಲಾನಾಥ ರಚಿಸಿ ಸಂಧ್ಯಾಕೃತ್ಯಮಂ || (1)

ದೂತರಂ ಕರೆದು ಶುಭಲೇಖನವ ಕೈಗಿತ್ತು ।
ಪ್ರೀತಿಯಿಂದಟ್ಟಲುಪಜೀವಿಗಳು ಪಥದೊಳು ವಿ ।
ನೀತಿಯಿಂದಾ ರಾತ್ರಿತ್ರಯಗಳಂ ಕಳೆದು ಸತ್ವರದಿಂದಯೋಧ್ಯಾಭಿಧಾ ॥
ಖ್ಯಾತನಗರೀದ್ವಾರಕೈತಂದು ನೃಪತಿಗೀ ।
ಮಾತನೆಚ್ಚರಿಸೆಂದು ದ್ವಾರಸ್ಥರಿಂಗರುಪ ।
ಲಾತುರದೊಳೈದಿ ಜನಪತಿಯೆಡೆಗೆ ಭಯದಿಂದ ಬಿನ್ನವಿಸಲೀ ವಾರ್ತೆಯಂ ॥ (2)

ಸೀರಕೇತನನ ಚರರೈತಂದರೆಂಬುದಂ ।
ದ್ವಾರಪಾಲರ್ ಪೇಳಲವರಿಗಪ್ಪಣೆಯಿತ್ತು ।
ಸಾರಹೃದಯಂ ಕಳುಪೆ ಲಕ್ಷಣದಿ ಪಾರ್ಶ್ವಾನುಚರರೈದಿ ಪಂಕ್ತಿರಥನ ॥
ಚಾರುತರಮಣಿಖಚಿತದರಮನೆಯ ಮಧ್ಯದ ಹ ।
ಜಾರದೊಳ್ ಸಿಂಹಪೀಠಾಗ್ರದೊಳ್ ಮಂಡಿಸಿಹ ।
ಧೀರ ರಘುಕುಲಚಕ್ರವರ್ತಿಯಂ ನಿಟ್ಟಿಸುತಲೆರಗಿದರು ಭಯಭಕ್ತಿಯಿಂ ॥ (3)

ಧವನಿತ್ತ ಲೇಖನವ ಕುವಲಯಾಧಿಪಗಿತ್ತು ।
ನವನವಕವಾಣಿಯಿಂ ನುತಿಗೈದು ಕೈಮುಗಿದು ।
ವಿವರಿಸಿದರಾ ಚರರ್ ಬಂದ ವೃತ್ತಾಂತಮಂ ಹರ್ಷಾಬ್ಧಿ ಪೆರ್ಚುವಂತೆ ॥
ರವಿವಂಶಜೋತ್ತಮನೆ ಮಿಥಿಲೇಶ ಭವದೀಯ ।
ಶಿವಕರವನತಿಪ್ರೇಮದಿಂ ಕೇಳ್ದು ಪತ್ರಿಕಾ ।
ವಿವರಕಂ ಬೇಗ ಪ್ರತ್ಯುತ್ತರವ ತಹುದೆಂದು ನೇಮಿಸಿದರೈಸೆ ಜೀಯ ॥ (4)

ಎಂದೊರೆದು ದೂತರರುಹಲ್ಕೆ ದಶರಥರಾಜ ।
ಮಂದಹಾಸದಿ ಸುಮಂತನ ಕರಕೆ ಲೇಖನವ ।
ನಂದು ಕೊಡಲಾತ ನಿಟ್ಟಿಸಿ ಮುದ್ರೆಯನ್ನೊರಸಿ ಮುಗುಳಪ್ಪಣೆಯ ಕೇಳುತ ॥
ಛಂದದಷ್ಟಾಪದಸುರೇಖಾವಿಲಾಸದಿಂ ।
ದಿಂದುನಿಭತೇಜೋವಿರಾಜಿತದಿ ಶುಭಘುಸೃಣ ।
ದಿಂದಲಂಕೃತಮಾದ ಪತ್ರಿಕಾರಚನೆಯಂ ನೋಡಿ ವಾಚಿಸಿದ ಬಳಿಕ ॥ (5)

ಶ್ರೀಮತ್ಸಮಸ್ತಸದ್ಗುಣರತ್ನ ರತ್ನಖನಿ ।
ತಾಮರಸಮಿತ್ರಮೈತ್ರೀಕೃತಪರಾಕ್ರಮಸು ।
ನಾಮ ಸುತ್ರಾಮಾರಿಖಂಡನಾಪ್ಸರನಿಚಯಸ್ತುತಿಮುಖರಿತಾಶಾಂತರ ॥
ಸೋಮಸೋಮೋಡು ಕರ್ಪೂರಹಾರಪಟೀರ ।
ಸಾಮಜತುಷಾರಡಿಂಡೀರಹಾರಾದಿಗಳ ।
ಸ್ತೋಮ ಸತ್ಕೀರ್ತಿಧವಳೀಕೃತಜಗತ್ರಿತಯನಾರ್ತಜನಪಾರಿಜಾತ ॥ (6)

ಸಾಮಂತಸೀಮಂತಿನೀಚಿಕುರನಿಚಯಮಂ ।
ನಾಮುಸುರಭಿಳಿತಕರನಖರೋಪಲಾಲಿತೋ ।
ದ್ದಾಮ ಪದಯುಗರಾಜರಾಜಮುಕುಟೀತಟವಿರಾಜಿತಸುಮೌಕ್ತಿಕಾಭ ॥
ಭೀಮಬಲ ದಶರಥಮಹೀಪಾಲಚಂದ್ರಂಗೆ ।
ಪ್ರೇಮದಿಂ ಜನಕಾಖ್ಯ ನೇಹಪೂರ್ವಕದಾಭಿ ।
ರಾಮುಸಂಪ್ರೀತಿಯಿಂ ರಚಿಸಿ ಕಳುಪಿದ ಪತ್ರ ಭವದೀಯಕರುಣದಿಂದೆ ॥ (7)

ತರುಣರನುಜಾತರ್ಪುರೋಹಿತರಮಾತ್ಯರಂ ।
ಪರಿಜನಂಸಹಿತಾನು ಕುಶಲದಿಂದಿಹೆ ನಿಮ್ಮ ।
ಪುರನಿವಾಸಿಗಳೆನಿಸುವಿಷ್ಟಬಂಧುಪ್ರಕರಮುಖ್ಯಸುಕ್ಷೇಮಗಳಿಗೆ ॥
ಬರೆಸಿ ಕಳುಪುವುದನಂತರ ಮತ್ತನೂಜಾತೆ ।
ಸಿರಿನಿಭಳ್ ವೀರ್ಯಶುಲ್ಕಳೆನುತ್ತಲಾಂ ತಿಳಿದು ।
ಹರಶರಾಸನವನೆತ್ತಿದರಿಂಗೆ ಪರಿಣಯಂಗೈದೀವೆನೆಂದು ಮುದದಿ ॥ (8)

ಸಕಲಮುನಿಜನಮುತದಿ ನಿಶ್ಚಯಂಗೈಯಲ್ಕೆ ।
ಸಕಲದೇಶಾಧಿಪರ್ ಕೌತುಕವ ನಿಟ್ಟಿಸುವ ।
ಯುಕುತಿಯಿಂದೈತಂದರಿತ್ತ ನಿಮ್ಮಯ ಕುವರ ರಾಮುಭದ್ರಂಗೆ ಮೌನಿ ॥
ಅಕಲಂಕಗುಣಭರಿತತರುಣರಿರ್ವರು ಮುನಿ-।
ಪ್ರಕರದೊಡನೈತಂದು ಮನ್ನಗರದೊಳ್ ನಿಂದ ।
ರಕುಟಿಲಾತ್ಮರು ನೆರೆದ ಭೂಭುಜರ ದೆಸೆಯಿಂದ ಕೋದಂಡ ಚಲಿಸದಿರಲು ॥ (9)

ಆದಿತೇಯರ್ದಿತೀಜನ್ಮರುಭಯರು ತುಡುಕ ।
ಲಾದರದಿ ತೃಣಕೆ ಗಣಿಸದೆ ಪೋಗಲತಿಖಿನ್ನ ।
ಹಾದಿಯಂ ಸಾರ್ದರವರಿತ್ತ ನಿಮ್ಮಯ ಕುವರರಾಮುಚಂದ್ರಂಗೆ ಮೌನಿ ॥
ಬೋಧಿಸಿದನಾ ಕ್ಷಣದೊಳಾ ಚಾಪಮಂ ಕುವರ ।
ಭೇದಿಸಿದ ಲೀಲೆಯಿಂ ನೆರೆದ ಮೌನಿಸಮಾಜ ।
ಭೂಧರಶರಾಸನಂ ನೋಡಿ ಹರುಷಾಂಬುಧಿಯೊಳೋಲಾಡಿ ಮತ್ತೆ ಪ್ರಿಯದಿ॥ (10)

ಅದರಿಂದ ಮತ್ಸುತೆಯ ಭವದೀಯ ತನುಜಗಂ ।
ಮುದದಿಂದ ವೈವಾಹಗೈದೀವೆ ಹರನೆಡೆಯ ।
ಲಿದು ಸಿದ್ಧವೀ ಶುಭೋದಯಪ್ರಸ್ತಕಂ ಸಕಲಜನವೆರಸಿ ಸತ್ವರದಲಿ ॥
ಬುಧಶಿರೋಮಣಿವಸಿಷ್ಠಾದಿಮುನಿಸಹಿತಲುಂ ।
ಸದನಕೈತಹುದೆಂಬಭಿಪ್ರಾಯಲಿಖಿತಮಂ ।
ಚದುರಿಂ ಸುಮಂತ ವಾಚಿಸೆ ನಿಲಿಂಪಾಧಿಪನ ಸಖನಮಿತಪ್ರೀತಿಯಿಂದ ॥ (11)

ಲೇಖನಾಭಿಪ್ರಾಯಮಂ ಕೇಳ್ದು ನೃಪವರ್ಯ |
ಲೋಕಪದಿನಾಲ್ಕು ಕೈವಶವಾದ ತೆರದೊಳಾ |
ಲೋಕನಂಗೈದು ಹರುಷಾಬ್ಧಿಯಂ ಪೊರಸೂಸಲಾದುದಾನಂದಭರವು ||
ಲೋಕಮಿತ್ರನ ಕಾಣದರಸುವೆಣೆವಕ್ಕಿಗಳ |
ನೀಕಕ್ಕಖಂಡಮಾರ್ತಾಂಡಮಂಡಲ ತಮೋ-|
ತ್ಸೇಕಗೈವುತಖಂಡತೇಜದೊಳ್ಬೆಳಗಲ್ಕೆ ಕಂಡಂತದೇವೇಳ್ವೆನು || (12)

ಹರುಷನೀರಧಿಯೊಳಾಳಿದ ಮನೋವೃತ್ತಿಯಂ |
ಮರಳಿಸುತಲುಭಯಪಾರ್ಶ್ವಂಗಳಂ ನಿಟ್ಟಿಸುತ |
ಗುರುವಾಮದೇವರೊಡನೆಂದ ನೃಪಪುಂಗವಂ ನಿಮ್ಮಯ ಕಟಾಕ್ಷದಿಂದೆ ||
ಸಿರಿಕರದ ಕೀರ್ತಿಯಂ ಪಡೆದು ಶ್ರೀರಾಮು ತಾಂ |
ಮುರಿದು ಹರಚಾಪಮಂ ಮುನಿಕುಶಿಕಸುತಮತದಿ |
ಪರಮರ್ಷಿನಿಭಜನಕನಗರದೊಳಗಿಹ ವಾರ್ತೆ ಪಸರಿಸಲ್ಹೊತಮುಖದಿ || (13)

ಪೋದ ಜೀವಂ ಮಗುಳೆ ಜಠರಮಂ ಪೊಗಲು ಸ-|
ಮ್ಮೋದಮಾಗುವ ತೆರದಲಭಿನವ ಸುವೃತ್ತಾಂತ |
ಶೋಧಿಸಿತು ಮಚ್ಚಿತ್ತತಾಪಮಂ ಭವದೀಯಕೃಪೆಯಿಂದ ಸುತಲಾಭವು ||
ಆದುದಿದು ಭಗವತ್ಪ್ರಸಾದಮಲ್ಲದೆ ಮಗುಳೆ |
ಮೇದಿನಿಯೊ[1](ಳೀ ಸು)ವತ್ಸರ ಕುಶಲಮಂ ಕೇಳ್ದ |
ಹಾದಿ ಕೌಶಿಕತಪೋಧನನ ದೆಸೆಯಿಂದಾಯ್ತು ಮತ್ಪುಣ್ಯಪರಿಪಾಕದಿಂ || (14)

ಬಾಲಕರ ಶೌರ್ಯಮಂ ಕಂಡು ಸೀರಧ್ವಜಂ |
ಲೀಲೆಯಿಂದುದ್ವಾಹಗೈಯಲನುಮತಿಸಲೀ |
ವಾಲೆಯಂ ಕುಳುಪಿರ್ಪನಿದು ಚಿತ್ತಕೈತಂದಡಾಂ ಬರ್ಪೆ ಬೆಂಬಳಿಯಲಿ ||
ಆಲಸ್ಯಮಂ ಮಾಡಸಲ್ಲಮೆಂದೆನುತಂ ನೃ |
ಪಾಲಚೂಡಾರತ್ನ ಬಿನ್ನವಿಸೆ ಭೂಸುರರ |
ಜಾಲ ಸಮ್ಮತಿಗೊಂಡಿತತಿಹರ್ಷದಿಂದಮಾತ್ಯಾವಳಿಯೊಡಂಬಟ್ಟುದು || (15)

ಅರಸನಾಡಿದ ನುಡಿಯ ಕೇಳಿ ಮೈತ್ರಾವರುಣಿ |
ಯೊರೆದನಾತಗೆ ಮಗುಳೆ ಸಂತೋಷಮಾಯ್ತು ಶುಭ |
ಕರವ ನಿಟ್ಟಿಸಲಾತ್ಮಬಂಧುಜನರೊಡವೆರದು ತೆರೆಳವೇಳ್ಕೆಂದುಸುರುತ ||
ಹೊರಗೆ ಸಂಧ್ಯಾಕೃತ್ಯಕಂ ಪೋಗೆ ಬಳಿಕಿತ್ತ |
ತರಣಿವಂಶೋದ್ಭವನಮಾತ್ಯರುಗಳಂ ಕರೆಸಿ |
ತುರಗರಥಗಜ ಪತ್ತಿಕೋಶಮುಂತಾದುವಂ ಸಜ್ಜೀಕರಿಸಿ ಬೇಗದಿ || (16)

---

1 ಮೇದಿನಿಯೊಳಾಧುವತ್ಸರ.

ಧನಕನಕವಸ್ತುವಾಹನಮಿತ್ರಬಾಂಧವರ್ |
ಮುನಿಮುಖ್ಯರಿಷ್ಟರುಗಳೆಲ್ಲ ಸಿಂಗರವಾಗಿ |
ಇನನುದಿಸುವನಿತರೊಳ್ ಪ್ರಸ್ಥಾನಮಂ ಮಾಳ್ಪುದೆಂದು ನೇಮಿಸಿ ಜನಪತಿ ||
ಮನೆಗೆ ನಡೆತಂದು ವೃತ್ತಾಂತಮಂ ನಿಜಸತೀ |
ಜನರೊಡನೆ ಪೇಳುತಾ ಯಾಮಿನಿಯ ಹರುಷದಿಂ |
ದಿನವಂಶಕೇತು ತನಯನ ಕಾಣುವುಜ್ಜುಗದೊಳಿರ್ದನತಿಸಂತೋಷದಿಂ || (17)

ರಾಜೀವಜೀವನೌಷಧ ಚಕ್ರವಾಕದ ಸ |
ಮಾಜಪ್ರಾಣಾಧಾರವಖಿಲತಾಪಸವರ್ಯ |
ರಾಜೀಶುಭೋದಯದ ಬೀಜ ನೈಶಾಟವೀಬಾಡಬ ದಿತೀಜನ್ಮರ ||
ತೇಜೋಪಸೀತಾಘಶತಧಾರನುಡುತತಿಯ |
ನೈಜಾಪಹರನಭೋಮಣಿ ನಿಲಿಂಪಾಧಿಪನ |
ರಾಜಧಾನಿಯ ಸೌಧಮುಕುಟದೊಳ್ ಬೆಳಗಿದಂ ಲೋಕಕಚ್ಚರಿಗೊಂಬೊಲು ||

ತರಣಿಯುದಿಸಲ್ ಸುರಾಧಿಪಮಿತ್ರ ಮಿತ್ರಕುಲ |
ದರಸ ಹರಿಯನ್ನೆನೆವುತೆಚ್ಚತ್ತು ಬೇಗದಿಂ |
ಕರಚರಣಸಮ್ಮಾರ್ಜನಂಗೈದಲಂಕರಿಸಿ ವರಭೂಷಣಾಂಬರಗಳಿಂ ||
ಭರದೊಳೋಲಗಶಾಲೆಗೈತಂದು ಮಂತ್ರಿಜನ |
ಪರಿಜನರ್ ಪುರಜನರ್ ಸಹಿತಲಾಲೋಚಿಸುತ ||
ಗುರುವಸಿಷ್ಠಾದಿಗಳ ಮತದಿಂದ ವೈವಾಹಗಮನೋತ್ಸುಕದೊಳಾಕ್ಷಣಂ || (19)

ಪೊಂದೇರನಡರಲಭಿವಂದಿಸುವ ನೃಪತಿಗಳ |
ಸಂದೋಹದಿಂ ಸುಭಾಷಿತದಿಂದ ಸತ್ಕರಿಸಿ |
ಮಂದಿಮಾಗಧರು ಉಗ್ಗಡಿಪುದಾಕರ್ಣಿಸುತ ಮನದಿ ಸಂತಸದಾಳುತ ||
ಬಂಧುರದ ಶೌರ್ಯಸುಭಟಾವಳಿಗಜಾಶ್ವಗಳ |
ವೃಂದಾಧಿಪರನೆಲ್ಲ ಮನ್ನಿಸುತ ಭುವಿಗೆ ಸಂ |
ಕ್ರಂದನೋಪಮದಶಸ್ಯಂದನಂ ಪೊರಮಟ್ಟನಾ ಪುರವನುಳಿದು ಮುದದಿ || (20)

ಚಾಮರಧ್ವಜಛತ್ರಸೀಗುರಿಯ ಥಟ್ಟುಗಳ್ |
ವ್ಯೋಮಮಾಚ್ಛಾದಿಸಲ್ ನಿಬಿರೀಸದುತ್ತಮ-|
ಸ್ತೋಮಮಂಗಳಂ(?) ಭೂಭುಜೋತ್ತಮರ ಮಕುಟಮಣಿರೋಚಿಗಳ್ ಪರಿವೃತಿರಲು ||
ಸಾಮಜಪದೋತ್ಥಿತರಜೋಭರಂ ಮುಂಬರಿದು |
ವ್ಯೋಮಗಂಗಾಸೇತುಕಲ್ಪಮೆಂದೆನಿಸಿ ಸು-|
ತ್ರಾಮಾದಿಗಳ್ಗಿವಾಹೋತ್ಸವಕ್ಕೈತಪ್ಪ ಪಥವಾದುದೇವೇಳ್ಗೆನು || (21)

ಪೊಡವಿ ಬೆಸಲಾದಂತೆ ಪಡೆನಡೆದುದತಿಶಯದೊ |
ಳಡಿಗಡಿಗೆ ವೀರವಾದಂಗಳಾಡುವ ಭಟರ |
ಖಡುಗನಾದಂಗಳಿಂದಶ್ವಹೇಷಂಗಳಿಂ ಗಜದ ಘಂಟಾರವಗಳಿಂ ‖
ಧಡಧಢಿಸಿ ಬಹ ಶತಾಂಗಗಳ ಕೋಳಾಹಳದಿ |
ಗುಡುಗುತಿಹ ಭಟದುಂದುಭೀರವದಲೆಣ್ದೆಸೆಗ |
ಳೊಡನೆ ಶಬ್ದಬ್ರಹ್ಮಮಯವಾಗಿ ಕಂಗೊಳಿಸಿತುಗ್ಗಡಿಸಲೆಂತಪ್ಪುದೊ ‖ (22)

ಸಿಂಗರದ ಸೇನಾಸಮುದ್ರ ನಡೆದುದು ಪಯಣ |
ಸಂಗತಿಯಲಡಿಗಡಿಗೆ ಸಾಮಚತುರಂಗಗಳ |
ಪಂಗಡಂ ಮುಂಬರಿಯೆ ತೂಣದಿಂ ಮಿಥಿಲೇಶನಾಳ್ವ ನಗರೋಪವನಕೆ ‖
ಮುಂಗಡೆಯಲೈದಿ ಚರರರುಪಲೀ ವಾರ್ತೆಯ ಬೆ |
ಡಂಗನಾಲಿಸಿ ಜನಕನೈತಂದು ಪ್ರಿಯದಿ ನೃಪ |
ಪುಂಗವನನಿದಿರ್ಗೊಂಡು ಸಕಲವೈಭವದಿಂದಲುಪಚರಿಸುತಿಂತೆಂದನು ‖ (23)

ಕ್ಷಮೆಯರಸ ಭವದೀಯದರ್ಶನದಲಂಬಕಗ |
ಳಮಿತಜಾಡ್ಯಾಪಹೃತವಾಯ್ತು ಬಹುತರಕಾಲ |
ಕಮರೇಂದ್ರಸಖ ನಿನ್ನ ಕಾಣ್ಬಡಸ್ಮದ್ಭಾಗ್ಯ ಪೆರ್ಚಿದುದು ದೈವಗತಿಯು ‖
ಸಮನಿಸಿತ್ತೆನುತ ಪ್ರೇಮಾಲಿಂಗನಂ ಗೈದು |
ಕ್ರಮದಲಪಚಿತಿಯೆಸಗಿ ಮುನಿವಸಿಷ್ಠಾದಿಗಳ |
ಮನುತೆಯಿಂ ಕಂಡು ಕಾಣಿಕೆಯಿತ್ತು ಪೊಡಮಟ್ಟು ಕುಳ್ಳಿರ್ದನವನೀಶನು ‖ (24)

ಭುಜಬಲಪರಾಕ್ರಮದಿ ನಿಖಿಳರಾಜನ್ಯಕುಲ |
ವಿಜಯರೆನಿಸುವ ಸುತರ ವದನಮಿದು ದರ್ಶನವ |
ಭಜಿಸದೆ ಭವತ್ಪೂರ್ವಪುಣ್ಯಪರಿಪಾಕದಿಂದಾದುದತಿಶಯ ಮಹೀಶ ‖
ಯಜನಾಂತದಲಿ ಮದೀಯಾತ್ಮಜೆಯು ನಿನ್ನಣುಗ |
ಯುಜಳೆನಿಪಳೀ ಧರಾನಿರ್ಜರರ ಮತದಿ ಪಂ |
ಕಜಗೋತ್ರಭವರಿಂದ ಬಾಂಧವ್ಯಸಂಘಟನೆಯಾಯ್ತು ನಮ್ಮಯ ಭಾಗ್ಯದಿ ‖ (25)

ಬೆಳಗಲಿನ ಮೂಡುದಿಕ್ಕಿನಲತುಲವೈಭವದಿ |
ಬೆಳೆದಪುದು ವೈವಾಹಮೆಂದು ಮಿಥಿಲೇಶ ಶುಭ |
ಪೊಳಪಾಂತವಾಣಿಯನ್ನುಸುರೆ ದಶರಥರಾಜನಿಂತೆಂದ ಮೋದದಿಂದ ‖
ಜಲಧಿಮೇಖಲೆಯೊಳುಂ ದಾನ ದಾತೃವಿನಿಚ್ಛೆ |
ಯೊಳಗಿರ್ಪುದೈ ಮಹಾಮಹಿಮ ನಿಜಚಿತ್ತದೊಳ್ |
ಬೆಳಗಿದಂದದಿ ಗೈವುದಾನಿರ್ಪೆ ತತ್ಕಾಲಪಾತ್ರನೆಂದೆನಿಸಿ ನೃಪತಿ ‖ (26)

ಮಧುರತರವಾಗ್ವಿಲಾಸದ ನಮ್ರಭಾವದಿಂ |
ವಿದಿತಬಲದಶರಥಂ ಪೇಳಲ್ಕೆ ಜನಕ ಸಂ |
ಮುದಕುತೂಹಲಪೂರದೊಳಗಾಡಿ ಪೊಗಳಿ ನಾನಾವಿಧಗಳಿಂದುಸುರಲು ||
ಸದನಕೊಡಗೊಂಡೈದಿ ಸಕಲೋಪಚಾರದಿಂ |
ಸದಯವೆತ್ತುಪಚರಿಸಿ ಪ್ರಿಯಭಾಷಣಂಗಳಿಂ |
ಸದನ ಪಾವನನಾದುದೆಂದು ಸಂತೋಷದಿಂದುಸುರಿದಂ ಸತ್ಯಕೇತು || (27)

ಅನಿತರೊಳು ರಾಮಲಕ್ಷ್ಮಣರನೊಡಗೊಂಡೈದ |
ಲನಿಮಿಷೋಪಮುಗಾಧಿನಂದನಂ ಕಂಡಾಗ |
ಜನಪತಿಗಳೈತಂದು ವಂದಿಸಿ ಮೃದೂಕ್ತಿಯಿಂ ನುತಿಸಿ ಕರೆದೊಯ್ದು ಮುದದಿ ||
ಕನಕಪೀಠಾಗ್ರದೊಳ್ ಕುಳ್ಳಿರಿಸೆ ಪಿತನ ಪದ |
ವನಜಮಂ ನೋಡಿ ಹರುಷದೊಳಿರಗೆ ರಾಮನಂ |
ಮನದಣಿಯಲಪ್ಪಿ ಸೌಮಿತ್ರಿಯಂ ಮುದ್ದಿಸುತ ಮುನಿತಿಲಕನಂ ಪೊಗಳುತ || (28)

ತೊಡೆಯ ಮೇಲಿಟ್ಟು ಗಲ್ಲವನಲುಗಿ ಮಮತೆಯಿಂ |
ದೊಡನೆ ಮಸ್ತಕವನಾಘ್ರಾಣಿಸಿ ಮಹೀಪಾಲ |
ಕಡುಪ್ರೇಮದಿಂ ಚಿತ್ರಭಾಷಾನುಲಾಪದಿಂದಾನಂದಮಯನಾಗುತ ||
ಸಡಗರದೊಳಾತ್ಮಭವರೊಡನೆ ಸಂಭ್ರಮದಿಂದ |
ಮೃಡನಿಭವಸಿಷ್ಠಾದಿಮುನಿಗಳುಪಸಂಗತಿಯ |
ಬಿಡಗಿನಿಂದಾ ಯಾಮಿನಿಯನು ಕಡೆಗೊಳಿಸಿದಂ ನಿಮಿಷಾರ್ಧಮೆಂಬಂದದಿ || (29)

ಪೂತ[1](ಐರಾವತದ) ಪೊಳಲೆನಿಪ ದಿಕ್ಕಿನೊಳ್ |
ಜಾತಾನುರಾಗದಿಂದುದಿಸೆ ಭಾಸ್ಕರನಬ್ಜ |
ಜಾತನಿಭಋಷಿಗಣದೊಳೊಡವೆರೆದು ಸಮುಚಿತಸುಸಂಧ್ಯಾದಿಗಳನು ರಚಿಸಿ ||
ಖ್ಯಾತಬಲಜನಕನುಂ ಪ್ರೀತಿಯಿಂದಲಿ ನುಡಿದ |
ನಾತಂಕಮಿಲ್ಲದೆ ಪುರೋಧಸಶತಾನಂದ |
ಜಾತಾಕ್ಷಪಾದನೊಡನಿಂತೆಂದ ಮುಂತಪ್ಪ ಕಜ್ಜಮಂ ಮಮತೆಯಿಂದ || (30)

ಪರಮಪಾವನವಿಕ್ಷುಮತಿಯ ತೀರದೊಳಿಸೆವು |
ದುರುತರದ ಪುಣ್ಯಸಂಕಾಶಸಾಂಕಾಶ್ಯಪುರ |
ವರದೊಳಿಹ ಮತ್ಕನೀಯಸನಾ ಕುಶಧ್ವಜನ ಕರೆಸವೇಳ್ಕೀ ಸಮಯದಿ ||
ಪರಿಪರಿಯ ವೈಭವಗಳಂ ನೋಡಿ ವೈವಾಹ |
ಸಿರಿಯನನುಭವಿಸಿ ಕ್ರತುಸಂರಕ್ಷಣಂಗೈವ |
ಡರಸನಾತನೆ ಧರ್ಮಯುತ ಬಿಡೌಜೋಪಮಸುವಿಕ್ರಮಂ ಪ್ರಕ್ರಮದೊಳು ||

---

1 ಪೂತಕೈತಾಯಿಗಂ (?)

ಬಂಧರಸ್ನೇಹದಿಂದೊರೆಯುಲು ಶತಾನಂದ |
ರಂದು ಚರರಿಂಗರುಪಲೀ ಪರಿಯಲಾ ಭಟರ್ |
ಸಿಂಧುಭವಗಾಂಧರ್ವಗಳನಡರಿ ವೇಗದಿಂದೈತಂದು ಸಾಂಕಾಶ್ಯಕೆ ||
ಛಂದದಿಂದೆರಗುತ ಕುಶಧ್ವಜಗೆ ಜನಕ ಪೇ |
ಳ್ದಂದಮಂ ವಿಸ್ತಾರವಾಗಿ ಬಿನ್ನಪಗೈಯ |
ಲಂದು ನಿಜಜನಸಹಿತಲೈತಂದನಾ ನೃಪಂ ವೀರದಗ್ರಜನಾಜ್ಞೆಯಂ || (32)

ಪರ್ದುದೇರನ ನೇಮದಿಂದ ನೈಗಣ್ಣವಂ |
ಪದ್ದಿನಂತೈತಂದು ಕಾಣ್ಬಂತೆ ಜನಕನಂ |
ಪೊದ್ದಿ ವಂದಿಸಿ ಕುಶಧ್ವಜ ಶತಾನಂದಂಗೆ ನಮಿಸಿ ಶುಭಕರಪೀಠದ ||
ಗದ್ದುಗೆಯನಡರೆ ಮುಂತಣ ಕಾರ್ಯಸಾರಮಂ |
ತಿದ್ದತಾಲೋಚಿಸುತಲನುಜಾತನತಿಮಧುರ |
ಮುದ್ದುಭಾರತಿಯಿಂ ಸುಧಾಮುಮಂತ್ರಿಶ್ರೇಷ್ಠ(ನಂ) ಕರೆದು ಪೇಳ್ದನೊಲಿದು ||

ಪೇಳಿ ಕರೆತಹುದೈ ರಘೂತ್ತಮನನಾತ್ಮಜನ |
ವೇಗದಿಂ ಸುತಬಾಂಧವಾದಿಋಷಿಗಳನೆನೆ |
ಲ್ಲಾಗ ಮಂತ್ರಿವರೇಣ್ಯನೈತಂದು ದಶರಥಂಗಭಿನಮಿಸಿ ನೃಪಕುಲೇಶ ||
ರಾಗವೆತ್ತಾಲಿಪುದು ಮಿಥಿಲೇಶ ಬಂಧುಜನ |
ಪೂಗಪೌರೋಹಿತಂ ಸಹಿತದರ್ಶನಗೈವ |
ಡೀಗಲೆನ್ನಂ ಕಳುಪಿದರು ಕರೆಯಲೆಂದೊರೆದಡಾ ಮಹೀಪತಿ ಹರ್ಷದಿ || (34)

ಸುತಪುರೋಹಿತಬಂಧುವರ್ಗಸಹ ಬೇಗದಿಂ |
ಕ್ಷಿತಿಯರಸಜನಕನಿಪ್ಪೆಡೆಗೈದಿ ಕುಳ್ಳಿರ್ದು |
ಮತಿವಂತಪಂಕ್ತಿರಥ ನಿಮಿಕುಲೋತ್ಪನ್ನನೊಡನಿಂತೆಂದ ರಘುವಂಶದ ||
ಅತಿಶಯಕೆ ದೇವತೆ ವಸಿಷ್ಠಭಗವನ್ಮುನಿ |
ಯತಿನಿವಹಗಾಧಿಜರನುಜ್ಞೆಯಿಂ ವಂಶಸಂ |
ಗತಿಯ ವಿಸ್ತರಿಪನೆಂದೊರೆಯೆ ಮೈತ್ರಾವರುಣಿ ಜನಕನೊಡನಿಂತೆಂದನು || (35)

ಹರಿಯನಾಭಿಯೊಳುದಿಸಿದಂ ಬೊಮ್ಮನಾತನಿಗೆ |
ತರುಣಂ ಮರೀಚಿ ಕಾಶ್ಯಪನಾತನಾತ್ಮಜಂ |
ಖರಕಿರಣ ಸುತನಾದನವಗೆ ಮನು ಮನುವಿನಿಂದಿಕ್ಷ್ವಾಕು ಕುಕ್ಷಿಯುವನ ||
ತರಳಂ ವಿಕುಕ್ಷಿಯಾತಗೆ ಬಾಣ ಬಾಣನಿಂ |
ಧರೆಗರಸನಾದನನರಣ್ಯನವನಿಂ ಪೃಥ್ವಿ |
ಗರಸಸಂಭವನಾದ ಲೋಕವಿಶ್ರುತಕೀರ್ತಿಯಂ ಪಡೆದನೈ ತ್ರಿಶಂಕು || (36)

ದುಂದುಮಾರಂ ತ್ರಿಶಂಕುವಿನಣುಗ ಯುವನಾಶ್ವ |
ನೆಂದವಗೆ ಸುತನಾದನವಗೆ ಮಾಂಧಾತಾಖ್ಯ |
ನಿಂದೆ ಸಂಭವಿಸಿದನು ಸಂಧಿಯಾತ್ಮಜನ್ಯೆಸೆ ಧ್ರುವಸಂಧಿಕುವರ ಭರತಂ ||
ಕಂದನಾತನಿಗಸಿತನಾಮುನಳಿಬಲನಾಗ |
ಲಂದು ಹೈಹಯತಾಲಜಂಘಶಶಿಬಿಂದುಗಳ್ |
ಬಂದು ರಣದೊಳ್ ಪರಾಭವಗೈದು ಪುರದಿಂದ ಪೊರಡಿಸಿದರಾ ನೃಪತಿಯಂ ||

ಜಗದೀ[1]ಶ(ಗಿ)ರ್ವರರಸಿಯರವರನೊಡಗೊಂಡು |
ಪೊಗಲು ತುಹಿನಾಚಲದ ನಂದನವ ಕಷ್ಟದಿಂ |
ಸುಗುಣೆಯವರೊಳಗೊರ್ವಳಾದಳಂತರ್ವತ್ನಿಯದ ಕಂಡುಮಾಶ್ಚರ್ಯದಿಂ ||
ಮಿಗೆ ಗರವನಿತ್ತಳಿನ್ನೊರ್ವಳಾಕೆಗೆ ಬಾಧೆ |
ಯೊಗುಮಿಗೆ ಹಿಮಾಚಲವನಡರೆ ತನ್ಮಸ್ತಕದಿ |
ನಿಗಮಾಂತವೇತ್ತನಿರ್ದನು ಭಾರ್ಗವ ಚ್ಯವನನಾಮುಕ ಮಹಾಮೌನಿಯು || (38)

ಸುತಲಾಭಮಂ ಬಯಸಿ ಬಂದೆರಗೆ ಕಾಳಿಂದಿ |
ಯತಿತಿಲಕನೀಕ್ಷಿಸುತ ಸಂತೋಷದಿಂ ನುಡಿದ |
ಸತಿಯರಸಿ ನಿಜಜಠರದಲಿ ಮಹಾಬಲಶಾಲಿಯುದಿಪನಚಿರೇಣ ಸುದತಿ |
ವಿತತಗರಸಹಿತ ಶೋಕಿಸಬೇಡಮೆಂದಭಯ |
ತತಿಯನೀಯಲ್ಕಬಲೆ ಸುಖದೊಳಿರುತಿರಲಿತ್ತ |
ಸತಿಯ ಸುತಬಲ ತ್ರಿದಿವಕೈದಲ್ಕೆ ಕಾಲಗತಿವಿಡಿದು ಮತ್ತಾ ಕಾಮಿನಿ || (39)

ಪೊಡವಿಪತಿಯುಸ್ವಸ್ಥನಾಗಲತಿಶೋಕದಿಂ |
ನಡುಗತ ಪತಿವ್ರತೆಯರೊಡನೆ ಮುನಿಯೆಡೆಗೈದ |
ಲೊಡೆನೆ ನಾನಾವಿಧದಿ ಸಂತೈಸೆ ಕತಿಪಯದಿನಂಗಳಲಿ ಮೋದದಿಂದ ||
ಸಡಗರದ ಸುತಜನ್ಯಮಾಗೆ ಗರಸಂಗತದಿ |
ಮೃಡಸನ್ನಿಕಾಶಮುನಿ ಪೆಸರಿಟ್ಟನಾತಂಗೆ |
ಕಡುಪ್ರೇಮದಿಂ ಸಗರನೆಂದು ಮತ್ತಾ ಸಗರತನಯನಸಮುಂಜಾಖ್ಯನು || (40)

ಕುವರನಸಮುಂಜಸಂಗಂಶುಮಾನ್ ಮತ್ತಾತ |
ಗವಿರಳಪ್ರೇಮಡಿಂಭಕ ದಿಲೀಪಂ ಜನರ |
ಭವನಾಶಭುವನೇಶ ಜನಿಸಿದ ಭಗೀರಥಂ ಸಂತಾನವೃದ್ಧಿಕರನು ||
ತವಕದಿಂದಾ ಭಗೀರಥಗೆ ಕಾಕುತ್ಸ್ಥ ಸಂ |
ಭವಿಸಿದಂ ಮಗುಳೆ ಕಾಕುತ್ಸ್ಥಂಗೆ ರಘುಸುತಂ |
ಭುವಿಯರಸ ರಘುವಿಗೆ ತನೂಜಾತ ಪುರುಷಾದನವಗೆ ಕಲ್ಮಾಷಪಾದಂ || (41)

---

[1] ಜಗದೀಶನಿರ್ವರರಸಿಯರವರ.

ಆ ಮಹೀಪತಿಗೆ ಶಂಖಣನಣುಗನಾತಂಗೆ |
ಭೀಮಬಲನಹ ಸುದರ್ಶನನವಗೆ ತನುಜಾತ ।
ನೀ ಮಹಿಯೊಳಗ್ನಿವರ್ಣಂ ಸುದರ್ಶನಪೌತ್ರ ಶೀಘ್ರಗಂ ಮತ್ತಾತಗೆ ॥
ಪ್ರೇಮಡಿಂಭಕಮರುವು ಮರುವಿಗೆ ಪ್ರಶುಶ್ರುಕಂ |
ಸೋಮಸನ್ನಿಭಪ್ರಶುಶ್ರವಿಗಂಬರೀಷಾಖ್ಯ |
ನಾಮಂಗೆ ನಹುಷನಾತಗೆ ಯಯಾತಿಯು ಸುತಂ ನಾಭಾಗನವನಾತ್ಮಜಂ ॥ (42)

ಚಂಡಬಲನಾಭಾಗಗಜನಜಗೆ ಪಂಕ್ತಿರಥ |
ಚಂಡನೋದ್ಧತಗೆ ಶ್ರೀರಾಮಲಕ್ಷ್ಮಣರುಗಳ ।
ಖಂಡತೇಜಾನ್ವಿತರ್ ಸುತರಾದರತುಳಬಲಯುತರಮಿತವಿಖ್ಯಾತರು ॥
ಅಂಡಜಾಧಿಪಗಮನನಿಂದಾದವಂಶಮೌ |
ರ್ತಂಡಗೋತ್ರಪವಿತ್ರ ರಾಮಲಕ್ಷ್ಮಣರಿಂಗೆ |
ಪಂಡಿತೋತ್ತಮ ಭವತ್ಸುತೆಯರಂ ಯಾಚಿಸಿದೆನ್ನೈಸೆ ಮಿಥಿಳಾಧಿನಾಥ॥ (43)

ಪರಿಶುದ್ಧವಾದ ರವಿವಂಶಜನ ಸಂಬಂಧ ।
ಬೆರೆವಂತೆಮಾಳ್ಪುದೆಂದೊರೆದರುಂಧತಿಯರಸ |
ಗೆರಗಿ ಕರಗಳ ಮುಗಿದು ಪೇಳ್ದಂ ಸ್ವಕೀಯಕುಲವೃತ್ತಮಂ ವಿಸ್ತರದಲಿ ॥
ಪರಮಧಾರ್ಮಿಕ ನಿಮಿಮಹೀಭುಜಂ ಮತ್ತವಗೆ ।
ತರುಣವಿಕ್ರಮ ಮಿಥಿರ್ನಾಮನಾ ಜನಕಂಗೆ |
ತರುಣನುದಿಸಿದನು[1](ದಾವ)ಸುವಾ ಮಹೀಪತಿಗೆ ನಂದಿವರ್ಧನನಾಮಕಂ ॥ (44)

ನಂದಿವರ್ಧನಗಂ ಸುಕೇತುವಾ ಧರ್ಮಾತ್ಮ |
ನಂದನಂ ದೇವರಾತಂ ಮಹಾಬಲತನಯ |
ಸುಂದರಾಂಗಂ ಬೃಹದ್ರಥನಾತಗುದಿಸಿದ ಮಹಾವೀರವಿಜಯಪರನು ॥
ಸಿಂಧುಗಂಭೀರಧೃತಿಮಾನ್ಮಹೋತ್ತಮಸುಧೃ[2](ತಿ) |
ಯೆಂದಾತನಾತ್ಮಜಂ ಮತ್ತಾತನುದರಭವ |
ಬಂಧುರಸುವಿಕ್ರಮಂ ಧೃಷ್ಟಕೇತುವವಂಗೆ ಹರ್ಯಶ್ವನವನ ಸೂನು ॥ (45)

---

1 ತರುಣನುದಿಸಿದನುಧಾರಸುವಾ ಮಹೀಪತಿಗೆ—
ತಸ್ಯ ಪುತ್ರೋ ಮಿಥಿರ್ನಾಮ ಮಿಥಿಲಾ ಯೇನ ನಿರ್ಮಿತಾ ॥
ಪ್ರಥಮೋ ಜನಕೋನಾಮ ಜನಕಾದಪ್ಯುದಾವಸುಃ ॥ ೪ ॥
(ವಾ. ರಾ.—೭೧ ನೆಯ ಸರ್ಗ.)

2 ಸುಧೃಶಿ.

ಮರು ಮರುವಿನಣುಗಂ ಪ್ರತೀಂಧಕಗೆ ಸುರಪಸಮ |
ನುರುಪರಾಕ್ರಮಿಕೀರ್ತಿರಥನೊಗೆದನಾತಗವ |
ತರಿಸಿದಂ ದೇನಮೀಢಾವನೀಪಾಲಕಂ ತನ್ನೃಪಗೆ ವಿಬುಧ ಜನಿಸೆ ||
ಭರದೊಳಾತಗೆ ಮಹೀಂದ್ರಕನಾ ಮಹೀಂದ್ರಕಗೆ |
ತರಳಂ ಸುಕೀರ್ತಿವಂತಂ ಕೀರ್ತಿರಾತಂಗೆ |
ನರದೇವನುದಿಸಿದ ಮಹಾರೋಮನವನಸುತ ಸ್ವರ್ಣರೋಮಾಖ್ಯನವಗೆ || (46)

ಕಲಿಗಳಗ್ರೇಸರಂ ಹ್ರಸ್ವರೋಮಾಖ್ಯಪ |
ನಲಘುಬಲನುದರದೊಳಗಾನುಂ ಕುಶಧ್ವಜಂ |
ಕೆಲಕಾಲಕುದಿಸಲತಿಪ್ರೀತಿಯಿಂದಲಿ ಸಲಹಿ ರಾಜ್ಯವನ್ನೊಪ್ಪುಗೈದು ||
ಚೆಲುವಿನಿಂ ಅನುಜನ್ಮನನ್ನಿತ್ತು ಕರತಳಕೆ |
ಲಲನೆಯೊಡನೆರದಾ ತಪೋವನಕೆ ಪಿತಗಮಿಸ |
ಲೊಲವಿನಿಂದನುಜಸಹ ಭೂಪಾಲನಂಗೈವುತಿರ್ದೆ ತದನಂತರದಲಿ || (47)

ಬಂದು ಸಾಂಕಾಶ್ಯಾಧಿನಾಥಂ ಸುಧನ್ವಾಖ್ಯ |
ನೊಂದುದಿನ ಮತ್ಪುರಪ್ರಾಂತ್ಯದೊಳ್ಬಲಸಹಿತ |
ನಿಂದು[1] ಶಿ(ವ)ಚಾಪಮಂ ಧರಣೀತನೂಜೆಯಂ ಕಳುಪುವುದು ತನ್ನ ಪೊರೆಗೆ ||
ಯೆಂದು ಚರರಂ ಕಳುಪೆ ಕೇಳ್ದಾಗಲಾನು ಕಿನಿ |
ಸಿಂದ ಪೊರಮಡಲಾದುದತಿಯುದ್ಧಮುಭಯರಿಂ |
ಗಂದು ಸಂಖ್ಯೆಯೊಳಾಂ ಸುಧನ್ವನಂ ಬೀಳ್ಕೆಡಪಿ ಮತ್ತವನ ರಾಷ್ಟ್ರವನ್ನು || (48)

ಸ್ವಾಧೀನಗೈದು ತಮ್ಮಂಗೆ ಪಟ್ಟವ ಕಟ್ಟಿ ||
ದಾದಿಯಿಂ ಸಾಂಕಾಶ್ಯದಲ್ಲಿಹ ಕುಶಧ್ವಜಂ |
ಮೇದಿನೀಸುರವರ್ಯ ಮತ್ಕುಲದುದಂತಮಿದು ನಿಜಚಿತ್ತವೇದ್ಯವಲ್ತೆ ||
ಸಾದರದಲುಂ ಸೀತೆ ರಾಮಭದ್ರಂಗೆ ನಿಜ |
ಸೋದರಗೆ ಲಕ್ಷ್ಮಣಂಗೂರ್ಮಿಳೆಯನಿತ್ತಪೆನ್ |
ಈ ಧರಾಮರಮತದಿ ವೈವಾಹಮಂ ರಚಿಪೊಡಪ್ಪಣೆಯನೀವುದೆನುತ || (49)

ರೂಢಿಗತಿಶಯಮೆನಿಪ ಸಪ್ತತಂತುವನಾಜ್ಞೆ |
ಗೂಡಿ ಪೂರ್ಣತೆಗೈವೆ ಮೂರುದಿನದೊಳಗೆನುತ |
ಲಾಡಿದ ಮಹಾರಾಜನೊಡನೆ ನಸುನಗುತೆಂದ ಗಾಧಿಸುತ ಪ್ರೀತಿಯಿಂದ ||
ಬೇಡೆ ಮತ್ಕುಲದೇಳ್ಗೆಗಧಿಪಗೌತಮತನುಜ |
ಮೂಡಿದಾನಂದದಿಂ ಮಖವನುಂ ಸಾಂಗಮೆನೆ |
ಮಾಡಿ ವೈವಾಹಮಂ ರಚಿಸೆಂದು ನೇಮಿಸಿದ ಕತದಿಂದ ಸಂಭ್ರಮದೊಳು (?)|| (50)

---

1 ಶಿರಚಾಪಮಂ

ಅಸದೃಶಂ ರಘುವಂಶನುದಕೆ ಪಾಸಟಿ ಪುಣ್ಯ |
ನೆಸರಾಂತ ನಿಮಿಕುಲಂ ರಾಮಲಕ್ಷ್ಮಣರಿಂಗೆ |
ವಸುಮತೀಸುತೆಯೂರ್ಮಿಳೆಯರನಿತ್ತುದು ಸತ್ಯ ಸಂತೋಷಮಾಯ್ತು ಮನಕೆ ||
ಪೊಸತೆನಿಪ ಸೌಂದರ್ಯಯುತೆಯರನುಜಾತ್ಮಜೆಯ |
ರೆಸಕದಿಂ ಭರತಶತ್ರುಘ್ನಾಖ್ಯರಿಂಗಿತ್ತು |
ರಸೆಯೊಳುಂ ಪುಣ್ಯಮಂ ಕೀರ್ತಿನೈಪುಣ್ಯಮಂ ಗಳಿಸುಗೆನೆ ನೃಪತಿ ಪ್ರಿಯದಿ|| (51)

ಪರಮಋಷಿವರನಂಘ್ರಿಯುಗಳಕಾನತನಾಗಿ |
ಕರಗಳಂ ಮುಗಿದೆಂದನತುಲಭಯಭಕ್ತಿಯಿಂ |
ಸರಸಿಜಾಸನತನಯಸಹಿತಲತಿಕೃಪೆಯಿಂದನುಗ್ರಹಿಸಿ ಪೇಳ್ದ ನುಡಿಯ ||
ಭರದಿ ಮಕುಟದೊಳಾಂತೆನಾತ್ಮಕುಲಪಾವಿತ್ರ |
ಕರಮಾಯ್ತು ಚಿತ್ತದೊಳಗಿರ್ದೊಲ್ಕುಶಧ್ವಜನ |
ಸಿರಿಕರದ ಕುವರಿಯರನಿತ್ತಪೆಂ ಪಂಕ್ತಿರಥಸುತಭರತಶತ್ರುಘ್ನಗೆ || (52)

ಒಂದು ದಿನದೊಳ್ ರಾಜಪುತ್ರಿಯರು ನಾಲ್ವರಿಗೆ |
ಛಂದದಿಂ ವೈವಾಹಮಪ್ಪಂತೆ ದಯೆಗೈವು |
ದೆಂದು ಬಿನ್ನಪಗೈಯೆ ಜನಕನನಿತರೊಳೆಂದನಿಕ್ಷ್ವಾಕುಗೋತ್ರತಿಲಕ ||
ಕುಂದುಂಟೆ ಭವದೀಯಸತ್ಯತರಮಹವಾಣಿ |
ಗೆಂದು ಚಿತ್ತದೊಳಿರ್ದ ಮಾಳ್ಕೆಯೊಳ್ ನೇಮಿಪುದು |
ಮಂದಿರಕ್ಕಪ್ಪಣೆಯನಿತ್ತಡಹ ಕೃತ್ಯಗಳ ಸತ್ವರದಿ ರಚಿಸೆ ವಿಧಿಯಿಂ || (53)

ಎನುತೊರೆಯೆ ಜನಕನಪ್ಪಣೆವಿಡಿದು ಪಂಕ್ತಿರಥ |
ಮುನಿತಿಲಕರಿರ್ವರೊಡಗೊಂಡು ಮಂದಿರಕೈದಿ |
ಜನನಾಥರಚಿಸಿದಂ ವಿಧ್ಯುಕ್ತಪೂರ್ವಕದಿ ಶ್ರಾದ್ಧಾದಿಕರ್ಮಂಗಳ ||
ಇನನುದಿಸಲೆಚ್ಚತ್ತು ಗೋಶತಸಹಸ್ರಗಳ |
ವಿನಯದಿಂ ಭೂಸುರೋತ್ತಮರ ಕರೆಕರೆದಿತ್ತನಾನಂದಸಂತೋಷದಿಂ || (54)

ಮೂಲೋಕವಶವರ್ತಿಯಾದ ಮಾಳ್ಕೆಯೊಳು ಭೂ |
ಪಾಲದಶರಥ ಸುರೋಪಮಿತಲೋಕಾಧ್ಯಕ್ಷ |
ಬಾಲಕರ ನಾಲ್ವರಂ ನೋಡಿ ಹರುಷಾಬ್ಧಿಯೊಳಗಾಳಿ ಪೆರ್ಚುಗೆಯೊಳಿರಲು ||
ಶೂಲಹಸ್ತಾದ್ಯಖಿಲಮುನಿಮುಖ್ಯನುತರಮಾ |
ಲೋಲಶ್ರೀ**ರಾಮಪುರ**ನಾಥ ಮನುಜಾಕೃತಿಯ |
ಲೀಲೆಯಿಂ ಪಿತನಂಕದಲ್ಲಿರ್ದ ಕೃತತಪಃಫಲರೂಪಮೆಂಬಂದದಿ || (55)

ಸಂಧಿ 20 ಕ್ಕಂ ಪದಂಗಳ್ 1214

---

# ಇಪ್ಪತ್ತೊಂದನೆಯ ಸಂಧಿ

ಸೂಚನೆ ॥ *ನಿರುಪಮಾನಂದಾಬ್ಧಿಯಣುಗಿಯುದ್ವಾಹಮಂ ।
ಸರಭಸದಿ ಮಾಳ್ಪೆನೆಂಬುಜ್ಜುಗದಿ ಜನಕನೃಪ ।
ಪರಿಪರಿಯಲಂಕಾರಗೈಸಿದಂ ವೈವಾಹಮಂಟಪವನತಿವಿಭವದಿ ॥

ಮೇನಕಾತ್ಮಜೆ ಕೇಳು ಜನಕನನುಮತಿಯಿಂದೆ ।
ಭಾನುಕುಲಸಂಭೂತ ನಿಜನಿಲಯಕೈದಿ ತಾ ।
ಮ್ಲಾನಹರುಷದಿ ನಿಖಿಲಶುಭಕರ್ಮಗಳರಚಿಸಲಿತ್ತ ನಿಮಿವಂಶಭವನು ॥
ಸಾನಂದದಿಂದಮಾತ್ಯರ ಕರೆದು ನೇಮಿಸಿದ ।
ನಾನಾವಿಚಿತ್ರತರಮಾದಲಂಕೃತಿಯಿಂ ನ ।
ವೀನಮಂಟಪರಚಿಸಿ ಪತ್ತನವ ಸಿಂಗರಂಗೈವುದತಿವೇಗಮೆನುತ ॥ (1)

ಆಳಿದೊಡೆಯನ ನೇಮದಿಂ ಪಕೃತಿನರನೈದಿ ।
ಪೇಳಿಸಿದನುಪಜೀವ್ಯರಿಂದ ಕಾರುಕತಕ್ಷ ।
ಕಾಳೀಚರಿತಮುಖ್ಯರಿಂಗೆ ಸತ್ವರದಿಂದ ವೇದಿಕಾರಚನೆಗೈಯೆ ॥
ಕಾಳಿಯರಸನ ಸಖನ ವೈವಾಹವಾರ್ತೆಯಂ ।
ಕೇಳಿ ಬಂದಂ ವಿಶ್ವಕರ್ಮನತಿಭಕ್ತಿಯಂ ।
ತಾಳಿ ಮನದೊಲವಿಂದ ನಿಜಕರ್ಮಸಾಮರ್ಥ್ಯಮುಳ್ಳನಿತ ಸೃಜಿಪೆನೆನುತ ॥ (2)

ಜನಕನಾಸ್ಥಾನಕೈತಂದು ಮನ್ನಣೆವಡೆದು ।
ಬಿನದಿಂ ರಚಿಸಿದಂ ವೈವಾಹಗೇಹಮಂ ।
ವನಧಿಮೇಖಲೆಯೊಳತಿಶಯಮಾದ ಮಂಟಪವನತಿಚಮತ್ಕಾರದಿಂದ ॥
ಅನಿತಿನಿತೆನುತ್ತಲಾ ಚೆಲುವನಭಿವರ್ಣಿಸಲ್ ।
ವನಜಪೀಠಂಗಳವೆ ಚಿತ್ರರಚನಾಕ್ರಮುವ ।
ಜನರು ನಿಟ್ಟಿಸುತಲಚ್ಚರಿವಟ್ಟು ಪುತ್ತಳಿಗಳಂತಿರ್ಪರೇವೇಳ್ವೆನು ॥ (3)

ಮಾಣಿಕವ ತೆತ್ತಿಸಿದ ರತ್ನಮಯಭಿತ್ತಿ ಕ-।
ಟ್ಟಾಣಿಬಜ್ಜರಗಂಬ ಪವಳಬೋದಿಗೆಯು ಸು-।
ಪ್ಪಾಣಿಮುತ್ತಿನ ಲೋವೆ ಮರಕತದ ಪೊದಕೆ ವೈಡೂರ್ಯವಳಯಗಳಿಂದಲಿ ॥
ಸಾಣೆವಿಡಿದನುಳಗೋಮೇಧಿಕದ ಕಿಗ್ಗಟ್ಟು ।
ಕೋಣಂಗಳಿಗೆ ಚಂದ್ರಕಾಂತದರಳೆಲೆಯು ಬಿ-।
ನ್ನಾಣದಿಂ ರಾಜಿಸಿದುದತಿಮನೋಹರದೊಳ್ವಿವಾಹಗೃಹಮೇವೇಳ್ವೆನು ॥ (4)

---

*ಈ ಸಂಧಿಯಲ್ಲೂ ಮುಂದಿನ ಸಂಧಿಯಲ್ಲೂ ಇರುವ ವಿಸ್ತಾರವಾದ ವೈವಾಹ ಸಂಭ್ರಮಾದಿವಿಚಾರವು ವಾಲ್ಮೀಕಿರಾಮಾಯಣದ ಅನುವಾದವಾಗಿರದೆ ಕವಿಯಿಂದ ಸ್ವಂತವಾಗಿ ಸೇರಿಸಲ್ಪಟ್ಟುದಾಗಿದೆ.

ಬಳಸಿ ಕಟ್ಟಿದ ಕುಂದಮಂದಾರಗುಚ್ಛಗಳೊ |
ಳಿಳಿವ ಮಧುಲೋಭದಿಂದೈತಪ್ಪ ಪರಮೆಗಳ |
ಬಳಗ ತೋರಿದುದಲ್ಲಿ ಮೌಕ್ತಿಕದ ಝುಲ್ಲಿಗಳ ಮಧ್ಯಪ್ರದೇಶಗಳಲಿ ||
ತೊಳಪ ಬಲಭಿನ್ಮಣಿಯನಳವಡಿಸಿ ಚಿತ್ರಿಸಿದ |
ಪೊಳಪಾಂತ ಮೋಹನಂಬೆತ್ತು ರಾಜಿಪ ಕಾಂತಿ |
ಯಳವಟ್ಟುದಮರಧುನಿಮಿಹಿರಸುತೆಯರ ಬೆಡಗನಾಂತು ನೋಟಕನಿಚೆಯಕೆ ||

ಸುರಪರತ್ನದ ಭಿತ್ತಿಯೆಡೆಯಲ್ಲಿ ಮತ್ತೊರ್ವ |
ತರಳೆ ಸಿಂದೂರದಿಂ ರೆಗ್ಗಾರಣೆಯ ಚೆಲುವ |
ವಿರಚಿಸಲ್ ತೋರ್ದುದತಿಶಯಮೆನಲ್ ಮುಂಗಾರ ಜಲದಜಂಗುಳಿಯ ನಡುವೆ ||
ಮೆರೆವ ಸೌದಾಮಿನಿಯು ಕರಮುದಂಚಿತಗೈದ |
ತೆರದಿ ಮುತ್ತಾ ಸತಿಯ ನಿರಿಗುರುಳ ದೃಗ್ಧಾಳ |
ದುರುಗಳಂ ಬಯಸಿ ಯಾಚಿಸಬಂದ ಮಾಳ್ಕೆಯೊಳದೇನೆಂಬೆ ಕೌತುಕವನು || (6)

ಕತ್ತಲೆಯು ತಾರಕಾಮೊತ್ತದೊಂದಾವೆಡೆಯ |
ಪೆತ್ತಂತೆ ಶತಪತ್ರ ಮಕರಂದಸಾರಮಂ |
ಬಿತ್ತರಿಪ ತೆರನಂತೆ ಶಂಭೂಕ ಮುತ್ತುಗಳನೀವಂದದಿಂದನ್ನೈದೆ ||
ಮತ್ತಕಾಶಿನಿಯೊರ್ವೆ ಮರಕತದ ಕುಟ್ಟಿಮಗ |
ಳೊತ್ತಿನೊಳ್ಸುಪ್ಪಾಣಿಮುತ್ತುಗಳ ರಚನೆಯಿಂ |
ತೆತ್ತಿಸಿದ ರಂಗವಲ್ಲಿಗಳು ನೋಟಕಜನರ ಮೋಹಿಪುದದೇವೇಳ್ವೆನು || (7)

ಜಾತರೂಪಸ್ತಂಭಸಾಸಿರಗಳಗ್ರದೊಳ್ |
ಶಾತಕುಂಭಾನ್ವಿತಸುರೇಖೆಪಟ್ಟಿಗಳಿಂದ |
ಪೀತಪೊಂಬಣ್ಣ ಸಿತನೈಲ್ಯವಸ್ತುಗಳಿಂದ ಮೇಲ್ಕಟ್ಟ ರಚಿಸಿ ಬಳಿಕ ||
ಪ್ರೀತಿಯೊಳಗನುಜೆಯುದ್ವಾಹಮಂ ನೋಡೆ ಬಹು |
ಧಾತಿಶಯರೂಪಾಂತು ವಿಸ್ಮಯದೊಳಾ ಧರಾ |
ಜಾತನೇಂ ಬಂದಿರ್ಪನೋಯೆನೆ ಪ್ರವಾಳಗಳ ಗೋಂಚಲುಗಳೆಸೆದಿರ್ದವು || (8)

ಸಾಲರಿದು ಕಟ್ಟಿರುವ ಮುತ್ತಿನುರುಝುಲ್ಲಿಗಳ |
ಮೇಲೆಸೆವ ಮಾಣಿಕ್ಯದಂಡೆಗಳ ಸನ್ನಿಧಿಯ |
ಕೀಲಿಸಿದ ಮರಕತದ ಕುಚ್ಚುಗಳ ಸಂತಾನ ಕುಸುಮಗುಚ್ಛಂಗಳಿಂದ ||
ಲಾಲಿಸುವ ಚಿತ್ರಪುತ್ತಳಿಕೆಗಳ ಕೆಲದೊಳಗೆ |
ಮೇಲಾದ ಮಣಿದರ್ಪಣಗಳುಭಯಪಾರ್ಶ್ವದೊಳ್ |
ಚಾಲನೆಗಳಾಂತು ಪುಷ್ಕರವ ಚುಂಬನಗೈವ ಧ್ವಜಪಟಗಳೆಸೆದಿರ್ಪವು || (9)

ಸಿಂಗರಂಗೈದಿರ್ಪ ಮಕರತೋರಣದಿಂದ |
ಮುಂಗಡೆಯ ನನೆಯ ಸೂಸಕದ ವೈಭವದಿಂದ |
ಪಿಂಗಲತನೂಜೆಯನುಜಾತರನ್ನಗಳಿಂದ ಖಚಿತನೆಲಗಟ್ಟಿನಿಂದ ‖
ಭೃಂಗಾರಮಣಿಭಿತ್ತಿಯಿಂದಲದರೊತ್ತಿನಲಿ |
ಸಂಘಟಿತವಿದ್ರುಮದ್ವಾರ ದೇಶಂಗಳ ಬೆ-|
ಡಂಗಾಂತ ಹೀರಮಯವೇದಿಕಾರಚನೆ ರಾರಾಜಿಸಿತು ಪೊಂಗಂಬದಿಂ ‖ (10)

ಬಳಸಿ ಕಟ್ಟಿದ ಕನಕಕಿಂಕಿಣೀಜಾಲಗಳ |
ಬೆಳಗುತಿಹ ಗೋಮೇಧಿಕದ ಕವಾಟಗಳೆಸೆದು |
ಪೊಳೆವುತಿಹ ಮಾಣಿಕ್ಯಕಲಶಗಳ ವೈದೂರ್ಯಲೋವೆಗಳ ಗಾಡಿಯಿಂದ ‖
ತೊಳಪ ಮಂಟಪದಲ್ಲಿ ನೆರೆದಿರ್ಪ ವಿಬುಧರಿಂ |
ತಳತಳಿಪ ಭೂಷಣೋಜ್ವಲರಾಜಪುತ್ರರಿಂ |
ದೊಳಗೆಸೆವ ಮಂತ್ರಿವರರಿಂದ ಸತ್ಕವಿಗಳಿಂ ಕೌತುಕಂಬಡೆದಿರ್ದುದು ‖ (11)

ಎಡೆಯಾಡುತಿಹ ಸೆಣ್ಗಳೊಲವಿನಿಂ ಕಣ್ಬೇಟ |
ದೊಡನೆ ವಶಗೈಯುವ ಕಳಾವಿದರ ಸೊಂಪಿನಿಂ |
ಗುಡಿಗಟ್ಟಿ ನಲಿವ ಪುರಜನರ ಸುಖದಿಂಪಿನಿಂ ಗಳಿಗೆವಟ್ಟಲನು ಪಿಡಿದು ‖
ಅಡಿಗಡಿಗೆ ನೋಡುತಿಹ ದೈವಜ್ಞಗುಂಪಿನಿಂ |
ಕಡೆಗಣ್ಣ ಚಂದ್ರಿಕೆಯ ಪಸರಿಪ ವಿದಗ್ಧೆಯರು |
ಪಿಡಿದಿರ್ಪ ಮಂಗಳದ್ರವ್ಯಗಳ ಸೊಗಸಿನಿಂದಾ ಭವನ ರಾಜಿಸಿದುದು ‖ (12)

ಸರಸಗೀತಂಗಳನು ಪಾಡುತಿಹರೊಂದೆಸೆಯ |
ನಿರತಲಾಲಿಪ ಜವ್ವನೆಯರಿರ್ಪರೊಂದೆಸೆಯ |
ಪರಿಪರಿಯ ವಾದ್ಯಮಂಗಳವರೆಗಳೊಂದೆಸೆಯ ಬಾಜಿಸುವರೊಂದೆಡೆಯಲಿ ‖
ಮಿರುಗುವಷ್ಟಾಪದಸುಕಾಂಡಪಟಮುಂ ಪಡೆದು |
ಸ್ಮರಶರಗಳಂತೆಸೆವ ಮಾನಿನಿಯರೊಂದೆಸೆಯ |
ಪರಿಶೋಭಿಸಿದರಲ್ಲಿ ನಾನಾವಿಲಾಸದಿಂದೇವೇಳ್ವೆನಚ್ಚರಿಯನು ‖ (13)

ಕತ್ತುರಿಯ ಧೂಳಿಗಳ ತಳಿತ ಪರಿಮಳಕೈದಿ |
ಮುತ್ತಿಬಹ ಪರಮೆಗಳ ಗೊಂದಣದ ಗಾನಗಾಳ |
ಸುತ್ತ ಕೆದರಿದ ಕುಂದಮಂದಾರಕುಸುಮಗಳ ಪನ್ನೀರ್ಗೊಡಂಗಳಿಂದ ‖
ಮುತ್ತುಗಳ ರಂಗವಲ್ಲಿಗಳ ನಾನಾವಿಧದಿ |
ಬಿತ್ತರಿಪ ಕಾಂತೆಗಳ ಶೃಂಗಾರಚೇಷ್ಟೆಗಳ |
ಮೊತ್ತ ರಾರಾಜಿಸಿದುದೇನೆಂಬೆ ವೈವಾಹಮಂಟಪದ ಸಿರಿಕರವನು ‖ (14)

ಪೊರವಲಯದಲಿ ರಚಿಸಿದುಯ್ಯಲೆಗಳಿಂ ಕೆಲದ ।
ಲಿರುವ ರಾಟಾಳಗಳ ಜಲಯಂತ್ರದೊತ್ತಿನೊಳ್ ।
ಮೆರೆವ ಚಪ್ಪರಗಳಿಂದಲ್ಲಿ ರಾರಾಜಿಸುವ ವಿಶ್ರಮಸ್ಥಾನದಿಂದೆ ॥
ಸ್ಮರನ ಕೇಳೀವನಮೊ ಚಂದಿರನ ಮಂದಿರಮೊ ।
ನಿರತಂ ವಸಂತನಿಹ ನೆಲವನೆಯೊ ಪರಿಮಳದ ।
ಗುರುತರಾಗಾರಮೊಯೆನಲ್ಕೆ ತೋರಿದುದಮಿತವೈಭವದೊಳಾ ಮಂದಿರಂ ॥ (15)

ಕುಸುಮಗಳ ಸರಗೊಳಿಪ ಲಾಜಗಳನಾರೈವ ।
ಬಿಸಜತಂತುಗಳನೊಪ್ಪಂಗೊಳಿಸುತಂಕುರವ ।
ಪೊಸಗೈವ ಕತ್ತುರಿಯ ಸಾರಣೆಗಳಂ ಮಾಳ್ಪ ಚಿತ್ರಂಗಳಂ ಲಿಖಿಸುವ ॥
ಕುಸುಮರಜಗಳನಲಂಕೃತಿಗೈವ ಕರ್ಪೂರ ।
ವಿಸರಪುತ್ತಳಿಗಳನ್ನೋಜೆಗೈಯವ ತರುಣ ।
ಶಶಿಮುಖಿಯರಾ ಮಂಟಪಾಗ್ರದೊಳಗೊಪ್ಪಿರ್ದರಂಗಜನ ಶರಗಳೆನಲು ॥ (16)

ಮಣಿಗಣದ ರೋಚಿ ದಿನಮಣಿಯನಂಡಲೆಯೆ ಶಶಿ ।
ಮಣಿಕಾಂತಿ ನಕ್ಷತ್ರಮಣಿಗಳಂ ಬಾಗರೆಯೆ ।
ಮಣಿಸಿ ಮರಕತಗವೀ ಮಣಿಯಶ್ವಸಂತತಿಯ ಭಿತ್ತಿಗಳ ನೀಲಂಗಳು ॥
ತೃಣಗಣಾಯತಮೆನಿಸೆ ಕಂದರಗಳಂ ಸತೀ ।
ಮಣಿಯುರಂ ಮೆಚ್ಚಿಸಲು ಬಜ್ಜರಂ ಬಚ್ಚರವ ।
ರಣಿಪರುರಗರ ಶಿರೋಮಣಿಗಳೆಣೆಯಲ್ಲಮೆಂದಾವಗಂ ಪ್ರಿಯದಿಂದಲಿ ॥ (17)

ಸುರನಗರಮೆಂಬಂತೆ ರಂಭಾವಿಲಾಸದಿಂ ।
ಪುರದ ಬಹಿರುದ್ಯಾನದಂತಲಂಕೃತಿವೆತ್ತು ।
ವರಚೈತ್ರದಂತೆ ಪ್ರಮದಾಳೀಮನೋಹರಂ ಸಾಗರದ ಭಂಗಿಯಂತೆ ॥
ನಿರತಲಕ್ಷ್ಮೀನಿಲಯಮಾಗಿ ಸಂಧ್ಯಾಸಮಯ ।
ಮೆರೆವೊಲ್ಸಭಾನುರಾಗದಿ ರಮ್ಯಮಾಗುತಂ ।
ಕರಮೆಸೆದುದುದ್ವಾಹಮಂಟಪಮುದೇವೇಳ್ವೆ ಜನಮನೋಲ್ಲಾಸಮಾಗೆ ॥ (18)

ಮಾನಿಚಯ ಪರಿವೇಷ್ಟಿಸಿರಲು ತನ್ಮಧ್ಯದೊಳ್ ।
ಬೆಡಗಿಂದ ಬೆಳ್ಮುಗಿಲು ಪೊಳೆವೊಲ್ಮಣಿಸಮೂಹ ।
ದೆಡೆಯೊಳ್ವಿರಾಜಿಸಿತು ಥಾಳಥಳ್ಯಪ್ರಭಾಕಲಿತಪಟ್ಟವಣೆಯದರಾ ॥
ತುಡುಕಿರುವ ಪಚ್ಚೆಯ ಮೃಗೇಂದ್ರಂಗಳಿಕ್ಕಡೆಯ ।
ಸಡಗರದ ಚಾಮರಗ್ರಾಹಿಪಾಂಚಾಲಿಕೆಗ ।
ಳಡಿಗಡಿಗೆ ಬಿಡುಗಣ್ಣರೊಡೆಯನ ಸಭಾಂತರಸ್ಮೃತಿಯಿಯೊವುದತಿಶಯದೊಳು ॥

ಜವಿಲಾಜೆದೂರ್ವೆದಧಿಸಿಂದೂರಸಂಕುಳವ |
ನವನೀರಜದ ತಂತುನಿಚಯಮಣಿಪಾತ್ರೆಗಳ |
ವಿವಿಧಪ್ರರೋಹ ಮಧುಮಾದಳದ ಪಣ್ಣಿಕ್ಷುದಂಡ ಶ್ರೀಖಂಡಖಂಡ ||
ಕವ ರನ್ನಗನ್ನಡಿಯ ಬಾಸಿಗವ ಸುಧೆಯುದಕ |
ದವಿರಳದ ಕನಕಕಲಶಂಗಳಂ ಪಿಡಿದೊಡನೆ |
ಯುವತಿಯರಲಂಕಾರಗೈದರಾ ವೈವಾಹ ವೇದಿಕಾಂತರವ ಪ್ರಿಯದಿ || (20)

ಪೊಸದಳಿರ್ಪೂಮಾಲೆ ರನ್ನಗನ್ನಡಿ ಲಾಜ |
ಬಿಸತಂತು ಸಿತದೂರ್ವೆ ಮುಕ್ತಾಕ್ಷತಂ ದಿವ್ಯ |
ಪೆಸರಾಂತನಿಖಿಲೌಷಧಾನಿಚಯ ಶುಭಮಿಾವ ಪಂಚರತ್ನಂಗಳಿಂದ ||
ಶಶಿಧರನ ಮುಕುಟಭೂಷಣಮೆನಿಪ ಸ್ವರ್ಧುನೀ |
ರಸಭರಿತ ರುಕ್ಮಕಲಶಗಳ ದೀಧಿತಿ ಬೆಡಗ |
ನೊಸೆದಿತ್ತು ವೇದಿಕಾಂತರದಿ ಮಂಗಳಮನೋಹರಗಳಂ ನೋಳ್ಪ ತೆರದಿ || (21)

ನವರತುನಮಯವರ್ಣವೇದಿಕೆ ದುಕೂಲದುರು |
ನವಕವ್ಯೆತಾನ ಭೃಂಗಾರಕಲಶಾಳಿಗಳ |
ವಿವಿಧಪೂತಾಂಬುಪೂರಿತಕುಂಭಗಳ ಮಣೀದೀಪಂಗಳೊಲವಿನಿಂದ ||
ಕುವಲಯಸುಪಲ್ಲವದ ತೋರಣಧ್ವಜದಿಂದ |
ಲವಲವಿಕೆಯಿಂದಲುದ್ವಾಹಮಂಟಪ ತೋರ್ದು |
ದವಿರಳದ ಹರ್ಷದಿಂದಲ್ಲಿ ಮಂಗಳಲಕ್ಷ್ಮಿ ಸಿಂಗರಂಗೈದಿರ್ಪೊಲು || (22)

ಪಾರಿಜಾತದ ಕುಸುಮ ದಿವ್ಯೌಷಧಂಗಳೌ |
ದಾರಮಾದ್ರಾಕ್ಷತೆ ಸಿತಾಬ್ಜ ಸಿತದೂರ್ವೆಗಳು |
ಚಾರುತರನೂತನಫಲಂಗಳೆದೆಕತ್ತುರಿಯು ಕಾಶ್ಮೀರಗೋರೋಚನ ||
ಸಾರತರಪ್ರತ್ಯಗ್ರದಂಕೂರಮುಖ್ಯಸಂ |
ಭಾರಗಳ ವೇದಿಕಾಂತರದಲಳವಡಿಸಿ ಸುಕು |
ಮಾರಭಾಷಿತದಿಂದಮಾತ್ಯ ವಿಜ್ಞಾಪಿಸಿದನೀ ವಾರ್ತೆಯಂ ನೃಪತಿಗೆ || (23)

ಆ ಮಹೋತ್ಸವದೊಳರವಿಂದಾಕ್ಷರಾಮಂಗೆ |
ಪ್ರೇಮದಿಂ ಮಜ್ಜನಂ ಗೈಸುವಭಿಲಾಷೆಯಿಂ |
ವಾಮಾಕ್ಷಿಯರ್ ಬಂದು ವಸಗೆಯಿಂ ಪಾಡುತಲಿ ರತುನಮಯಹಸೆಯನಿಟ್ಟು ||
ಸೋಮಕಾಂತದ ಪೀಠಮಂ ಮಡಗಿ ಮೇಲೆ ಸು-|
ತ್ರಾಮಪಟ್ಟೆಯನಂಶುಕಂಗಳನ್ನಳವಡಿಸಿ |
ಕೋಮಲಸುವಾಣಿಯಿಂದಖಿಳಲೋಕೇಶನಂ ಬಣ್ಣಿಸುತ ಕರೆದರೊಲಿದು || (24)

ಬಾಗಿಸಲು ಮುಪ್ಪುರದ ಸುದತಿಯರ ಸೀಮಂತ ।
ಬಾಗಲಮರಿಯರ ಬೈತಲೆಯತುಲವಿಸ್ತರಂ ।
ಬಾಗುವಂತೆಸಗಿದ ಮಹಾಧನುವ ಲೀಲೆಯಿಂದೀ ಧರಾಮಂಡಲದೊಳು ॥
ನಾಗನರರರಿವಂತೆ ಕರಪಲ್ಲವಂಗಳಿಂ ।
ಬೇಗಲಿಕ್ಕಡಿಗೈದ ನೃಪಕುಲೋತ್ತಮ ಮೌನಿ ।
ಯಾಗರಕ್ಷಕ ದಯಾಕಲಿತ ಬಿಜಯಂಗೈವುದೆನುತ ಪಾಡಲ್ಕರ್ಥಿಯಿಂ ॥ (25)

ರಾಮ ಶ್ಯಾಮಲಗಾತ್ರನೈತರಲ್ ಭೂಸುರ-।
ಸ್ತೋಮಮಮೌಹೂರ್ತಿಕರು ಜಯಜಯಧ್ವಾನದಿಂ ।
ನೇಮದಿಂ ಪರಸಲಾ ಪೀಠದಲಿ ಮಂಡಿಸಿದನೀಕ್ಷಿಸುತ ಹರುಷದಿಂದ ।
ಸೀಮಂತಿನಿಯರೈದಿ ರತುನದಾರತಿಗಳಂ ।
ಪ್ರೇಮದಿಂ ಬೆಳಗುತಕ್ಷತೆಯಿಟ್ಟು ಫಾಲದಲಿ ।
ಕೋಮಲಕರಂಗಳಿಂ ಮೃಗನಾಭಿಸಂಕಲಿತಸುರಭಿಳಿತತೈಲವಿಡಿದು ॥ (26)

ಅರಸಾಗಿ ತ್ರೈಜಗಕ್ಕಮರಮುನಿಗಳ ಪೊರೆದು ।
ನಿರತಸದ್ಧರ್ಮಾಭಿವೃದ್ಧಿಯಂ ಪೆರ್ಚಿಸುತ ।
ಸಿರಿಯರಸನಂದದಿಂದಖಿಲಪೂಜ್ಯತೆವೆರೆದು ತರಿದಹಿತಮಂಡಲವನು ॥
ಧುರವಿಜಯನಾಗಿ ಶರಣರ ಪಾರಿಜಾತದೊಲ್ ।
ತಿರೆಯು ಶಾಶ್ವತದೊಳಿಪ್ಪನ್ನೆಗಂ ತಿರಮಾಗಿ ।
ಸುರರಾಜಸಂಕಾಶದಿಂದೆನುತ ಪರಸುತಂ ಕಮ್ಮೆಣ್ಣೆಯೊತ್ತಲೊರ್ವೆ ॥ (27)

ಮುಡಿನಡುಗೆ ಮುಂಗುರುಳುಯೆಡೆಯಾಡೆ ವದನದೊಳ್ ।
ಕಡುಬೆಮರ್ಸೂಸೆ ಕೊಡವೊಲೆ ಕದಕ್ಕದಿಸುತಿರೆ ।
ಜಡಿಯೆ ಜಘನಾಚಲಂ ನಡುಗಲೂರುದ್ವಯಂ ನಿಶ್ವಾಸ ಪೆರ್ಚುತಿರಲು ॥
ಕಡಗಕಂಕಣಕಿಂಕಿಣೀಗಣದ ಮಂಜುರವ ।
ವಡಿಗಡಿಗೆ ಸ್ಮರನ ಸಿಂಜಿನಿಯ ಸಂಪದಮಿರಿಯೆ ।
ಬೆಡಗಿ ಚದುರಿಂದೆಣ್ಣೆಯೊತ್ತಿದಳ್ ಕಡೆಗಣ್ಣ ಶರಗಳಿಂದಿಡುತೆ ವಿಟರ ॥ (28)

ಪರಿಮಳಾಂಬುವಿನಿಂದ ಮಜ್ಜನಂಗೈಸಿ ಶುಭ ।
ಕರವ ಕರವರಿಸಿ ನವತಿಗುರಿಕ್ಕಿ ಚಿಕುರಕಂ ।
ಪರಿಪರಿಯ ಧೂಪವಾಸನೆಗಳನ್ನಿತ್ತಾಗ ದಿವ್ಯಾಂಬರಗಳನುಡಿಸಿ ॥
ವರಭೂಷಣಂಗಳನಲಂಕರಿಸಿ ಪಾಡುತಂ ।
ತರುಣಿಯರ್ಮೂರ್ತಿನಾರತಿಯೆತ್ತಿ ಸತ್ವರದಿ ।
ಕರೆತಂದು ಮಣಿಖಚಿತಗದ್ದುಗೆಯ ಮಸ್ತಕದೊಳೊಲವಿನಿಂ ಕುಳ್ಳಿರಿಸಲು ॥ (29)

ಅನುಪಮಾನಂದಂ ನಿರೀಹನಿರ್ಲೇಪಕಂ |
ಮನುಜರಂದದಿ ಸಕಲಶೋಭನಕ್ರಮುಗಳ-|
ನ್ನನುಕರಿಸಿ ಪಾಕನಂತಿರ್ದ ಪಾಕಾಹಿತನಮುಸ್ತ್ರನ್ಯಸ್ತಾಂಘ್ರಿಯುಗಳ ||
ಅನಿತರೊಳು ಜನಕನಾಜ್ಞೆಯೊಳ್ಪೈದಿ ಸುದತಿಯರ್ |
ಕನಕಲತಿಕಾಂಗಿಕಾಮಿನಿಯರಸಿಸೀತೆಯಂ |
ವಿನಯದಿಂ ಸಿಂಗರಂಗೈಯಲಿಚ್ಛಿಸಿದರದನೇನೆಂಬೆನದ್ಭುತವನು || (30)

ವಿಧುಮುಖಿಯದೊರ್ವೆ ಸೌವರ್ಣಪೀಠಾಗ್ರದೊಳ್ |
ಮುದದಿಂದ ಕುಳ್ಳಿರಿಸಿ ಮುತ್ತಿನಕ್ಷತೆಯಿಟ್ಟು |
ಚದುರಿಂದಲಾರತಿಯನೆತ್ತಿ ಕಮ್ಮೆಣ್ಣೆಯನ್ನೊತ್ತಿ ಪನ್ನೀರಿನಿಂದ ||
ಮದ (ನ)ನಾಜ್ಞೆಯಲಿ ಯೌವನರಾಜ್ಯದಭಿಷೇಕ |
ವಿಧಿಯರಚಿಸುವ ತೆರದಿ ಮಜ್ಜನಂಗೈಸಿ ಶುಭ |
ವದನೆಯಪರ್ಾಡಿ ತಿಗುರಿಕ್ಕಿ ಭೂಷಣಗೈಯ್ಯಲೆಳಸಲೊರ್ವಳ್ನುಡಿದಳು || (31)

ಕುವಲಯವ ಮೋಹಿಸುವ ಸೊಬಗಾಂತ ಶಶಿಲೇಖೆ |
ಗವಿರಳದ ಪೊಳಪ ರಚಿಸುವುದೆಂತು ನಾರಿಯರ |
ನಿವಹದಧಿಪತಿಯಿೂ ಮೃಣಾಳಕೋಮಳೆಸಹಜಸೌಂದರ್ಯನಿಧಿಗೆ ನಯದಿ ||
ತವಕದಿಂದಾವಲಂಕರಿಪುದಿದು ಮಾಂಗಲ್ಯ |
ನವನವೋನ್ಮೇಷಪೋಷಣಬೀಜಮಲ್ತೆ ಮಣಿ |
ನಿವಹದೊಳ್ ಸಂಜಾತ ಜಾತರೂಪಾಂಗಮಂ ಸುರಭಿಳಿತಗೈವಂದದಿ || (32)

ಮತ್ತೇಭಗಮನೆಯಳ [2]ಮುಸ್ತ(ಕದ) ಭೂಷಣ-|
ಕ್ಕುತ್ತಮದ ಭೂಷಣಾಯತಮಾಗವಿನ್ನಿವಕೆ |
ಬಿತ್ತರದ ಶೋಭೆಯನ್ನೀವುವೀ ಭೂಷಣಗಳೆಂಬುದಂತಿರಲಿ ಬಳಿಕ ||
ಕತ್ತುರಿಯ ಗಂಧಿಯಂಗಾಂಗಸುಂದರರಾಶಿ |
ಯೊತ್ತಿನಲಿ ಸೇರಿ ಸೇವಿಸಿ ದಿವ್ಯಕಾಂತಿಗಳ |
ಮೊತ್ತಮಂ ಪಡೆದುವೀ ಭೂಷಣ ಗಳೆಂದೊರ್ವೆ ನುಡಿದಳತಿಚತುರತೆಯಲಿ || (33)

ನೀಲತೃಣ ಚರ ಮೇಘಜಾಲಕ್ಷಣರುಚಿ ಭೃಂಗ |
ಸಾಲವೀಕ್ಷಿಸೆ ಚಪಲ ಕಜ್ಜಲದ ಕಾಂತಿಕ-|
ಣ್ಣಾಲಿಯೊಳ್ ಬೀಳ್ವನಿತು ಪಸುಗಳಿಂದ ಪುರಸ್ಕೃತಾಖ್ಯಚಾಮರಕೆ ಬಳಿಕ(?) ||
ಲೋಲಕುಂತಳಕೆ ಪಾಸಟಿಯಲ್ಲವೆಂದು ಸ್ಮರ |
ಲೀಲೆಯಿಂ ಮಲ್ಲಿಗೆಯ ಮಳೆಗರೆದರೆನುತ ಕರ |
ಮೇಲೆಸೆಯೆ ಮೃಗಮದವ ತಳಿದು ಸಂದರಿಯೊರ್ವೆ ರಚಿಸಿದಳ್ ಧಮ್ಮಿಲ್ಲಮಂ ||

1 ಮದನಾಜ್ಞೆಯಿಂ.

2 ಮಸ್ತಮಣಿಭೂಷಣ

ಕಂದುಗು ಶಿರೀಷಸುಮ ಜಾತಿ ಜಾತಿಯನುಳಿವು |
ದಂದು ಕುಂದಸ್ಮೇರೆಯಂಗಮಾರ್ದವ ಸ್ವಪ್ನ |
ಬಂಧವಾಗಲ್ಕೆಂಬ ಕೋಮಲತರಾಂಗಕಂ ಘುಸೃಣದಿಂ ತಿಗುರಿಡಲ್ಕೆ ||
ಇಂದೀವರಾಕ್ಷಿ ರಾಜಿಸಿದಳ್ ನವೋದಿತ ಸು |
ಚಂದಿರನ ಲೀಲೆಯಿಂ ವರುಣದಿಕ್ಸತಿಸಂಧ್ಯೆ |
ಯಂದವಡೆದತಿಕೆಂಪಿನಿಂದಲಂಕೃತಿಗೈವ ಮಾಳ್ಕೆಯೊಳಗಚ್ಚರಿಯೆನೆ || (35)

ನವಕಿಸಾಲದಲಿ ಕಂಕೇಳೀಲತಾಶೋಭೆ |
ಯವಿರಳವಿರಾಜಿಪೊಲು ಕೇಸರಸುಧೂಸರದ |
ಲವಲವಿಕೆಯಿಂದಬ್ಜ[1](ನೀಲೀಲೆ)ಯಂದದಿಂ ರಾಗಕೋಶದಿ ವಿಲೀನ ||
ಭವವಿರೋಧಿಯ ಕಣೆಯ ತೆರದಿ ರಾಗವನಾಂತ |
ಯುವತಿಗಂ ಪೊಂಬಟ್ಟೆಯನ್ನುಡಿಸೆ ಕರಮೆನಿಪ |
ದಿವಸಲಾಂಛನಗೈಂದ್ರಿ ಪೊಂಬಿಸಿಲ ತೊಡಿಸಿದಂತತಿವಿಲಾಸಾತಿಶಯದಿ || (36)

ಪಲ್ಲವಕಲೋಭದಿಂದೈತಂದು ಪಕ್ಕಾಗೆ |
ಪಲ್ಲವವನೀಕ್ಷಿಸುತ ಪದ್ಮಿನಿಯು ನಿಜರಾಗ |
ವೆಲ್ಲಮನ್ನೀದು ತತ್ತಳದಿ ರೇಖಾರೂಪವಾಗಿ ರಾಜಿಸುವ ಪದಕೆ ||
ಚೆಲ್ಲೆಗಣ್ಣಬಲೆಯುರಲಕ್ತಕವ ಸೂಚಿಸಿದ |
ರಲ್ಲಿ ಕರಮೆಸೆದುದಖಿಳಾಮರಶಿರೋನಿಚಯ |
ದಲ್ಲಿರ್ಪ ಮಣಿರೋಚಿಯುಕ್ತವಾಗೆಸೆವಂತೆ ತೋರ್ದುದು ಭವಿಷ್ಯಾರ್ಥಮಂ|| (37)

ಕರಿಗಮನನಮಂ ನಿರಾಕರಿಸಿತೀ ಸುಗತಿಯೆಂ |
ದರಿದು ಪಂಸೆಗಳೈದಿ ಪದಚಲನೆಯಂ ಮರೆಯೆ |
ಸ್ಮರಮೆಚ್ಚಿ ಬಿರುದಿನಂದುಗೆಗಳರ್ಪಿತಗೈದನೆಂಬಂತೆ ನೂಪುರಗಳ ||
ಭರದಿಂದಲಂಕರಿಸಿ ಚರಣಾಬ್ಜದ ಮರಂದ |
ಸಿರಿಯಾನುರಾಗಕೈತಂದ ಷಟ್ಪದತತಿಯ |
ತರುಣಸುಕರೀರವನೊಯೆನೆ ಮಂಜುಮಂಜೀರಸಿಂಜಾರವಂ ತೋರ್ದುದು || (38)

ಮನಸಿಜನ ಮತ್ತೇಭಮಸ್ತಕದ ಸಂಪದವ |
ಕಿನಿಸಿನಿಂ ಸೆಳೆದುದೀ ಘನಜಘನಮೆಂತೆಂದು |
ವನಿತೆಗಾ ಸೌವರ್ಣದಾಮಮಂ ತೊಡಿಸಲ್ಕೆ ಬೆಡಗಾಂತು ರಾಜಿಸಿದುದು ||
ತನುವಿನತಿಸೌಂದರ್ಯಲಹರಿಯ ಸುತೀರದೊಳ್ |
ವಿನುಗಿಡುವ ಮಾಧುರ್ಯರಸಕಲಿತನೀರ್ವಕ್ಕಿ |
ಯನುದಿನಂ ರವಗೊಡುವವೊಲ್ಕಿಂಕಿಣೀಗಣದ ನಿಃಸ್ವನಗಳೇಂ ತೋರ್ಪುವೊ || (39)

---

1 ಲವಲವಿಕೆಯಿಂದಬ್ಜಗಿನೀಲಿಯಂದದಿ. (?)

ಕರಿಗಳುರುಯಶವಿಭವಮಂ ತಳ್ತು ರಂಭಾದಿ |
ಸಿರಿಯು ಕರವಿಡಿದೂರುಗಳಿವೆನುತ ಮೃಗರಾಜ |
ಶಿರದಿ ಮಂಡಿಸೆ ಗಮನಮಂದವೆಂದೆನಿಸಲ್ಕೆ ಚಿಂತೆಯಂ ತಾಳ್ದು ಲಗ್ನಂ ||
ಭರದಿ ಪುಷ್ಕರಕಡರಿ ಪಿಡಿಗಡಕವಾಯ್ತೆಂದು |
ತರುಣಿಯರು ವಿನಯದಿಂ ಸಂತೈಪರೋಯೆನಲ್ |
ಮೆರೆವ ಕಾಂಚೀದಾಮುಮನ್ನೊರ್ವೆ ಸಿಂಗರಂಗೈದಳತಿಬೆಡಗಿನಿಂದ || (40)

ಗುರುನಿತಂಬಾತಲದಿ ವರನಿತಂಬಾಶ್ರಯದಿ |
ಮೆರೆವ ವಿದ್ಯುಲ್ಲೇಖೆಯಂತೆ ಮಣಿಮೇಖಲೆಯು |
ಮಿರುಗುತಿರೆ ಹೃನ್ಮಯೂರಂ ನಟಿಸೆ ಸಂತತಂ ಕಾಂತ ಸೌವರ್ಣಮಯದ ||
ಕಿರುಗಂಟೆಯುಲಿಯು ಕೇಕಾಭೇದಮೆಂದರಿತು ।
ಮರುಗಿ ನಾಭೀವಿವರದಿಂ ಪೊರಟು ಕುಚಗಿರಿಯ |
ಸರಿಸಕೈದುವ ನೀಲಪನ್ನಗನೊಯೆನೆ ರೋಮರಾಜಿ ಮೋಹಿಸುತಿರ್ದುದು|| (41)

ಕಮಲಾಕ್ಷ ಕಲ್ಪದೊಳಗಿಹ ತಾಣನ್ಯಗ್ರೋಧ |
ವನುಮು ತತ್ಕಾಂತಿಯಂ ಸೆಳೆದುದೀ ತೆಳ್ವಸಿರ |
ವಿಮಲ ಸೌಂದರ್ಯಲಾವಣ್ಯ ವಾಪೀರೂಪವಾಂತು ನಾಭಿಯು ರಾಜಿಸೆ||
ಸುಮಬಾಣ ನಿಟ್ಟಿಸುತ ಮೂಲೋಕದೊಳ್ ಚೆಲುವ |
ಸಮನಿಸಲ್ಕುಪಮೆ ದೊರಕೊಳದೆಂದು ನಮಿಸುತಂ |
ರಮಣಿಯುದರದೊಳು ಕಣೆಗೆಳನಿಟ್ಟನೋಯೆನಲ್ ತ್ರಿವಳಿ ಕರಮೆಸೆದಿರ್ದವು ||

ತನುವಿನುರುಲಾವಣ್ಯಲಹರೀತರಂಗಗಳು |
ಮನೆಬೆಳಗೆ ತ್ರಿವಳಿ ಮನ್ಮಥ ಸಿದ್ಧಸದ್ರತ್ನ ।
ವನು ತೆಗೆಯಲಿಳಿವನೆನೆ ಪೊಕ್ಕುಳೆಸೆದಿತ್ತು ಮೇಖಲೆಯ ನೀಲೋಪಲಗಳ |
ಘನಕಾಂತಿಯುನ್ಮುಖಮುದಾಯ್ತೊಯೆನೆ ಬಡಬಾಸೆ ।
ಮಿನುಗಿದುದು ಮೋಹನದ ಕಣಿಯ ಕಾಂತಾಮಣಿಯ |
ಜನಕಜಾತೆಯ ಸೌಕುಮಾರ್ಯಮಂ ನುತಿಗೈಯಲೆಂತಹುದಹೀಂದ್ರನಿಂಗೆ ||

ಪೊಳೆವ ಸುಮಗುಚ್ಛಕಂದುಕಸಿರಿಯ ಪಳಿದು ಶ್ರೀ |
ಫಲದ ಸಂಶೋಭೆಯಂ ಧಿಕ್ಕರಿಸಿ ಬಳಿಕ ಪೊಂ |
ಗಲಶಗಳ ಜೋಡೆನಿಸಿ ಚಕ್ರಗಳ ವೈಭವದೆ ರಾಜಿಸುವ ಸ್ತನಯುಗಳಕೆ ||
ಎಳೆವಿಸಿಲ ತೊಡಿಸಿದಂತೊರ್ಪೆ ಪೊಂಗುಪ್ಪಸವ |
ನಳವಡಿಸೆ ವದನೇಂದುರುಚಿಯಿಂದ ನೀಂ ಭಯದಿ |
ಕಳವಳಿಸಬೇಡವೆಂದೆನುತಮುಭಯವನಿತ್ತಳೀವೇಳ್ವೆನತಿಶಯವನು || (44)

ಪತಿಯುದಿಪನೀ ಕನಕಗಿರಿಗಳೊಳಗಂ ಮುನ್ನ |
ಲತಿಶಯದಿ ನೆಲೆಯ ಸಿಂಗರಗೊಳಿಪೆವೆಂದು ಸಂ ।
ಗತಿಯಿಂದ ತಾರಾಸಮೂಹಮೇಂ ಬಂದಿಹವೊ ಲಾವಣ್ಯಧುನಿಯ ಜಲವು ||
ವಿತತಕುಚಪುಲಿನತಟದೊಳ್ಬೀಳೆ ಸೀಕರದ |
ತತಿಗಳೇಂ ಕೆಲಕೆ ಸಿಡಿದುವೊಯೆನಲ್ ಮೌಕ್ತಿಕದ |
ಕತಿಪಯ ಸುಹಾರಗಳನೊರ್ವೆ ಸಿಂಗರಗೈದಳತಿಚಿತ್ರಮೆಂಬೊಲಾಗ || (45)

ಮಾರಪಾಶಂಗಳನ್ನಿಳಿಗೈದು ಕುಸುಮುಸುಕು |
ಮಾರಮಾಲಿಕೆಗಳಂ ಮ್ಲಾನಮೈದಿಸಿ ಲತಾ |
ಚಾರುತ್ವಮನ್ನಚಾರುತ್ವಮೆನಿಸುತ ಮೃಣಾಳಗಳ ರುಚಿಯನ್ನು ಸೆಳೆದು ||
ನಾರಿಯ ಭುಜಾಕಲ್ಪಲತೆಗೆ ಮುತ್ತಿನ ದಿವ್ಯ |
ತೋರಕಂಕಣಗಳನಲಂಕರಿಸೆ ಸ್ಮರಕರಿಯು |
ದಾರಹಸ್ತಾಗ್ರದೊಳ್ ಬಿಸಕಾಂಡಮಂ ಮೋಹಿಪೋಲದೇಂ ರಂಜಿಸಿದುದೊ ||

ಇವಳ ಭುಜಲತೆಗಳಿವು ನವಕುಸುಮಮಾಂತೆಸೆವ |
ವವಿರಳದ ಹರುಷದಿಂದೆಂದೊರ್ವೆ ಮೌಕ್ತಿಕದ |
ಸುವಿಮಲದ ಕಾಂತಿಯುತವಲಯವನ್ನಳವಡಿಸಲಿನ ಋಕ್ಷಸಂತತಿಗಳ ||
ತವಕದಿಂ ನಿಜಕರದಿ ಕಿಳ್ತು ಪುಂಜೀಕರಿಸಿ |
ಯುವತಿಯಹ ನಳಿನಿಗಿತ್ತನೊ ಮಹೀತಳದೊಳನೆ |
ನವಮೋಹನಾಂಗಿಗೀ ಕರಭೂಷಣಮುದೇನು ಚೆಲ್ವಾಂತು ಮೋಹಿಸಿದುದೊ|| (47)

ಕಿರಿದೆರೆದ ಗರಿವೂಗಳೆನೆ ನಖದ ರುಚಿಗಳುಂ ।
ಮೆರೆಯೆ ಪೂಗಣೆಗಳನ್ನಿಳಿಗೈದವೀ ಸತಿಯ |
ಬೆರಳುಗಳ್ ತ್ರಿಜಗಮಂ ಜಯಿಸುವೆಡೆಯೊಳಗನ್ಯಸಾಧನಗಳೇತಕೆನುತ ||
ಸ್ಮರ ಮೆಚ್ಚಿ ವಿಜಯಮುದ್ರಿಕೆಗಳಿತ್ತನೊಯೆನಲ್ |
ಪರಳುಂಗುರಗಳ ಸಿಂಗರಗೈದಳೊರ್ವೆ ಶುಭ |
ಕರವ ಸುರನಿಚಯಕ್ಕೆ ಕರೆವ ಸುರಧೇನುವೆನಲೇನೆಂಬೆನಚ್ಚರಿಯನು || (48)

ಬೆದರಿಸಿ ಮೃಗೀನಯನಪಂಕ್ತಿಗಳ ಖಂಜನಗ |
ಳದುರಿಸಿ ಕುವಾಲಂಗಳಾತ್ಮತೆಯನಾಂತೆಸೆವ |
ಚದುರೆಯಂಬಕದೊತ್ತಿನಲ್ಲಿರ್ಪುದುಚಿತಮೊ ಚಂದ್ರಬಿಂಬಂಗಳೆನುತ ||
ವಿಧುಮುಖಿಗೆ ಮುತ್ತಿನೋಲೆಗಳನಿಡೆ ಶ್ರೀಕರಾ |
ಭ್ಯುದಯಶುಕ್ತ್ಯಾಕಾರಶ್ರುತಿಯುಗಳ ತಾರೆನುತ |
ಮುದದಿಂದಲೈತಂದು ಸೇವಿಪುವೊಯೆನೆ ಚಿತ್ರತರದಿಂದ ಕಂಗೊಳಿಪುವು || (49)

ಲಲನಾಶಿರೋಮಣಿಯ ಮುಖತುಹಿನಕಿರಣನಂ |
ನಲವಿಂದ ಬಯಸಿ ನಡೆತಂದ ತಾರಾಗಣದ |
ಚೆಲುವ ಗೊಂದಣಗಳಿತ್ತರದಿ 'ನಿಂದಿರ್ಪವೋಯೆನೆ ಶ್ರವಣಭೂಷಣಗಳು ॥
ಲಲಿತಧಾವಳ್ಯಸುಕಟಾಕ್ಷಚ್ಛಟಾರಾಶಿ |
ಬಲಿಯೆ ಭಯಗೊಂಡು ಗಂಡಸ್ಥಳವ ಪ್ರಾರ್ಥಿಪವೊ |
ಲಲಿತಶ್ರುತಿಕಲಿತಭೂಷಣಕಾಂತಿನಿಚಯಮೆನಲಚ್ಚರಿಯೊಳೇನೆಂಬೆನು | (50)

ರತಿಪತಿಯ ನೇಮದಿಂದಖಿಳಜನಸಂದೋಹ |
ಮತಿಶಯದ ಮೋಹನಂಗೊಳುವ ಯಂತ್ರವನು ಸಂ |
ಗತಿಗೊಳಿಪೆನೆಂದೊರ್ವೆಯ್ಯೆಣಮದದಿಂ ಮಕರಿಕಾಪತ್ರವಂ ರಚಿಸಲು ॥
ಶ್ರುತಿಕಲಿತಕುವಲಯಮರಂದರಾಗದಿ ಭೃಂಗ |
ತತಿಗಳೈತಂದೀ ಕಪೋಲಯುಗಳದಲಿ ಸ-|
ನ್ಮತಿಯಿಂದ ನೆಲಸಿರ್ಪವೋಯೆನಲ್ ಮೃಗಮದದ ಪತ್ರ ರಾರಾಜಿಸಿದುದು॥ (51)

ಕತ್ತಲೆಯು ಮತ್ಕಿರಣಕರ್ತರಿಯ ಘಾತದಿಂ |
ಕತ್ತರಿಸಿ ಬಂದು ಮತ್ತೇಭಯಾನೆಯ ಮಸ್ತ |
ದೊತ್ತನಾಶ್ರಯಿಸಿ ಕುಂತಲರೂಪಿನಿಂದಿ[1](ರ್ಪುದ)ರಿನಿಚಯಮೆಂದು ಕಿನಿಸಿಂ ॥
ಮತ್ತೆ ವದನೇಂದು ಚಂದಿರನು ಮೇಲ್ಭಾಗಕ್ಕೆ |
ತೆತ್ತಿಸ[2](ಲ್ಬಿರಿವುತಿ)ಬ್ಬಗಿಯಾದುದೋಯೆನ-|
ಲ್ಕುತ್ತಮದ ಸೀಮಂತ ಸಿಂದುರದಿ ರಾಜಿಸುವೊಲೆಸಗಿದಳದೊರ್ವೆ ನಯದಿ॥ (52)

ಚೆಲುವನಯನಾಕಾರವೆತ್ತ ಶಫರೀಯುಗವ |
ನೊಲವಿಂದ ಪಿಡಿಯೆ ಮನ್ಮಥಶಬರ ಸೂತ್ರಸಂ |
ಕಲಿತವಡಿಶವನು ಮುಖಸೌಂದರ್ಯಲಹರಿಯುಂ ಪರಿವಪ್ರವಾಹದಲ್ಲಿ ॥
ನಲವಿಂದ ಬಿಟ್ಟಿರ್ಪನೋಯೆನಲ್ಕುರುವಿಂದ |
ಕಲಿತಸೀಮಂತಭೂಷಣವ ಸಿಂಗರಗೈದ |
ಳೊಲವಿಂದಲೊರ್ವೆ ಬಿಸುಗದಿರನಿಂ ಚಿಕುರತಮ ಸೆರೆಯಾಳ್ದುವೋಯೆನಲ್ಕೆ॥ (53)

ಶಶಿಮುಖಿಗೆ ಮತ್ತೊರ್ವೆ ಸುಪ್ಪಾಣಿಮೂಗುತಿಯ |
ಸಸಿನೆ ತಂದಿಡಲು ಚಂಪಕಸುನಾಸಿಕದಲ್ಲಿ |
ಪೊಸತೆನಿಸಿತೇನೆಂಬೆ ಬಿಡುಗಣ್ಣಜಂಗುಳಿಗೆ ಕೊಡದಿರೀ ರಸವನೆಂದು ॥
ಬೆಸಗೊಳಲ್ಬಂದ ಕವಿಯೋಲವನ ರೂಪಾಂತ |
ಶಶಿಯೊಡನೆ ಪುರುಷರತಿಯಾಂತ ಮೋಹಿನಿಯೊ ಈ |
ವಸುಮತಿಯೊಳು ಸುಮಾಸ್ತ್ರನಿರ್ಮಿತದ ಮೋಹನದ ಘಟಿಕೆಯೋಯೆನೆ ಬೆಡಗಿನ ॥

---

1 ನಿಂದಿರ್ಪವರಿನಿಚಯಮೆಂದು.

2 ತೆತ್ತಿಸಲ್ಬೆರಿದುದಿಬ್ಬಯಾದುದೊ.

ನಗಚಾಪಮುಕುಟತಟವಿಲಸಿತಸುರತ್ನಕಂ |
ಮಿಗೆ ಕಳಂಕಿಯೆನಿಪ್ಪೆಯೆಂದೊರ್ವೆ ಬೇಗದಿಂ |
ಮೃಗಮುದಲಲಾಮುಮಂ ರಚಿಸಿದಳ್ ನೊಸಲೊಳಗೆ ತ್ರೈಜಗಂ ಮೋಹಿಸುವೊಲು ||
ಪಗಲಿರುಳ ಭೇದಮಿಲ್ಲದೆ ಸುಖದೊಳಿಹೆನೆಂದು |
ಸೊಗಸಿಂದ ಬಂದ ಮಧುಕರಪಂಕ್ತಿಯೋ ಸುರರ |
ಬಗೆಗೊಳದ ಮೀನಕೇತನನೋಜವೋಯೆನಲ್ ಬೆಡಗಾಂತು ರಾಜಿಸಿದುದು|| (55)

ಕಡಲೊಳಗೆ ಪುಟ್ಟಿ ಕರ್ಣಗಳ ಭೇದಿಪ ರವವ |
ಪಡೆದುದೆನ್ನುತ ಶಂಖಪೂಗಮಂ ಧಿಕ್ಕರಿಸು |
ತೊಡನೆ ತಂತ್ರೀಸ್ವನದ ಸಹಜಾತಮಂದಿರವನಾಂತಸೆವಡಳುಕದೊರ್ವೆ ||
ಸಡಗರದ ಬಜ್ಜರದ ಮಣಿಗಳೇಕಾವಳಿಗ |
ಳುಡುಗಣೋಪಮಿತಮುಕ್ತಾನಿಚಯದಿಂದ ಸಂ |
ಘಟಿತರುಚಿರದ ಹತ್ತೆಗಟ್ಟುಮುಂತಾದುವಂ ತೊಡಿಸಿದಳ್ ಚೆಚ್ಚರದಲಿ || (56)

ಪೊನ್ನಪೂವುಗಳ ಬಜ್ಜರದ ಬಾವುಲಿಗಳಂ |
ಚೆನ್ನೆಸೆವ ಮುತ್ತಿನೆ[1](ಳೆಗಳನು) ಶ್ರುತಿಯುಗಳಕಂ |
ಚೆನ್ನಾಗಲಂಕರಿಸಿ ಕೇಯೂರ ತೋಳ್ಪಾತಿಮಣಿಗಳಂ ಕಟ್ಟಿ ಬಳಿಕ ||
ಕನ್ನೈದಿಲೋಪಮಾಂಬಕಗಳಿಗೆ ಕಜ್ಜಲವ |
ನನ್ನಿಯಿಂದ್ದಚ್ಚಿ ನಾರಿಯದೊರ್ವೆ ಬೇಗದಿಂ |
ಕನ್ನಡಿಯ ಪೋಲುವ ಕಪೋಲಂಗಳಿಗೆ ಚೆಲ್ವಕಾಡಿಗೆಯನಿಟ್ಟಳೊಲಿದು || (57)

ಮುಸೆದಲರ ಕಣೆಗಳನುಮಕ್ಷಿಯುಗ ಧಿಕ್ಕರಿಸೆ |
ಶಶಿಯನೆಕ್ಕರಿಸೆ ಮುಖಪಂಕೇಜ ಕೋರಕಗ |
ಳಸಮುವೆನ್ನುತಲಧಃಕರಿಸಲ್ಕುರೋಜಯುಗ ಕುಂಭೀಂದ್ರಕುಂಭವನ್ನು ||
ಸಸಿನೆ ನಿಂದಿಸೆ ಜಘನ ತೊಡೆಗಳುಂ ಬಾಳೆಗಳ |
ಬೆಸನಿತ್ತು ಬಳುಕಿಸಲ್ ಕಿಸಲಯವ ಮೆಲ್ಲಡಿಗ |
ಳಸಿಯೆನಿಸಲಾ ನಾರಿ ತೋರಿದಳ್ ಸನ್ಮೋಹನಾಕಾರವೆತ್ತಂದದಿ || (58)

ಸುರಪಸತಿಸಾವಿತ್ರಿದಿಕ್ಪಾಲಸತಿಯರುಂ |
ನೆರೆದಲಂಕರಿಸೆ ಮುಲೋಕದಿಷ್ಟಾರ್ಥಮಂ |
ಕರೆದೀವ ನೂತನಸರೋಜಮಂದಿರೆಯಂತೆ ಧರಣೀತನೂಜೆಯಿರಲು ||
ಹರಿವಿರಿಂಚಿಪ್ರಮುಖದೇವತೆಗಳುಂ ಮೌನಿ |
ವರರಾಜ ಜನಕನೃಪನಂ ಕರೆದು ಪೇಳಿದರ್ |
ಕರಿಸು ಸಿಂಗರಿಸಿ ರಘುವೀರನಂ ಮಂಟಪಕೆ ಬರಿಸವೇಳ್ಕೆಂದು ನಯದಿ || (59)

1 ಮುತ್ತಿನೆಂಟೆಗಳ.

ಎನೆ ಜನಕನನುಜಾತನೊಡನೆ ಪೇಳಿದ ಸಕಲ |
ಜನರುಸಹ ನೀಂ ಪೋಗಿ ಮನುವಂಶಕೇತುತ-|
ಜ್ಜನಕಬಾಂಧವರುಸಹ ಬೇಗದಿಂ ಕರೆತಹುದೆನಲ್ಕೆ ಸಂತೋಷದಿಂದ ‖
ಮುನಿಜನವ ಮಂತ್ರಿಗಳನೊಡಗೊಂಡು ತವಕದಿಂ |
ಜನಕಪೇಳ್ದಂದದಿ ಕುಶಧ್ವಜನು ನಡೆತಂದ -|
ಘನನಿಭಶರೀರಶ್ರೀ**ರಾಮಪುರ**ದಧಿನಾಥನಿಪ್ಪ ನಿಜಮಂದಿರಕ್ಕೆ ‖ (60)

ಸಂಧಿ 21ಕ್ಕಂ ಪದಂಗಳ್ 1274

---

# ಇಪ್ಪತ್ತೆರಡನೆಯ ಸಂಧಿ

ಸೂಚನೆ ‖ ಶ್ರೀರಮಣನಖಿಳಲೋಕಾನುಗ್ರಹಾರ್ಥದಿಂ |
ಮಾರಹರಮುಖ್ಯಸುರರೆಡೆಯಲಾನಂದದಿಂ | [ಭೂತಳದೊಳು ‖
ಚಾರುಧರಣೀಸುತೆಯ ಮದುವೆಯಾದಂ ಮನುಜ ಲೀಲೆಯಿಂ

ಅವಧರಿಪುದಖಿಳಮುನಿಗಳಿರ ಮಿಥಿಲೇಶಸಹ |
ಭವಕುಶಧ್ವಜನಾಗ ಗೌತಮಾತ್ಮಜಸಹಿತ |
ಮವಿರಳಾನಂದದಿಂದೈತಂದು ದಶರಥಮಹೀಶಗಗ್ರಜ ಪೇಳ್ದೊಲು ‖
ವಿವರವಾಗರಿಪಲ್ ವಸಿಷ್ಠಾನುಮತದಿಂದ ।
ತವಕದಿಂ ವೈವಾಹಮಂಟಪಕೆ ಗಮಿಸುವಡೆ ।
ಕುವರರನಲಂಕರಿಸಿ ಕರವಿಡಿದು ನಡೆತಂದನಾ ಗೃಹದ್ವಾರಕೊಲಿದು ‖ (1)

ರಾಮ ಶತ್ರುಂಜಯಸುಸಾಮಜವನಡರಿ ಬ-।
ರ್ಪಾ ಮಹೋತ್ಸವವಿಭವಮನ್ನೋಡಲೈತಂದ ।
ತಾಮರಸಭವ ನಿಲಿಂಪಾಧೀಶದಿಕ್ಪಾಲಮನುತಪೋಧನರುಸಹಿತ ‖
ಪ್ರೇಮದಿಂದೆಡಬಲದಿ ನಿಂದು ನಿಟ್ಟಿಸೆ ಶಚೀ ।
ಕಾಮುಕಂ ವಿನಯದಿಂ ಹಸ್ತಲಾಘವವೀಯ ।
ಲಾ ಮಹಾಸಭೆ ನುತಿಸೆ ಪಳೆವಾತಿನಿಂದಬ್ಧಿ ಘೋಷಿಪಂದದಿ ನಲಿಯುತ ‖ (2)

ಗುರುಗಳನುಮತಿಯಿಂದ ಮತ್ತೇಭಮಸ್ತಕದ ।
ಲರವಿಂದನಾಭರಘುಕುಲತಿಲಕ ಮಂಡಿಸಲ್ ।
ಸುರರು ಜಯಜಯನಿನಾದದಿ ಕುಸುಮವೃಷ್ಟಿಯಂ ಕರೆಯೆಭೋರ್ಮೊರೆಯೆವಾದ್ಯ‖
ಭರತ ಚಾಮರವಿಡಿಯೆ ಶತ್ರುಘ್ನ ಸತ್ತಿಗೆಯ ।
ಸರಿಸದೊಳಗಾಂತು ಬರೆ ಸೌಮಿತ್ರಿ ಶರಚಾಪ ।
ಧರನೆನಿಸಿ ಪಾರ್ಶ್ವದೊಳಗೋಲೈಸುತೈತರಲ್ ಸಾನಂದವಿಭವದಿಂದ ‖ (3)

ಒಡನೆ ಬಹ ಧರಣೀಶಮುಕುಟಮಣಿಗಣರುಚಿಗ ।
ಳೊಡನೆ ಪರಕಲಿಸೆ ದಿನಕರನಿರೀಕ್ಷಣೆಯಿಂದ ।
ಸಡಗರದಿ ನಗುವ ಸಿತಪಂಕೇಜತತಿಗಳೆನೆ ಶ್ವೇತಾತಪತ್ರನಿಚಯ ॥
ಬೆಡಗೆನಿಸಲೊಂದೆಸೆಯ ಚಾಮರವ ಬೀಸುತಿಹ ।
ಬೆಡಗಿಯರ ದೃಗ್ಧಾಳಧಾವಳ್ಯಮಿತ್ತರದಿ ।
ಮೃಡಶಿರೋಮಾಲಿಕೆಸುರಾಪಗೆಯು ಕವಲಾಗಿ ಸೇವಿಸುವೊಲೇನೆಸೆದುದೊ॥ (4)

ಒಂದೆಸೆಯ ಪಟಹಡಿಂಡಿಮಮೃದಂಗಾದಿಗಳ ।
ದೊಂದೆಸೆಯ ಢಕ್ಕಾಹುಢಕ್ಕಾದಿ ವಾದ್ಯರವ ।
ವೊಂದೆಡೆಯ ಸುಷಿರಕಾಂಸ್ಯಾದಿ ಭೇರೀರವಗಳಧಿಕಕಹಳಾನಿನಾದಂ ॥
ಸಿಂಧು ಘೋರ್ಮೊರೆವಂತೆ ದಶದಿಶೆಯನಾಕ್ರಮಿಸೆ ।
ಮುಂದೆ ಸಂದಣಿಸಿ ಕೈಯೆತ್ತಿ ಪೊಗಳುವ ಮಂದಿ । [ಪೇಳ್ವುದೇಂ] ॥ (5)
ಗೊಂದಣದ ಕಲಕಲದೊಳಾಯ್ತು ಶಬ್ದಾದ್ವೈತ ಮೂಲೋಕ[1](ದೊಳ್

ಕನಕಮಯವಸ್ತು[2](ವೊಡವೆಯ) ಭರಣಿಗಳ ಪಿಡಿದು ।
ಕನಕಲತಿಕಾಂಗಿಯರ್ಕೆಲರಿಕ್ಷುಖಂಡಗಳ ।
ನನೆಗಣೆಯನಿಂಗುಪಾಯನಗೈದ ಮಾಳ್ಕೆಯೊಳ್ ಕೆಲರು ಮಣಿಭೂಷಣಗಳ ॥
ಜನಿಸಿನ ಕರಂಡಗಳ ನೂತನಾಂಕೂರಗಳ ।
ವನಜಕುಸುಮಂಗಳಿಂದಲಿ ಪುದಿದ ಭಾಜನಗ ।
ಳನು ಪಿಡಿದು ಕೆಲರು ಜವ್ವನೆಯರಾ ಮತ್ತೇಭದೆಡೆಬಲದೊಳೈತಂದರು ॥ (6)

ತುರಗಗಳನಡರಿ ಕರತಳದಿ ಮಿಸುನಿಯ ದಂಡ ।
ವರಕಶಾಕಾಂಡಗಳ ಪಿಡಿದು ಮುಂದೈತಪ್ಪ ।
ಧರಣೀಧರಾಗ್ರಣಿಗಳನ್ನಲಿವ ಧೈರ್ಯಯುತ ರಾಜಾಧಿರಾಜರಿಂದ ॥
ಸರಭಸದೊಳುಂಬರಾಬರಿಗೈವ(?)ಸಾಸಿಗರ ।
ಸುರುಚಿರಪತಾಕಾಳಿಕಲಿತಯುಶರಾಹುತರ ।
ನೆರವಿಯುರುಕಲಕಲಾರವ ದಿಗಂತವ ಪರ್ಬಿತೇನೆಂಬೆನಾ ಕ್ಷಣದೊಳು ॥ (7)

ರತುನನಡೆತೋರಣವಿಲಾಸಗಳ ಭಾಸಗಳ ।
ಸತಿಯರ ಕಟಾಕ್ಷಶರಜಾಲಗಳ ಲೀಲೆಗಳ ।
ತುತಿಗೈವ ಮಾಗಧವಿಡಾಯುಗಳ ಬೀಡುಗಳ ನಾಡುಗಳ ಪತಿಗಳಾಗ ॥
ಲತಿಶಯದಿ ಬಪ್ಪ ಕರಗುಂಪುಗಳ ಪೆಂಪುಗಳ ।
ಶ್ರುತಿಮಧುರ ಸುಷಿರರವದಿಂಪುಗಳ ಸೊಂಪುಗಳ ।
ಯತಿಜನದ ಸ್ವಸ್ತಿವಾಚಕದಿಂದ ನಲವಿಂದ ರಘುವೀರನೈತರುತಿರೆ ॥ (8)

---

1 ಮೂಲೋಕವೇಳ್ವೆನು ॥.

2. ವಸ್ತುಕಾರದ

ಕೆಲಬಲದ ಸೌಧಾಗ್ರಜಾಗ್ರನ್ನಿತಂಬಿನಿಯ ।
ರೊಲವಿನಿಂ ನಿಟ್ಟಸಲಪಾಂಗಚ್ಛಟಾರಾಜಿ ।
ಲಲಿತದಿಂಗಡಲವಂಗಡವು ಮೇಲ್ವರಿದ್ದೈದುವಂತೆ ಬೆಡಗಾಂತೆಸೆಯಲು ॥
ಚೆಲುವಕಂಗಳ ಥಾಳಥಳ್ಯಪ್ರಭೆಯು ತುಂಬ ।
ಲಲಘುನ್ಯೆದಿಲು ಮಳೆಯ ಕರೆದಂತೆ ದರಹಾಸ ।
ದೊಲವಿಂದ ಜೊನ್ನಮುಂಬರಿದಂತೆ ನೋಟಕರಿಗಚ್ಚರಿಯ ತೋರುತಿರಲು ॥ (9)

ಸಕಲವಿಭವದಿ ನೃಪಾಲಕತನಯನೈತರಲ್ ।
ಶುಕವಾಮದೇವಾದಿಯತಿನಿವಹ ನಲಿಯುತಿರೆ ।
ಸಕಲಜನಸಹಿತ ಸಾನಂದದಿಂದಿದಿರ್ಗೊಂಡು ಭದ್ರಗಜಮುಕುಟದಿಂದ ॥
ಅಕಳಂಕಗುಣನಿಧಿಯು ಧರಣಿಗಿಳಿಯಲ್ಬೊಮ್ಮ ।
ಸುಕರಲಾಘವವೀಯೆ ನೆರೆದ ಸುರಚಾರಣ-।
ಪ್ರಕರ ಜಯಜಯವೆನುತ ನುತಿಸುತಿರೆ ರಘುನಾಥ ಪೊಕ್ಕನು ವಿವಾಹಗೃಹಮಂ॥

ತರುಣೇಂದುಮೌಳಿಯನುಮತಿಯಿಂದ ಜನಕಾಖ್ಯ ।
ನೆರೆದ ಭೂಸುರರನುಜ್ಞೆಯನಾಂತು ಸಗ್ಗಿಗರ ।
ಪಿರಿಯ ಪೌರೋಹಿತ್ಯವೆಸಗೆ ಶುಭವಿಧಿಯಿಂದ ಮಧುಪರ್ಕಮಂ ಮಾಳ್ಪರೆ ॥
ಸಿರಿಕರದ ರತುನಮಯವೇದಿಕಾಮಧ್ಯದೊಳ್ ।
ಮೆರೆವ ಮಿಸುನಿಯ ಪೀಠದಗ್ರದೊಳ್ ಸಾಕೇತ ।
ಪುರನಾಥರಘುಪತಿಯ ಕುಳ್ಳಿರಿಸಿ ಬೇಗದಿಂ ಸ್ವಸ್ತಿವಾಚನಗಳೆಸಗೆ ॥ (11)

ವಸುಮತೀಯರಸ ಸಂತಸದಿಂದ ಮಂದಾರ ।
ಕುಸುಮಮಾಲಿಕೆಯನ್ನಲಂಕರಿಸಿ ಗ್ರೀವಕಂ ।
ವಸುಮಯದ ಭಾಜನವ ಮುಂಗಡೆಯಲಿಟ್ಟು ರಘುವೀರನ ಪದಾಬ್ಜಗಳನು ॥
ಶಶಿಕಾಂತಮಯಕಲಶಮಂ ಪಿಡಿದು ನೀರೆರೆಯ ।
ಲಸಮಶರನರಸಿಯೆನಲಾತನಂಗನೆ ಹರುಷ ।
ರಸದಿ ತುಳ್ಕಾಡುತಂ ತೊಳೆದು ಪೂಜಿಸಿದ ಮಾರಮಣನಿವನೆಂದು ತಿಳಿದು ॥ (12)

ಸರಸಿರುಹಶಂಖಚಕ್ರಾಂಕುಶಧ್ವಜವರದ ।
ವರರೇಖೆಯಿಂದಲಂಕೃತಮಾದ ಪದಯುಗವ ।
ಹರುಷದಿಂ ತೊಳೆದು ಪೂಜಿಸಿ ಶಾಸ್ತ್ರವಿಧಿಯಿಂದ ಮಧುಪರ್ಕವನ್ನು ರಚಿಸಿ ॥
ಸರಸಿಜೋದ್ಭವಶಂಕರಾಜ್ಞೆಯಿಂ ಮಿಥಿಲೇಶ ।
ಕರೆದಮಾತ್ಯನೊಳೊರೆದ ಸೀತೆಯಂ ಮಂಟಪಕೆ ।
ಕರೆತರುವುದತಿವೇಗಮೆಂದು ಸಂತೋಷದಿಂ ಸಗ್ಗಿಗರು ನಲಿವಂದದಿ ॥ (13)

ಜನಕನಾಜ್ಞೆಯೊಳಖಿಳವಿಭವದಿಂದಾ ಸಚಿವ |
ವನಜಾತಮಂದಿರೆಯ ಕರೆತರಲ್ಕೈತಂದು |
ವಿನಯದಿಂದರಮನೆಯ ಕಕ್ಷಾಂತದೊಳ್ ನಿಂದು ಪೇಳೆ ದೌವ್ವಾರಿಕೆಯೊಳು ||
ವಿನಯದಿಂದವಳೈದಿ ಬೇಗಲೆಚ್ಚರಗೈಯ |
ಲನುಮತಿಸೆ ತಾತನಾಜ್ಞೆಯ ಪಿರಿಯ ನಾರಿಯರ್ |
ಕನಕಲತಿಕಾಂಗಿಯರ್ ಕಾಮನಧಿದೇವತೆಯ ಕರೆದೊಯ್ವ ವಿಭವದಿಂದೆ || (14)

ವದನಸರಸೀರುಹದ ವೈಭವವ ನಿಟ್ಟಿಸುತ |
ಮುದದಿ ಸಂತೋಷಿಸುತ ತುಹಿನಾಂಶುಬಿಂಬಮಂ |
ಚದುರೆ ಕಿಳ್ತಂದು ನಿಜವಶಗೈವೆ ನೋಳ್ಪುದೆಂದೊರ್ವೆ ಮಣಿದರ್ಪಣವನು ||
ಸುದತಿಯ ಪುರೋಭಾಗದಲ್ಲಿ ಪಿಡಿಯಲ್ ನೋಡಿ |
ಕದಪುಗಳ ಕತ್ತುರಿಯ ಪತ್ರಗಳನೋಜೆಗೈ |
ದದುರುತಿಹ ಮುಂಗುರುಳ ಕಿರುವೆರಳೊಳೊತ್ತುತಂ ಸೀರೆ ಸಂತಸದಾಳ್ದಳು ||

ಪೊಂಗೊಡದ ವಿಂಗಡಮುರೋಜಯುಗಮುಚ್ಚ ಬೆ-|
ಳ್ದಿಂಗಳಿಂಗಡಲೂರ್ಮಿಮಾಲೆಗಳಪಾಂಗತತಿ |
ಯಂಗಭವನಂಗಮುಂಟೆನಿಪಂತೆ ಪೆರೆನೊಸಲ ಕತ್ತುರಿಯ ತಿಲಕಾಳಿಯ ||
ಸಂಗಡಿಗ ಮುಂಗುರುಳ ಸರಸರಸನೀರಧಿತ |
ರಂಗವಂಗಡವೆನಲ್ ಸವಿನುಡಿಯ ಮೋಹನತ |
ರಂಗಿತವಿಲಾಸಯುತ ಯುವತಿಯರ್ಪರಿವೇಷ್ಟಿಸಿದರು ಧರಣೀಜಾತೆಯ || (16)

ಸಕಲಾಂಗಸೌಂದರ್ಯವೆತ್ತ ಭೂಜಾತೆಯಂ |
ಸುಕುಮಾರಲಾವಣ್ಯಜವ್ವನೆಯರೊಲವಿಂದ |
ಪ್ರಕಟಶುಭಭಾಷಾಸುರಚನೆಯಿಂ ತುತಿಗೈದು ವೈವಾಹಸನ್ಮಂಟಪ ||
ನಿಕಟಕ್ಕೆ ಕರೆದೊಯ್ಯಲವಸರದಲೊರ್ವೆ ಸ-|
ದ್ಯುಕುತಿಯಿಂ ಪಾಣಿಲಾಘವವೀಯೆ ರಾಜಿಸಿತು |
ಮಕರಕೇತನನಿಟ್ಟ ದೇವತೆಗೆ ನವಕಿಸಲಯೋಪಾಯನಂಗೈದೊಲು || (17)

ರಾಜೀವವದನೆ ಸೌಂದರ್ಯಸದ್ರಸಸದನೆ |
ರಾಜಸದಿ ಕಕ್ಷಾಂತರಗಳ ಲಲನಾಜನಸ |
ಮಾಜಸಹ ಕಳಿದು ಬರೆ ಸ್ತ್ರೈಣಪದಕಟಕಗಳ ಸಿಂಜಾರವಂ ಮೊಳಗಲು ||
ಮೂಜಗವ ಜೈಸೆ ಮನ್ಮಥವೀರನಿಗೆ ಭದ್ರ |
ಭಾಜನಾಶೀರ್ವಾದವನ್ನು ಜಯಲಕುಮಿ ನಿಜ |
ನೈಜದಿಂದೆಸಗುವಳೊಯೆನೆ ತೋರ್ದುದಖಿಳಜನ ಚಕಿತಚೇತನರಾಗಲು || (18)

ಲಲನಾಶಿರೋಮಣಿಯು ಒಲವಿನಿಂದೈತಪ್ಪ |
ಕಲಕಲಾರಾವಮಂ ಕೇಳ್ದು ದೌವಾರಿಕರು |
ನಲವಿನಿಂದೈದಿ ಸಚಿವನೊಳೊರೆಯಲಾ ವಾರ್ತೆ ನಗರದೊಳ್ ಪರಿಯೆ ಕ್ಷಣದಿ ||
ಉಲಿವೊಸಗೆ ಸುಷಿರಕಾಂಸ್ಯಾದಿನಾನಾವಾದ್ಯ |
ಪಲವು ವಿಧಪಾಠಕರು ವಂದಿಸಂದೋಹ ಮುಂ |
ದೊಲಿದು ಕೈವಾರಿಸಲ್ಮೊಳಗಿದುವು ನಿಸ್ಸಾಳದುಂದುಭಿಗಳುಪಜೀವರಿಂ || (19)

ಸಿರಿ ಬಹುದ ನಿಟ್ಟಪಭಿಲಾಶೆಯಿಲ್ಲದರಾರು |
ಸಿರಿಯ ಬಯಸುವರೀ ಜಗತ್ರಯದ ಜೀವರುಗ |
ಳುರುತರೈಶ್ವರ್ಯವನಪಾಂಗಾವಲೋಕನದಿ ಬ್ರಹ್ಮಾಮರೇಂದ್ರ ತತಿಗೆ ||
ಕರುಣಿಸುವ ಲೋಕಮಾತೆಯು ಕಂಗಳಿದಿರಿನಲಿ |
ಚರಿಸುವುದ ಕಾಣಲುಜ್ಜುಗದಿಂದ ತನ್ನಗರ |
ದಿರವೆನಿಪ ಲೋಕದಿವಿಷದದಿತಿಜರೈತಂದರಮಿತಸಂತೋಷದಿಂದ || (20)

ನಗರವೀಥಿಯೊಳುಭಯ ಪಾರ್ಶ್ವಸೌಧಾಗ್ರದೊಳ್ |
ನಗೆಮೊಗದ ಯುವತಿಯರ್ ಮುಂಡಸಿಯೆ ನಸುನಗೆಯ |
ಸೊಗಸಿಂದಲಿಂಗಡಲ[1](ತಿಂಗಳನು) ಪರಪಿದರ್ ನೋಟಕರಿಗತಿಶಯಮೆನೆ ||
ಬಗೆಬಗೆಯ ವಾಹನಂಗಳನಡರಿ ದೇವತತಿ |
ಸೊಗಸಿಂದ ನೋಡುತಿರಲಲ್ಲಲ್ಲಿ ದಿಗ್ದೇಶ |
ಜಗತೀಪತಿಗಳೆಲ್ಲ ಜನಕಜಾತೆಯು ಬರವ ಹಾರೈಸುತೀಕ್ಷಿಸುತಿರೆ || (21)

ಅನಿತರೊಳು ರಾಜಸದನವನುಳಿದು ಭೂಮಿಸುತೆ |
ಕನಕಲತಿಕಾಂಗಿ ಕಾಮಿನಿಯ ಕೈಲಾಗಿನಿಂ |
ವಿನಯದಿಂದುಪಚರಿಪ ಯುವತಿಯರ ಗಡಣಮಂ ನೋಡುತತಿಸಂತಸದೊಳು ||
ಮನಮೊಲಿದು ಭಕ್ತಿರಸವೆತ್ತು ಸನ್ನುತಿಗೈವ |
ಜನರ ಕರುಣಾರಸೋತ್ಕಲಿತಸುಕಟಾಕ್ಷದಿಂ |
ಬಿನದಮೆನೆ ಮನ್ನಿಸುತಲಡಿಯಿಟ್ಟಳೇನೆಂಬೆ ಮೂಲೋಕ ನಲಿವಂದದಿ || (22)

ನಡೆಗಲಿಸೆ ಹಂಸಕಗಳಡಿಗೆ ಪ್ರಾರ್ಥನೆಗೈವ |
ಬೆಡಗೆನಲ್ ಪೊಂಗೆಜ್ಜೆ ತಡೆಯದೊಂದೊಂದಾಗಿ |
ನುಡಿಯಲಷ್ಟಾಪದಮಿಳಿಂದಸಂದೋಹಗಳ ನಾಚಿಸುವೊಲೆಸೆಯಲಾಗ ||
ಪಡೆದಾಕೆಗುಚಿತಪೂಜೆಯನೆಸಗೆ ಸಂಭ್ರಮದ |
ಲಡಿಗಡಿಗೆ ಪದಪಯೋಜಂಗಳಸ್ಪೊಣೆಗೈವ |
ಸಡಗರದೊಳವನಿಜೆಯು ಗಂಧಗಜಗತಿಯಿಂದಲೈತ[2](ರಲ)ದೇವೇಳ್ವೆನು || (23)

---

1 ಸೊಗಸಿಂದಲಿಂಗಡಲನುಂಗಡಲ

2 ಗಂಧಗಜಗತಿಯಿಂದಲೈತರುವ ವಿಭವವನದೇವೇಳ್ವೆನು ||

ಸರಸಿಜಗಳರಳೆ ಸಂತತಿಗಳಾನಂದಗೊಳೆ ।
ಪರಿಯೆ ಕುವಲಯತಾಪ ತಂಬೆಲರು ಮುಂಬರಿಯೆ ।
ಹರುಷಿಸೆ ಚಕೋರತತಿ ಚಕ್ರ ಸಂಭ್ರಮಿಸುತಿರೆ ಪಗಲಿರುಳು ಪಸರಿಸಿರಲು ॥
ನೆರೆವ ಜೋತ್ಸ್ನಾತಪ ವ್ಯಾಸಭಾವ್ಯಂ ಚಮು ।
ತ್ಕರವ ಪುಷ್ಪವತಜಂ ವ್ಯತಿಕರವ್ಯಾಸಕ್ತ ।
ಕರೆಯಲಚ್ಚರಿಗಳಂ ನಿಖಿಲರು ನಿಲಿಂಪತೆಯುಸಾಂತರಾ ಸಮಯದೊಳಗೆ ॥ (24)

ಪಸರಿಸಲು ಹಂಸಗತಿ [1](ತೊ)ಡ ವುಗಳ ಪೊಂಬಿಸಿಲು ।
ದೆಸೆದೆಸೆಯೊಳಾಕ್ರಮಿಸೆ ಕಮನಕೌಶಿಕನಿಚಯ ।
ಮುಸುಳಿಸಲು ತಾರಕೋನ್ಮೇಷಗಳ ದುರ್ವೃತ್ತರಾಜಮಂಡಲಮನೋಜ ॥
ಪೊಸಕಾಂಕ್ಷೆ ಜರುಗೆ ದ್ವಿಜತತಿಗಳ ಸುವಾಣಿ ಮುಂ ।
ದೆಸೆಯೆ ಸಜ್ಜನ ಚಿತ್ತ[2](ದಾಂತ) ಚಿಂತೆಯು ನಸಿಯೆ ।
ಕುಸುಮಾಸ್ತ್ರಮಾತೆ ಭೂಜಾತೆಯಾಗಮವೆಂಬ ಸುಪ್ರಭಾತಾಗಮದೊಳು ॥ (25)

ನಿಧಿಯಂತೆ [3](ಅ)ಂಜನಾಶ್ರಯ ಮಹಾರಾಜಸ-।
ನ್ನಿಧಿಯಂತೆ ಪದ್ಮಾನುಮೋದರಂಜಿತವಿಮಲ ।
ವಿಧಿಯಂತೆ ಶ್ರುತಿಕಲಿತಮಾಗುತನಿಮಿಷಸೇವ್ಯದಿಂದ ಸುರನಾಥನಂತೆ ॥
ಸುಧೆಯಂತೆ ಸತ್ಕಲಾಕೌತೂಹಲಾನ್ವಿತದಿ ।
ನದಿಯಂತೆ ನವರಸೋನ್ಮೇಷಕರಮಾಗುತ್ತ ।
ಸುದತಿಯುಂಬಕಗಳತಿಕ[4](ಟಾಕ್ಷಾಲೋಕದೊಳ್) ಮೋಹನದಿ ರಾಜಿಸಿದವು ॥

ಮದನಶರವಿಸರಂ ವಿಜೃಂಭಿಸಿತೊ ಮೇಣ್ ಸ್ಮರನ ।
ಅಧಿಕತರಕೀರ್ತಿ ಕೌಮುದಿಯ ಪಸರಿಸಿತೊ ರತಿ ।
ಯಧಿಪತಿಯ ರಸಸುಧಾಲಹರಿ ಮುಂಬರಿಯಿತೋಯೆನಲಪಾಂಗಪ್ರಭೆಗಳು ॥
ಚದುರಿಂದೆ ದೆಸೆದೆಸೆಗೆ ಪರಿಕಲಿಸೆ ಸೆರೆದ ಜನ ।
ಮುದದಿಂದ ನಿಮಿಷವರ್ಜಿತಮಾಗಿ ನೋಡುತಿರ ।
ಲಧಿಕಹರ್ಷೋದ್ರೇಕದಿಂದಾದಿತೇಯಭೂಭುಜರು ನಲಿದಿಂತೆಂದರು ॥ (27)

ಚರಣನಖ ಪೋಲದಬ್ಜದ ಸಾಮ್ಯಮಂ [5]ವದನ ।
ಸಿರಿಕರದ (ಚಂದಿರಗೆ) ಸಮಮೆನಿಪುದೆಂತೊ ಗಿರಿ ।
ಗುರುಳವಕ್ಷೋಜಗಳ ಪಾಸಟಿಯುನಿಡದು ದ್ವಿಜಮಂಬಕಕನೀನಿಕೆಗಳ ॥
ಸರಿಯಪ್ಪುದೆಂತೆನೆ ನಿತಂಬಜಘನೋಪಮಂ ।
ದೊರೆಕೊಳದು ಶಿರಮುರದನೋದರಂಗಳ(?) ನಭಕೆ ।
ತರಲಹುದೆ ಧೀಮಂತರೆನ್ನುತಚ್ಚರಿಗೊಂಡುದಖಿಳಾದಿತೇಯನಿಚಯ ॥ (28)

---

1 ಕೊಡವುಗಳ 2 ಸಜ್ಜನಚಿತ್ತದಾಂಧ್ವಚಿಂತೆಯು. 3 ಖಂಜನಾಶ್ರಯ
4 ಕಪ್ಪತುಕದೊಳಾಲೋಕ 5 ಕಂದರಕೆ ಸನುಮೆನಿಪುದೆಂತೊ

ಅರವಿಂದಸೌರಭವ ಪರಭೃತದ ಸುಸ್ವರವ |
ಸರಘಾಮಧುಸ್ವಾದ ವರಮೃಣಾ[1](ಳದ ಮೃದುಲ) |
ಸ್ಮರಘೋಟಕದ ನುಡಿಯ ಹರಿಯ ವೈರಿಯ ಸಿರಿಯನೊಮ್ಮನದಿ ಸೆಳೆದು ಬೇಗ ||
ಬರೆಯೆ ಚೈತ್ರಿಕರಚನೆಗಳನೊಲ್ಲದೀ ರೂಪ |
ಸರಸಿಜಾಸನ ತನ್ನ ಸೃಷ್ಟಿಗೌನ್ನತ್ಯಮೇಂ |
ದೊರಕಿಪರೆ ಪ್ರಥಮನಿರ್ಮಿತಗೈದನಲ್ಲದಿರಲೀ ಮೂರ್ತಿಯುಂ ತೋರ್ಪುದೊ ||

ಪಜ್ಜೆಯಿಡೆ ರಾಗಮುದ್ರೇಕಿಪುದು ನಿಟ್ಟಿಸಲು |
ಬಜ್ಜದೊರಕುವ ಪೋರಣಾಭಮುಂಗಿತ್ತಪುದು(?) |
ಬೆಜ್ಜರವನುಳಿದತುಳಮೃದುಳಪ್ರವಾಳರುಚಿಗೊಡುವದೊಲಿದೀ ಸುಕರವು ||
ಉಜ್ಜುಗಂ ಪೆರ್ಚಿಪುದು ಮಧುರಕರಶುಭವಾಣಿ |
ಮಜ್ಜನಂಗೈವುದಾನಂದಾಬ್ಧಿಯೊಳು ವೇಣಿ |
ಮುಜ್ಜಗದೊಳೀ ರೂಪುರೇಖಾವಿಲಾಸಮಿನ್ನೆಂತೊ ಚತುರತೆ ಬೊಮ್ಮನ || (30)

ಮೂರುಲೋಕದೊಳುಳ್ಳ ನಾರಿಯರ ಸೌಂದರ್ಯ |
ಚಾರುತ್ವದತಿಶಯಗಳೆಲ್ಲಮುಂ ಸಂಗ್ರಹಿಸಿ |
ನೀರೇಜಭವನೀ ಮನೋಹರಾಪಾಂಗಯುತಮೂರ್ತಿಯಂ ಮುದದಿ ಸೃಜಿಸಿ ||
ಧಾರಿಣೀಗರ್ಭದೊಳಗಿರಿಸಲ್ಕೆ ನಿಮಿಕುಲಕು |
ಮಾರನ ತಪದ ಫಲೋಪಮುಮಾಗಿ ಭರದಿ ಕೈ |
ಸಾರಿತಲ್ಲದರುಳಿದ ಮಾನವರಿಗೀ ಚೆಲ್ವು ದೊರೆದಪುದೆ ಜಗತಿಯೊಳಗೆ || (31)

ಹಾಸದಿಂದಜನರಸಿ ನೀರಜೋಪಮು[2](ರುಚಿ)ರ |
ಭಾಸದಿಂ ಬಾಂಬೊಚ್ಚದಲೆಯುಮನದನ್ನೆಯ ವಿ |
ಲಾಸದಿಂದಿಂಗಡಲ ಕುವರಿಯಳ ಸೌಂದರ್ಯದತಿಶಯಗಳನ್ನು ತಳೆದು ||
ವಾಸವನ ಸತಿಯಾದಿಸುದತಿಯುರನುಂ ಪರೀ |
ಹಾಸಭಾಜನಗೈವಳೀಕ್ಷಿಸುವ ಮಾತ್ರದೊಳ |
ಗೀ ಸುವಾಸಿನಿ ಜಗನ್ಮೋಹನದ ಖನಿಯೆನುತಲಚ್ಚರಿಯಲೀಕ್ಷಿಸಿದರು || (32)

ನೋಡಲಡಿದಾವರೆಯ ತಾವರೆಯ ತಾವರೆಯ |
ಸೂಡೆ ಗತಿಕಲಹಂಸ ಕಲಹಂಸ ಕಲಹಂಸ |
ಗೂಡೆ ದೃಜ್ಞಾಳೀಕ ನಾಳೀಕ ನಾಳೀಕ ಭಾಗ್ಗನರಿದೆನಿಪುದರಿದೆ ||
ಪ್ರೌಢಿಯಂ ವಾಣಿಯ ಸುವಾಣಿಯ ಸುವಾಣಿಯುರೆ |
ಗಾಡಿ ಕಾಮನ ಸತಿಯ ರತಿಯ ಸತಿಯಳ ಮುಖಂ |
ನೋಡಲ್ಕಮಲಕಮಲವತ್ಕಮಲಮಂ ಪೋಲಲಾ ಲಲನೆ ಕಂಗೆಸೆದಳು || (33)

---

1 ಮೃಣಾಳೇಂ ಪೋದ.

2 ನೀರಜೋಪಮುಚಿಕುರ.

ವದನೇಂದು ದರ್ಶನದಿ ವಿಧುಕಲಾಪೂರ್ಣತೆಯು |
ಪದವ ಕುಡಿನೋಟದಿಂ ಕುವಲಯಶ್ರೀವೃದ್ಧಿ |
ಯುದಯಮುಂ ಕರಪಲ್ಲವಾನುಮೋದಂಗಳನು ಸಾದರದ ಬೆಳ್ನಗೆಯಲಿ ||
ಸುಧೆಗೆ ಮಂದಾಧಿಕ್ಯಸಂಪ್ರಾಪ್ತಿಯುಂ ಶುಭಾ |
ಸ್ಪದವ ಪದ್ಮಾಳಿಗಂ ಪದವಿೞವುತಿರೆ ಮಹಾ |
ಭ್ಯುದಯ ಮೂಲೋಕಮುಂ ಸಮನಿಸುವುದೇನರಿದೆ ಸನ್ಮೂರ್ತಿಯೀಕ್ಷಣದಲಿ ||

ಎಂದಖಿಲ ನೆರೆದಿಹ ಸಭಾಸದರು ನುಡಿಯುತಿರೆ |
ಗಂಧೇಭಗಮನೆಯರ ನಿಖಿಲೋಪಚಾರಗಳ |
ಛಂದದಿಂದಂ ಗೈವುತೈತರಲ್ಕೆಡಬಲದ ಕರುಮಾಡದಗ್ರಗಳಲಿ ||
ನಿಂದಿರ್ಪ ಸುದತಿಯರ್ನಸುನಗೆಯ ಕುಸುಮಗಳ |
ನಂದು ಸೂಸುತಲಿರಲ್ಪುಟವಿಡಿದ ಪೊಂಬಣ್ಣ |
ಪೊಂದೊರೆಗೆ ಸರಿಯೆನಿಸಿದಂಗದ ಸದಂಗನೆಯರರಸಿ ನಡೆತಂದಳೊಲಿದು || (35)

ಇಂದಿಂದಿರಗಳು ಕುರುಳಂದಮಂ ಸೋಲ್ದಾಸೆ |
ಯಿಂದ ಪಿಂದೈದುತಿರೆ ಹಂಸಕದ ಮಧುರರವ |
ದಿಂದ ಹಂಸವು ಪದೋಚ್ಚಲನೆಗಳನುಳಿದು ಸನ್ಮಾರ್ಗಗತಿವಿಡಿದು ಬರಲು ||
ಬಂಧುರದ ಧಮ್ಮಿಲ್ಲಸುಂದರಕೆ ಸೋಗೆಗಳ್ |
ಚಂದದಿನಿನುಡಿಗೆ ಶುಕ ಗಳರವಕೆ ಪಿಕಮಾಸೆ |
ಯಿಂದ ಬೆಂಬತ್ತಿಬರಲೇಂ ಪೇಳ್ವೆನುಳಿದ ಜನ ಕುತುಕದಿಂ ನೋಳ್ಪುದರಿದೆ || (36)

ಸುತನಿಪ್ಪ ತಾಣಕತಿಶಯವನಿತ್ತಪೆನೆಂದು |
ವಿತತನೇತ್ರಂಗಳಿಂ ದಿಟ್ಟಿಸಿದ ಮಾತುರದೊ |
ಳತಿಶಯದ ಕುವಲಯಶ್ರೀಸಮೃದ್ಧಿಯನಾಳಲಾ ಚರಣಯುಗಳಂಗಳಂ ||
ಶ್ರುತಿಕಲಿತನೀಲಾಂಬುಜಾತಗಳ್ ಆತ್ಮೈಕ |
ಗತಿಯಿಂದ ಪದಕೆರಗಿ ಪ್ರಾರ್ಥಿಸಲು ಪದದ ಸಂ |
ಗತಿಯ ಪಡೆದಿರ್ಪವೋಯೆನೆ ನೇತ್ರಕಾಂತಿಗಳ್ ಪಸರಿಸಿದವೇನೆಂಬೆನು || (37)

ವಿಭವಗತಿ ಗೆಲುತ ಬರಲಿಭದಂತೆ ತಾಮು[1](ರಸ )
ವಿ)ಭವಮುಂ ಕೊಡೆ ವಿದ್ರುಮೋಭಯಕೆ ದರಹಾಸ |
ಶುಭವ ಚಂದ್ರಿಕೆಗಾ ಶುಭದ ವಿಡಾಯವನೀಯಲಂಗಲತೆಯಧಿಕ ಹೈಮ ||
ನಿಭಚಾರುಕಾಂತಿ ಕಾಂಚನಕೆ ಗೌರವವೀಯ |
ಲಭವಾರಿಯುಂ ಪುನರ್ಭ[2](ವಿಸಿಯು)ಪಚರಿಸುತಿರೆ |
ಶುಭವಾಕಿನಿಂ ಶುಭದ ಶುಕವಾಣಿಯೆಂದೆನಿಸಲರಸಿ ನಡೆತಂದಳೊಲಿದು || (38)

---

1 ಬರಲಿಭವದಂತಾಮುಸ | ಮಭಮುಂ ಕೂಡೆ
2 ಪುನರ್ಭವಗಳುಪಚರಿಸುತಿರೆ | (?)

ಗೆಲಿದು ಮುಖದಿಂ ರಾಜಮಂಡಲವನಂಡಲೆವ |
ಲಲಿತದಿಂ[1](ದೈಪಿಡಿಯುನತಿಗಳೆದು ತನ್ನ) ಕರ |
ಚೆಲನೆಯಿಂ ಪಲ್ಲವವ ಪಲ್ಲವದಿ ಧಿಕ್ಕರಿಸುತರಸಂಚೆಗಮನದಿಂದ ||
ಕಲಿತಮಾದಂಗಜಮತಂಗಜಾಮರಗಜವ |
ಚೆಲುವನಗೆಯಿಂ ಸುಧೆಯ ಸುಧೆಯ ತವುದತಿಶಯದಿ |
ಲಲಿತಮೆನಿಸುತ ಶುಭಾಕಾರಪದ್ಮಾಕಾರದಿಂದರಸಿಯೈತಂದಳು || (39)

ದಾನಕಾರಣೆಯಲ್ಲದಭ್ರಮಾತಂಗಜಂ |
ಸಾನಂದಕರಮೆನಿಸುತಿರುವ ಸನ್ಮಾರ್ಗಂ ನ |
ವೀನಕ್ಷೀರಾರ್ಣವೋದಿತ ಡಿಂಡಿಮಾರಮುನ್ನತಿಗಳೆವ ಗೌರವೆನಿಪ ||
ಶ್ರೀನಿಕೇತನಪುಂಡರೀಕಮುಂ ತಿರುವುತಲಿ |
ಮಾನಿನೀಮಣಿ ಮೆಲ್ಲನೈತಂದಳಬ್ಜನಂ |
ದೀನತ್ವಮೇತಕೆಂದೆನುತಲುಪಚರಿಸುವಳೊಯೆನೆ ಮೋಹನಾಕೃತಿಯೊಳು || (40)

ಸುತ್ತಲುಂ ಬಳಸಿ ಬಹುಳೋಪಚಾರಂ ಗೈವ |
ಮತ್ತಕಾಶಿನಿಯರೆಡಬಲದಲ್ಲಿ ಪ್ರದ್ಯುಮ್ನ |
ನುತ್ತಮದ ಕಣೆಗಳಿಂದೈತರಲು ಸಕಲಸುರಸಂತತಿಗಳೀಕ್ಷಿಸುತಿರೆ |
ಮತ್ತೆ ನಾನಾವಿಧದ ಶುಭವಾದ್ಯಘೋಷಗಳ |
ಮೊತ್ತಮೆಣ್ದೆಸೆಯ ಮುಸುಕಿರಲು ಜನಕಜೆ ಕರುಣ |
ವೆತ್ತು ಲೋಕವ ನಿಟ್ಟಿಸುತ ಬಂದಳೊಲವಿನಿಂ ವೈವಾಹನಿಲಯದೆಡೆಗೆ || (41)

ಮಣಿಭೂಷಣದ ಶೋಭೆ ಮುಂಕೊಂಡು ಬೇಗ ದಿನ |
ಮಣಿಯು[2](ಅರುಣತೆಗಾಗ ಸಚ್ಛತೆಯು) ಪೆರ್ಚಿಸಲು |
ಮಿಣುಗುತುಭಯಕಟಾಕ್ಷ ಮುಂಬರಿದು ಶುಭ್ರಾಂಶುವಂ ಕರೆಯೆ ಕೆಳೆತನಕ್ಕೆ ||
ಗಣನೆಗೊಳೆ ಶೀತಾಂಶುರೋಚಿ ಪಾರ್ವಣವಿಧುವ |
ಕಣುಸನ್ನೆಯಿಂದ ಧಿಕ್ಕರಿಸಿ ಪೆಂಗಳ ಶಿರೋ |
ಮಣಿಯು ಶುಭವೇದಿಕಾಕ್ರೋಢಮಂ ಸಾರಿದಳ್ಸಿರಿಗಳಿಂ ಪಿರಿದೆನಿಪೊಲು || (42)

ಮೊಳಗಿದುವು ನಿಸ್ಸಾಳ ವಿವಿಧವಾದ್ಯಂಗಳುಂ |
ಬೆಳಗಿದುವು ಭೂಸುರಾಶೀರ್ವಚನಮೆಣ್ದೆಸೆಯ |
ಲಳವಟ್ಟವಮರತತಿ ಪೊಗಳುವ ಜಯಧ್ವನಿಗಳಾಚಾರ ಮಂಟಪದೊಳು ||
ನಳಿನಾಕ್ಷ ಧರೆಗೆ ಬರಲಂಬುಧಿಯನುಳಿದು ರಮೆ |
ಘಳಿಲನೈತಂದು ನಿಜಕರಕಲಿತಸೌವರ್ಣ |
ನಳಿನಮಂ ತಿರುಪೆ ತದ್ರಜ ವ್ಯಾಪ್ತಮಾದುದೋಯೆನೆ ಕಾಂಡಪಟ ರಾಜಿಸೆ|| (43)

---

1 ಕೈಪಿಡಿಯನ್ನೆದುಕರ |
2 ಮಣಿಯನರುಣಾಖ್ಯೆಗಂ ಸ್ವರ್ತತೆಯ ಪೆರ್ಚಿಸಲು |

ಹರಕಮಲಭವರೀರ್ವರಾ ಸಮಯದೊಳು ಕನಕ |
ತೆರೆಯ ಮರೆಯೊಳು ವಿರಾಜಿಪ ವಧೂವರರ ಸಿರಿ |
ಕರವ ನಿಟ್ಟಿಸುತಾಗ ಮೆಟ್ಟಕ್ಕಿಗಳ ಗೂಡೆಗಳ ತರಸಿ ನಡುವೆ ಮಡಗೆ ||
ಸುರಪುರೋಹಿತ ಸಮಯವರಿದು ಸೂಚಿಸೆ ಜಗ-|
ದ್ಭರಿತವಿಕ್ರಮವಿಜಯಮೂರ್ತಿಯಂ ಭರ್ಗ ನಿಜ |
ಕರುಣದಿಂ ಮೆಟ್ಟಕ್ಕಿಯೊಳ್ ನಿಲಿಸೆ ಪೊಂಬೊಡೆಯ ಹರುಷದಿಂ ಧರಣಿಸುತೆಯ ||

ಅಷ್ಟಮೂರ್ತಿಯ ನೇಮದಿಂ ಬೇಗ ಋಷಿಮಂಗ |
ಳಾಷ್ಟಕಂಗಳು ಮನೋಹರದಿ ಕಂಗೊಳಿಸುತಿರ |
ಲಷ್ಟಾಂಗಯೋಗನಿಧಿ ಬಿದಿಯಣುಗ ತದ್ಗೋತ್ರನಾಮಂಗಳುಚ್ಚರಿಸಲು ||
ನಿಷ್ಠಂ ಶತಾನಂದನಾ ಪರಿಯ ವಿಪ್ರೋದ |
[1](ತೇ)ಷ್ಟವಚನಂಗಳಂ ಪಸರಿಸಲು ನಿಗಮ ಸಂ |
ದಷ್ಟಮತದಿಂದ ಗುಡಜೀರಿಕಾರೋಹಣವ ಮಾಡಿಸಿದರತಿವೇಗದಿ || (45)

ಭೃಂಗಾರಮಯಕಾಂಡಪಟವ ಸಡಿಲಿಸಿ ಮಂಗ |
ಳಾಂಗಾಧಿವಾಸನಿಗಮೋದಿತಕ್ರಮ ವಿವಿಧ |
ಸಂಗಾಢಮಂತ್ರಗಳ(ನು)ಚ್ಚರಿಸೆ ಸನ್ಮುಖನಿರೀಕ್ಷಣಂಗೈವುದೆನಲು ||
ಶೃಂಗಾರರಸಭರಿತವದನಪದ್ಮಾಕರದಿ |
ಮುಂಗಾರ ಮಿಂಚು ಮಾರ್ಪೊಳೆ(ವ)ವೊಲಪಾಂಗದ ಬೆ |
ಡಂಗದೇರಿದ ರಾಮ ಧರಣಿಜೆಯ ನೇತ್ರೋತ್ಪಲಂಗಳುಂ ನಲಿವ ತೆರದಿ || (46)

ಪತಿಯ ಸುಕಟಾಕ್ಷದ ಸುಧಾಲಹರಿ ಮೇಲ್ವರಿವು |
ತತಿಶಯದಿ ಬರೆ ಸೀತೆ ನಾಣ್ಚಿ ವಕ್ಷೋಜಸಂ |
ಗತಿಗೈವುತಂಬಕಗಳಂ ಮುಗಿಯೆ ಚಿತ್ತದೊಳ್ತೋರೆ ರಮಣೀಯಮೂರ್ತಿ ||
ಶ್ರುತಿಯುಗಳಮಂ ಮುಚ್ಚಲಚ್ಚರಿಯ ಕಂಡು ಭೂ |
ಪತಿಗಳಾಲೋಚನೆಯನಾಂತಿರಲ್ ನೋಡಿ ಮುನಿ |
ತತಿಗಳಾನಂದದಿಂ ಹಿಗ್ಗುತಿರೆ ಹರವಿರಿಂಚ್ಯಾದಿಗಳ್ ನಲಿವುತಿರಲು || (47)

ಮನದ ರಾಗಂ ಪೆರ್ಚಿ ಪೊರಸೂಸಿ ಪಟದವೊಲ್ |
ಮಿನುಗುತಿರೆ ರಘುಪತಿಯಪಾಂಗಚಂದ್ರಿಕೆ ಬೆಳಗೆ |
ಘನನಿಶಾ[2](ಕರ)ರಾಗ ಜರಿಯಲಿನವದನೇಂದು ಕಂಗೊಳಿಸೆ ಮಮತೆಯಿಂದ ||
ವನಿತೆ ನೀಲೋತ್ಪಲಗಳಿಂದ ಪೂಜಿಸಿದಳೋ |
ಯೆನಲು ದಿಟ್ಟಿಸಿ ಹರುಷವಾಂತಳಾ ಸಮಯದೊಳ್ |
ಮನುಮುನಿಗಳಾನಂದವಾರ್ಧಿಯೊಳಗಾಳಿದರ್ನುಡಿಯುಲಳವಡದೆ ಮುದದಿ||

---

1 ಚೇಷ್ಟವಚನಂಗಳಂ. 2 ಘನನಿಶಾಮುಖರಾಗ.

ತದನಂತರದೊಳಕ್ಷತಾರೋಪಣಂಗೈಸೆ |
ಸುದತಿಯಪೊರ್ಂದಳಿಗೆಯೊಳಗಾಣಿಮುತ್ತುಗಳ |
ಚದುರಿಂದ ತುಂಬಿತಂದೀಯಲಬ್ಜಾಸನಂ ಧರಣೀತನೂಜಾತೆಯ ॥
ಮುದದಿಂದ ಕರಗಳಂಜುಳಿಗೈಸುತಾಜ್ಯದಧಿ |
ಮಧುಗಳಿಂ ಪರಿಮ್ರುಜನೆಗೈದು ಮುಕ್ತಾಕ್ಷತೆಯ |
ವಿಧಿಯಿಂದ ವರನುತ್ತಮಾಂಗಕಂ ತಳಿವುದೆಂದುಸುರಲಾ ಸೀತೆ ನಯದಿ ॥ (49)

ಎಡೆವಿಡದೆ ತನ್ನೆಡೆಯಲಿಪ್ಪ ಪರವಸ್ತುವೀ |
ಪೊಡವಿಗೈತರಲಾನು ಭಜನೆಗೈವೇಳ್ಕೆನ್ನು |
ತೊಡನೆ ನಿಜಶಾಖೆಗಳ ನೀಡಿ ಹರಿಚಂದನಂ ಕುಸುಮನಿಚಯಂಗಳಿಂದ ॥
ಸಡಗರದಲುತ್ತಮಾಂಗದ ಪೂಜೆಗೈವುದೋ |
ಕಡುಮುಮತೆಯಿಂದೆಂಬ ಮಾಳ್ಕೆಯೊಳ್ ಮುತ್ತುಗಳ |
ಮಡದಿ ವಲ್ಲಭನ ಮಸ್ತಕದಲ್ಲಿ ಸೂಸಿದಳ್ ಕರಯುಗಳದಿಂ ನಲಿಯುತ ॥ (50)

ಪತಿಯ ಕಂಡರೆ ಕರುಬಿ ನಿಲ್ಲದೈದುವ ನಿಶಾ |
ಪತಿಯ ಕಾಂತೆಯರ ಕೈಸೆರೆವಿಡಿದು ನೇಸರಿಗೆ |
ಕ್ಷಿತಿಯೊಳೊಪ್ಪಗಿಸುವವೊ ನೀರಜಗಳೆಂಬಂತೆ ಕಾಂತಮಣಿ(ಮಯ)ಮುಕುಟದಿ ॥
ಸತಿಶಿರೋಮಣಿ ಮೃಣಾಳೋಪಮಿತಬಾಹಾಸು |
ಲತಿಕೆಗಳ ನೀಡಿ ಮುಕ್ತಾಕ್ಷತಾರೋಪಣೆಯ |
ನತಿಶಯದೊಳೆಸಗಿದಳ್ ಚತುರದಶಭುವನಾದಿಭೂಪ್ರಾಪ್ತಿಗೈವಂದದಿ ॥ (51)

ಟಂಕೃತಿಶ್ರವಣದಿಂದಖಿಳಮರ್ತ್ಯಾಮರ್ತ್ಯ |
ಹಂಕೃತಿಯ ನೀಗಿ ಮದ್ವಶವರ್ತಿಗೈದ ಬಿಲ್ |
ಝೇಂಕೃತಿಯನಾಂತ ಸಿಂಜಿನಿಯ ದೃಷ್ಟಾಂತಮಿೂ ಕುಂತಳಗಳೆಂದು ಮಾರಂ ॥
ತಾಂ ಕೃತಿಯೆನಿಪ್ಪೆನೆಂದೆನುತ ಕುಂದದ ಸುಮುದ |
ಲಂಕೃತಿಯ ಗೈದನೋಯೆನೆ ರಘುಕುಲೋತ್ತಂಸ |
ಪಂಕೇಜಮುಖಿಯುತ್ತಮಾಂಗದೊಳಗರ್ಪಿಸಿದ ಮುಕ್ತಾಕ್ಷತವ್ರಾತಮುಂ ॥ (52)

ಅಕ್ಷತಾರೋಪಣೋತ್ಸವದೊಳುಂ ಮುದವಳಿಗ |
ರಕ್ಷತಾರೋಪಣೋತ್ಸವದಿಂದ ಮುತ್ತುಗಳ |
ನಕ್ಷತ್ರಾರೋಪಣೋತ್ಸವಗೈಸಲತಿವೇಗದೊರ್ವರೊರ್ವರ ಗೆಲುಮೆಯ ॥
ಅಕ್ಷತಾರೋಪವಮಾಗಿರಲು ಮುಕ್ತಾಫಲಗ |
ಳಕ್ಷತಾರೋಪಮಿತಮಾಗುತಚ್ಚರಿಯೆನಿಸ |
ಲಕ್ಷಯಾತ್ಮಕತ್ರಿಯಂಬಕಮುಖ್ಯರೀಕ್ಷಿಸಿದರಾನಂದಮಯರಾಗುತೆ ॥ (53)

ಆ ಸಮಯದಲಿ ಜನಕನೆಣ್ಣೈಯ್ಯನಾಜ್ಞೆಯಿಂ |
ವಾಸವಾರ್ಚಿತಚರಣಶ್ರೀರಾಮಚಂದ್ರಮಗೆ |
ಭೂಸುತೆಯ ಧಾರೆಯಂ ಎರೆವಡುಜ್ಜುಗದಿಂದ ಪುತ್ರಿಯಂ ಕರದಿ ಪಿಡಿದು ||
ಮೊಸಲೋದಕವನೆರೆಯಲ್ [1](ಸ್ವರದಿ) ಮಂತ್ರಗಳ |
ಭೂಸುರರ್ಪೇಳುತಿರೆ ಧರ್ಮಾರ್ಥಕಾಮದಿಂ |
ದೀ ಸುವಾಸಿನಿಯ ಸಹಚರಿಯೆನಿಸಲೆಂದಿತ್ತ ರಘುವರನ ಕರತಳಕ್ಕೆ || (54)

ಧೀರಮಿಥಿಲೇಶ ದಶರಥಮಹೀನಾಯಕಕು |
ಮಾರ ಕೌಮಾರವಿಕ್ರಮಗೆ ಸೀತಾಸತಿಯ |
ಧಾರೆಯನ್ನೆರೆದು ಶುಭವಾಣಿಯಿಂ ನುಡಿದನಿಕ್ಷ್ವಾಕುಪತಿಯೊಳ್ ನಯದಲಿ ||
* ವೀರ ಕೇಳ್ ಮತ್ಪುತ್ರಿ ಸದ್ಧರ್ಮಸಹಚರಿಯು |
ದಾರಕೀರ್ತಿಯೊಳಾತ್ಮ ಛಾಯೋಪಮಿತಳೆಂದು |
ಕಾರುಣ್ಯದಿಂದ ರಕ್ಷಿಪುದು ಸತ್ಕುಲಸೂತಳೂರ್ಮಿಜೆಯ ಮಾನವತಿಯ || (55)

ಧಾರಾಮುಹೂರ್ತ ಸುಮುಹೂರ್ತಮಾಗಲು ಹರುಷ |
ಸಾರಾನುಮೋದದಿಂ ಕುಸುಮಮಂತ್ರಾಕ್ಷತೆಯ |
ಸಾರಮಂ ಕರೆಯುಲಪ್ಸರೆಯರುಂ ನಟಿಸುತಿರೆ ಗಂಧರ್ವರುಂ ಪಾಡಲು ||
ಭೇರೀನಿನಾದ ಋಷಿನಿವಹದಾಶೀರ್ವಾದ |
ದಾರವಂ ದಿಕ್ಚಕ್ರಗಳಲಿ ಮಾರ್ದನಿಗೊಡಲು |
ದಾರಪರಕೆಗಳಿಂ ದಿಗೀಶರಿವರೋಯೆನಲ್ ಬೆಡಗಚ್ಚರಿಯೊಳೆಸೆದುದು || (56)

ತೊಡೆಯಮೇಲಿಟ್ಟು ರಘುವರನ ಮೃಡ ಕುಳ್ಳಿರ-|
ಲ್ಕೊಡನೆ ಸರಸಿಜಪೀಠ ಮಮತೆಯಿಂದಂಕದೊಳ್ |
ಪೊಡವಿಜಾತೆಯನಿಟ್ಟು ಮಂಡಿಸಿರೆ ಜಾಬಾಲಿಕಣ್ವಕಶ್ಯಪನತ್ರಿಯು ||
ಕೊಡನಮಗಗೌತಮಭರದ್ವಾಜಗಾಧೇಯ |
ರೊಡನೆ ಕೌತುಕಬಂಧನಂಗೈಸನೇಳ್ಕೆನುತ |
ನುಡಿದು ಪೊಂಬಟ್ಟಲೊಳ್ ಅಂಗುಳೀಕವನಿಟ್ಟು ಬಳಸಿ ಕುಳ್ಳಿರ್ದರೊಲಿದು || (57)

---

1 ಸರಿಯು ಮಂತ್ರಗಳ.

*ಇಯಂ ಸೀತಾ ಮಮ ಸುತಾ ಸಹಧರ್ಮಚರೀ ತವ ||
ಪ್ರತೀಚ್ಛಚೈನಾಂ ಭದ್ರಂ ತೇ ಪಾಣಿಂ ಗೃಹ್ಣೀಷ್ವ ಪಾಣಿನಾ || ೨೬ ||
ಪತಿವ್ರತಾ ಮಹಾಭಾಗಾ ಛಾಯೇವಾನುಗತಾ ಸದಾ ||
ಇತ್ಯುಕ್ತ್ವಾ ಪ್ರಾಕ್ಷಿಪದ್ರಾಜಾ ಮಂತ್ರಪೂತಂ ಜಲಂ ತದಾ || ೨೭ ||

(ವಾ. ರಾ. ೭೩ ನೆಯ ಸರ್ಗ)

ಈತನಿಂದುದಯಿಸಿದ ನಾಯೆ ಮೂಲೋಕಮು-|
ನ್ನೀ ತೆರದಿ ಬಳಸಿರ್ಪಳೀ ಜಂತು ಸಂತತಿಯೊ |
ಳೀತನೀ ಪರಿಯೊಳಿಹನೆಂದು ಮೂಲೋಕಕುಂ ತೋರ್ಪಂತೆ ಪೊಂಬಟ್ಟಲಂ ||
ಪ್ರೀತಿಯಿಂ ಪಿಡಿದೊರ್ವರೊರ್ವರಿಗೆ ಕೊಡುತ ಶ್ರುತಿ |
ಜಾತಪಾವನಮಂತ್ರತತಿಗಳುಚ್ಚರಿಸುತಂ |
ಸಾತಿಶಯದಿಂದ ಕಂಕಣವ ರಚಿಸಿದರಾಗಲತಿವೇಗ ಶಾಸ್ತ್ರವಿಧಿಯಿಂ || (58)

ಪಳಿವಾತಿನಿಂ ವಧೂವರರಿಗತಿಶಯಮೆನಲು |
ತೊಳಪ ಕೌತುಕ ಮೌಳಿಗಳ ಬಂಧನಂಗೈದು |
ಕಳಿವೆತ್ತ ಕನಕಮಣಿಖಚಿತಪೀಠಾಗ್ರದೊಳ್ ಕುಳ್ಳಿರಿಸಿ ಪರಸಿ ಮುದದಿ ||
ಘಳಿಲನೆ ಪ್ರಧಾನಹೋಮಂಗೈಸೆ ಕುಶಲಾಜ |
ಗಳು ಮುಖ್ಯದ್ರವ್ಯಗಳ ತರಿಸಿ ಸನ್ಮಂತ್ರದಿಂ |
ಬೆಳಗಿಸಿದರಗ್ನಿಯಂ ವಿಧ್ಯುಕ್ತಮಂ ಮೀರದಾ ಸಮಯದೊಳ್ ನೇಮದಿ || (59)

ಗುರುವಸಿಷ್ಠಂ ವಿಧಿಯೊಳಾಗ ಹೋಮಂಗೈದು |
ಸೆರಗುಗಳಗಂಟಿಕ್ಕಿ ಮದವಳಿಗರಂ ದೇವ |
ಗುರುವೆನಿಪ ವೀತಿಹೋತ್ರನ ಪ್ರದಕ್ಷಿಣೆಗೈಸಿ ನಿಗಮೋಕ್ತಸತ್ಕ್ರಮದಲಿ ||
ತ್ವರಿತದಿಂ ಸಪ್ತಪದಿಯಂ ರಚಿಸಿ ರಘುವರನ |
ಕರದಿಂದ ಧರಣಿಜೆಯ ಚರಣದಂಗುಟವನ್ನು |
ಹರುಷದಿಂ ಪಿಡಿಸಿ ಸನ್ಮಂತ್ರದಿಂ ಸಪ್ತಪದಿ ರಚನೆಯಂ ಮಾಡಿಸಿದನು || (60)

ಆಗಲಾ ನಿಗಮೋಕ್ತಕರ್ಮಂ ಯಥಾಶಾಸ್ತ್ರ |
ಮಾಗಲಾ ಸ್ವರ್ಣಪೀಠಾಗ್ರದೊಳ್ ಮದವಣಿಗ |
ರಾಗಮದಿ ಕುಳ್ಳಿರಿಸಲೈದೆಯರು ಸನ್ಮುಕ್ತಿನಾರತಿಗಳಂ ಬೆಳಗಲು ||
ಕೋಗಿಲೆಯು ಸರದಿಂದ ಕೆಲಬು ಶೋಭಾನೆಗಳ |
ಬೇಗದಿಂ ಪಾಡುತಿರೆ ದ್ವಿಜರು ಪರಸುತಲಿರ-|
ಲ್ಕಾಗ ನಾನಾವಾದ್ಯನಿಚಯಗಳ್ ಮೊಳಗಿದವು ಸಾಗರಂ ದನಿಗೈವೊಲು || (61)

ರಾಮಚಂದ್ರಗೆ ವಿವಾಹಂ ಸಾಂಗಮಾಗಲ್ಕೆ |
ಪ್ರೇಮದಿಂ ಜನಕ ಸೌಮಿತ್ರಿಗಂದೂರ್ಮಿಳೆಯ |
ಸೋಮನಾಜ್ಞೆಯೊಳು ನಿಗಮೋದಿತಕ್ರಮದಿಂದ ಧಾರೆಯನ್ನೆರೆದು ಬೇಗ ||
ಆ ಮಹಾಸಭೆನಲಿವೊಲನುಜಂಗೆ ನೇಮಿಸಿದ |
ನೀ ಮುಹೂರ್ತದಿ ಭರತಶತ್ರುಘ್ನರಿರ್ವರಿಗೆ |
ಕೋಮಲೆಸುಗಾತ್ರೆಮಾಂಡವ್ಯೆಶ್ರುತಕೀರ್ತಿಯರ ಧಾರೆಯನ್ನೆರೆವುದೆನುತ || (62)

ಆ ಕುಶಧ್ವಜನಣ್ಣನಾಜ್ಞೆಯಿಂದೈತಂದು |
ಕೈಕಾತನೂಜಂಗೆ ಮಾಂಡವ್ಯೆಯಂ ಚಿತ್ತ |
ದಾ ಕುತುಕದಿಂ ಧಾರೆಯನ್ನೆರೆದು ಶತ್ರುಘ್ನನಿಂಗೆ ಶ್ರುತಕೀರ್ತಿಯನ್ನು ||
ಶ್ರೀಕರದ ಶ್ರುತಿಮತದಿ ಪರಿಣಯಂಗೈದಿತ್ತ |
ನಾಕಜಾತರು ಹರುಷರಸದೊಳೋಲಾಡುವಂ |
ತೀ ಕುತೂಹಲವನಭಿವರ್ಣಿಸುವುದೆಂತಹುದು ಧರೆಯೊಳ್ ಮಹೋತ್ಸವವನು ||

ಚೆಲುವಾಂತ ಮದವಣಿಗರಂ ಮಹೋತ್ಸವದಿಂದ |
ಪಲವು ಮಣಿಖಚಿತಪೀಠಾಗ್ರದೊಳ್ ಕುಳ್ಳಿರಿಸಿ |
ಕಲಿಗಳಗ್ರೇಸರಂ ಮಿಥಿಲೇಶ್ವರಂ ಬೇಗ ಭೂಸುರರ್ನಲಿವಂದದಿ ||
ಗೆಲವಿಂದ ಗೋಭೂಹಿರಣ್ಯಧನಮಣಿಕನಕ |
ಲಲಿತಗಜಹಯಮುಖ್ಯದಾನಂಗಳಂ ಗೈದ |
ನಲಘುಮತಿಗಳ್ ಮೆಚ್ಚುವಂತೆ ಧಾರಾಜಲದಿ ಶರನಿಧಿಯು ಪೆರ್ಚುವಂತೆ|| (64)

ನಿರುಪಮಾನಂದನಿಧಿ **ಶ್ರೀರಾಮುಪುರ**ದರಸ |
ಕರುಣದಿಂ ಮೂಲೋಕಮಂ ಪೊರೆಯೆ ಭೂತಳದಿ |
ನರನೆನಿಸಿ ಮಾನುಷಾನಂದಮಂ ಪರಿಕಲಿಸಿ ಸತಿಸಹಿತ ಪಸೆಯ ಮಣೆಯ ||
ಶಿರದೊಳನುಜಾತರೊಡವೆರದು ಕುಳ್ಳಿರ್ಪುದಂ |
ಸುರರುಋುಷಿಗಳುಸಿದ್ಧಚಾರಣಾದಿಗಳೆಲ್ಲ |
ಹರುಷದಿಂ ದಿಟ್ಟಸುತಲಾನಂದರಸಭರಿತರೆನಿಸಿದರದೇವೇಳ್ವೆನು || (65)

ಸಂಧಿ 22 ಕ್ಕಂ ಪದಂಗಳ್ 1339

---

# ಇಪ್ಪತ್ತಮೂರನೆಯ ಸಂಧಿ

ಸೂಚನೆ || ದುರ್ಗಾಧಿನಾಥ ಭಾಷಾಧ್ಯಕ್ಷ ಮುನಿವರರ |
ಸ್ವರ್ಗಾಧಿರಾಜ ದಿಕ್ಪಾಲಾದ್ಯರಂ ಕಳುಪಿ | [ರಘುವೀರನು ||
ಭರ್ಗಾನುಮೋದಸಚ್ಛಾತ್ರನಂ ಮನ್ನಿಸಿದ ಮಮತೆಯಿಂ

ಮುನಿಗಳವಧರಿಸಿ ಮನುವಂಶಾಧಿನಾಥ ನಿಜ |
ಮನದನ್ನೆಯುಂ ರತುನಪೀಠದೊಳ್ ಕುಳ್ಳಿರಲು |
ವನಜಪೀಠಂ ನೋಡಿ ತುಷ್ಟಮಾನಸನಾಗಿ ಭಕ್ತಿಯಿಂ ನುತಿಗೈದನು ||
ಜನನಮರಣವಿದೂರ ಯೋಗಾಂತರಂಗ ದು-|
ರ್ಜನವಿದಾರಣ ಸಾಂಖ್ಯರೂಪ ವಿದ್ಯಾನೇತ |
ಚಿನುಮಯಾತ್ಮಕರಾಮ ನೀಲಮೇಘಶ್ಯಾಮ ಜಯತು ಗಿರಿಜೇಶಪ್ರೇಮ || (1)

ವೇದಾಂತವೇದ್ಯ ತ್ರೈಗುಣ್ಯಮೂರ್ತಿಗಳಾದ್ಯ ।
ಬೋಧಸ್ವರೂಪ ಭವನಾಶ ನಿರ್ಗುಣರೂಪ ।
ಸಾಧುಭಕ್ತಿಗೆ ಸಾಧ್ಯ ಸಕಲಲೋಕಾರಾಧ್ಯ ಸತ್ಯ ಸುಜ್ಞಾನಬೋಧ್ಯ ॥
ಭೇದವಿರಹಿತ ಗೋಪ್ಯ ಭಜಕಕರುಣಾಕಲಿತ ।
ನಾದಾನುಸಂವಳಿತ ನತಶಾಂತರಸಭರಿತ ।
ಕ್ರೋಧೀಯನಿರ್ಜರಾಹಿತನೀರದವ್ರಾತಮಾರುತಾತ್ಮಕನೆ ಜಯತು ॥ (2)

ಅಣಿಮಾದಿಸಿದ್ಧಿಗಳ ದಾತಾರ ದಾತಾರ ।
ಪ್ರಣವಾತ್ಮಕಾಲೋಕ ಪ್ರತಿಮಾದಿಲೋಕಮಣಿ ।
ಗಣಸೂತ್ರದಂತಣುಮಹದ್ರೂಪೆನಿಸಿ ಬೆಳಗಿ ಬೆಳಗಿನೊಳ್ಬೆಳಗುತಿರುವ ॥
ಕಣುಮನಕ್ಕತಿದೂರ ಪ್ರಣುತಕವಿಜನದೂರ ।
ಗಣನಾವಿಹೀನ ಸದ್ಗುಣಗಣಂಗಳ ತಾಣ ।
ತ್ರಿಣಯಹೃತ್ಕಮಲದಿನಮಣಿ ಸುರೇಂದ್ರಾದಿಮಣಿಯಡಿದಾವರೆಗೆ ಮಣಿವೆನು॥

ಯೋಗಯೋಗಾನಂದ ಯೋಗಿಹೃದಯಾಂತಸ್ಥ ।
ಯೋಗಮಾಯಾತೀತ ಯೋಗಮಾಯೋಪೇತ ।
ಯೋಗಗೋಚರ ಯೋಗ ರಾಜಮಸ್ತಕರತ್ನ ಯೋಗಸತ್ಫಲರೂಪನೆ ॥
ಯಾಗಯೋಗಪ್ರೀತ ಯಾಗರಕ್ಷಣದಾತ ।
ಯಾಗಮಂತ್ರಾತ್ಮಕ ಸುಯಾಗಸಂವಿದಿತ ಶತ ।
ಯಾಗಸಂಪತ್ಪ್ರದ ವಿರಾಗಭೂಷಣರಾಮ ಕಾಮಪಿತ ಕಾಯ್ವುದೆನ್ನ ॥ (4)

ಸರ್ವಚೇತನರೂಪ ಸ್ವಾಂತಮಂದಿರದೀಪ ।
ಸರ್ವಲೋಕಾತೀತ ಸಗ್ಗಿಗರ ಪೆತ್ತಾತ ।
ಸರ್ವಭೂತಾಂತಸ್ಥ ಶರಣು ಜಯಕಾಕುತ್ಸ್ಥ ಮಸ್ತಕೋಟೀರರತ್ನ ॥
ಸರ್ವಲೋಕಾಧೀಶ ದುರಿತತಮಕೆ ದಿನೇಶ ।
ಸರ್ವಜ್ಞಮುನಿರಕ್ಷ ಸತತನಿಶಿಚರಶಿಕ್ಷ ।
ಸರ್ವಾತ್ಮಕನೆ ರಾಮಚಂದ್ರ ಶರಣನೆಯೆನುತ ನುತಿಸಿದಂ ಬಹುಬಗೆಯಲಿ ॥ (5)

ಪೊಂಬೊಡೆಯನೀ ಪರಿಯ ನುತಿಗೈಯೆ ಕರುಣದಿಂ ।
ದಂಬುಜಾಕ್ಷಂ ನುಡಿದ ಭವದೀಯ ಸಂಸ್ತವಕೆ ।
ತುಂಬಿತಾನಂದಮುದರಿಂ ಬಯಕೆಯಂ ಸಲಿಪೆ ನೀಂ ಕೇಳ್ವುದೆನಲು ಬಿದಿಯು ॥
ಕುಂಭಿನೀಮುಖಭೂತ ವಿದ್ಯುಲ್ಲತಾಕಲಿತ ।
ಜಂಭರಿಪುವಾಹಸಚ್ಛಾಯಾಸುಮೂರುತಿಯೆ ।
ಬೆಂಬಿಡದಲನುದಿನಂ ಬಗೆಯೊಳಗೆ ಬೆಳಗೆನಲ್ಕಾ ನುಡಿಗೊಡಂಬಟ್ಟನು ॥ (6)

ವರರತುನಮಯವೆನಿಪ ವೈವಾಹಮಂಟಪದಿ |
ಮೆರೆವ ಭೃಂಗಾರಮಯಪೀಠಮಸ್ತಕದಲ್ಲಿ |
ಧರಣೀತನೂಜೆಯುಂ ಬೆರೆದಿರ್ಪ ಸನ್ಮೂರ್ತಿ ಚಿತ್ತದೊಳ್ಪೊಳೆವುದೆನುತ ||
ಸರಸಿಜಾಸನ ಬೇಡಿ ವರದಾನಮಂ ಪಡೆದು |
ಚರಣಕಾನತನಾಗಿ ನಿಜನಿಲಯಕೈದಲ್ಕೆ |
ಸಿರಿಯರಸನಂ ನೋಡಿ ಹರ ಮಹೋತ್ಸವದಿಂದ ಪೊಗಳಿದಂ ಪರಿಪರಿಯಲಿ || (7)

ಮೂರು ಗುಣದಿಂ ಮೂರು ಮೂರ್ತಿಗಳ ನಿರ್ಮಿಸಿಯೆ |
ಮೂರು ಅಧಿಕಾರಮಂ ಮುದದಿಂದ ಪಾಲಿಸಿಯೆ |
ಮೂರು ಗುಣನಾಗಿ ಮತ್ತಾ ಗುಣಗಳಿಂ ರಹಿತನೆನಿಸಿ ಸದ್ಯೋಗಿಗಳಿಗೆ ||
ಮೂರು ರೂಪದಲಿ ಚಿಜ್ಜ್ಯೋತಿಯಂದದಿ ತೋರಿ |
ಮೂರು ಚಕ್ರಂಗಳಂ ಮೀರಿ ಮಿಗೆ ನಲವೇರಿ |
ಮೂರವಸ್ಥೆಯ ಪೊದ್ದಿ ಪೊದ್ದದಿಹ ಪರಬೊಮ್ಮ ನೀಂ ಕಣಾ ರಘುವೀರನೆ || (8)

ನಾಲ್ಕು ಮುಖದೊಳಗಣಾಧಾರಮಂ ಬೆಳಗುತಲಿ |
ನಾಲ್ಕು ಶೃಂಗದ ಪೀಠದೊಳ್ ಜ್ಯೋತಿಯಂದದಲಿ |
ನಾಲ್ಕು ನಾಲ್ಕಾರು ದಳದೊಳಗಂ ಸದಾಶಿವತೆವೆತ್ತು ರಾರಾಜಿಸುತಲಿ ||
ನಾಲ್ಕವಸ್ಥೆಯ ಮೀರಿದಾಕಾಶದಂತೆ ಪದಿ |
ನಾಲ್ಕು ಲೋಕದ ಚರಾಚರಜೀವರೂಪಾಂತ |
ನಾಲ್ಕು ವೇದಗಳ ಬಳಕೆಗೆ ಸಿಲ್ಕದದ್ವೈತನಿಧಿ ನಮೋ ರಘುವೀರನೆ || (9)

ಧರಿಸಿ ಕೌಮಾರಮುದ್ರೆಯನು ಸಿದ್ಧಾಸನದಿ |
ಮರುತಮನದೃಷ್ಟಿಗಳನೊಂದೆನಿಸಿ ವಾಯುಸಖ |
ನಿರಿಗೆಯಂ ಮೀರಿ ನೀವಾರಶೂಕಪರಿಮಿತಪಥದಿ ಮುಂಬರಿದು ನಡೆದು ||
ಶಿರದ ಮಧ್ಯದ ಶರಚ್ಚಂದ್ರನಿಂ ಸರಿಸುತಿಹ |
ವರಸುಧಾರಸವೀಂಟಿ ಮರೆದು ತನ್ನಯ ಸುಖದೊ |
ಳಿರುವ ನಿಯಮಗಳ ಸತತಾನಂದ ಸದ್ರೂಪ ರವಿಕುಲೋತ್ತಂಸ ಜಯತು ||

ಹೊಳಚದೆವೆಗಳ ಪೊರೆಗೆ ನಿಲಿಸಿರುವ ದಿಟ್ಟಿಗಳ |
ಬಳಸದನ್ಯವನೇಕತಾನದಿಂ ತನ್ನ ನಿಜ |
ಬೆಳಗ ಲಕ್ಷೀಕರಿಸುತಾಯತಿಯನರಿದು ನಿಶ್ಚಲತೆಯಿಂದೊಪ್ಪುತಿರುವ ||
ಕಳೆಯು ಭೇದವನಾಂತ ಯೋಗಿಗಳಿಗನುದಿನಂ |
ಪೊಳೆವ ಸ್ಫಟಿಕಕರೀರದೊಳಿಟ್ಟ ದೀಪದಂ |
ತೊಳಹೊರಗಖಂಡವಾಗೆಸೆವ ತೇಜೋರಾಶಿ ರಘುವೀರ ಜಯತುಜಯತು || (11)

ಸ್ತಂಭಬ್ರಹ್ಮಾಂಡಮಾದಖಿಳಜೀವಿಗಳೊಳು ವಿ |
ಜೃಂಭಿಸಿಯೆ ಸರಮುತ್ತಿನೊಳಗಿರ್ಪ ಸರಿಗೆಯಂ |
ತಂಬರದ ತೆರದಿ ಸಾಕ್ಷಿಕನಾಗಿ ವಿಷಯೋಪಭೋಗಗಳನನುಭವಿಸುತ ||
ಕುಂಭೋದಕದಿ ಪೊಳೆವ ರವಿಯಂತೆ ಜಂಬಾಲ |
ದಂಬುಜಾತದ ತೆರದಿ ವರ್ತಿಯಿಂ ತೈಲಮ-|
ನ್ನುಂಬ ದೀಪದಲೊಂದನಂಟದಿಹ ಚಿನ್ಮಾತ್ರ ಶರಣು ಶ್ರೀರಾಮಚಂದ್ರ || (12)

ಇಂತು ಕಾತ್ಯಾಯಿನೀಕಾಮುಕಂ ನುತಿಗೈಯ |
ಲಂತರಾತ್ಮಕರಾಮನತಿಪ್ರೀತಿಯಿಂ ನುಡಿದ |
ಕಂತುಹರ ಭವದೀಯಚಿತ್ತದೊಳು ಬಯಸಿದುದ ಬೇಡಲಿತ್ತಪೆನೆನಲ್ಕೆ ||
ಸಂತಸಂ ಮಾನಸದಲಿರಲಿ ಮೈಥಿಲಿಸಹಿತ |
ಕಾಂತಸನ್ಮೂರ್ತಿಕೃತಕೌತುಕಸುಮಂಗಳವ |
ನಾಂತಭಾವಮೆನಲ್ಕೆ ದಯಗೈದು ಬೀಳ್ಕೊಟ್ಟ ಶಿವನ ರಘುವೀರ ಪ್ರಿಯದೆ || (13)

ಸಿರಿಯರಸನಾಜ್ಞೆಯಿಂ ಹರಬೊಮ್ಮರೈದಲ್ಕೆ |
ನೆರೆದ ದಿಕ್ಪಾಲಋಷಿಗಂಧರ್ವಕಿನ್ನರರ್ |
ಪರಿಪರಿಯೊಳಾ ಮಹಾತ್ಮಕನ ನುತಿಸುತ ನಮಿಸಿ ನೇಮಮಂ ಪಡೆದು ಜವದಿ ||
ಹರುಷದಿಂ ಪಾಡುತ್ತ ನಿಜನಿಲಯಕೈದಲ್ಕೆ |
ಧರಣೀಶಜನಕ ಲೇಖಾತತಿಯ ಪ್ರೀತಿಯಿಂ |
ಸರಭಸದೊಳುಪಚರಿಸಿ ಕಳುಹಿದಂ ಮುದವೆತ್ತು ವೈಭವೋತ್ಸವ[1](ದಿ ಜ)ವದಿ ||

ದಿನದಿನದಿ ಷಡ್ರಸೋಪೇತಮೃಷ್ಟಾನ್ನಮ-|
ನ್ನನುದಿನಂ ಭೂಸುರರ್ಗೀವುತಂ ಬೇಡಿದರಿ |
ಗನುದಿನಂ ಧನಕನಕವಸ್ತುವಾಹನಕ್ಷೇತ್ರದಿಂದ ಸಂತುಷ್ಟಿಗೊಳಿಸಿ ||
ವಿನಯದಿಂ ವಂದಿಮಾಗಧಪಾಠಕಾದ್ಯರಿಗೆ |
ಮನದಿಷ್ಟಗಳನಿತ್ತು ಮತ್ತೆ ನಾನಾದೇಶ |
ಜನರ ಸಂತಸಗೊಳಿಸಿದಂ ಮಹಾದಾನಾದಿವಿತ್ತಮಣಿಕನಕದಿಂದೆ || (15)

ಇಂತು ವೈಭವದಿಂದ ದಿನಮೂರನುಂ ಕಳೆದ |
ನಂತರದಿ ನಾಕಬಲಿಯಂ ರಚಿಸಿ ವಿಪ್ರರಿಗ |
ನಂತಪ್ರಕಾರದಿಂದಖಿಳವಸ್ತುಗಳಿತ್ತು ಸತ್ಕರಿಸಿ ಮೃದುನುಡಿಗಳಿಂ ||
ಸಂತೋಷಗೊಳಿಸುತಿರಲನಿತರೊಳು ಗಾಧೇಯ |
ಮುಂತಪ್ಪ ಕಜ್ಜಮಂ ಬೆಸಸುತಪ್ಪಣೆವಿಡಿದು |
ಕಾಂತಭೂಧರಕಾಂತನೆಡೆಗೆ ನಡೆದಂ ರಾಮನಖಿಳಗುಣಗಳ ಪೊಗಳುತ || (16)

---

1 ವೈಭವೋತ್ಸವತವಕದಿ ||

ಆಗಲಾ ವೈವಾಹವೈಭವಂ ನಾಲ್ಕುದಿನ ।
ಮಾಗಲಾ ದಶರಥಂ ನಿಜನಗರಕೈದುವಡೆ ।
ರಾಗದಿಂ ಬೆಸಗೊಂಡ ನಿಮಿಕುಲೋತ್ತಂಸನಂ ಮೃದುಮಧುರ ಭಾಷೆಗಳಲಿ ॥
ಭೋಗೀಶಶೇಮುಷಿಕನೇ ಸಕಲಲೋಕಸ್ತ ।
ಯೋಗೀಶಮುಕುಟಮಣಿ ದೇವತಾನ್ವಯನೆ ನೀ ।
ಬೇಗನಪ್ಪಣೆಗೊಡಲ್ಮನ್ನಗರಕೈದುವೆಂ ಸಬಲಸಾಮಾತ್ಯರೊಡನೆ ॥ (17)

ಎನೆ ಪಂಕ್ತಿರಥ ಜನಕ ಪ್ರೀತಿಯಿಂ ಸಚಿವರನು ।
ನೆನೆದು ನೇಮಿಸಿದ ನಿಜಸುತೆಗೆ ಬಳುವಳಿಯಾಗಿ ।
ಮಿನಿಸಿನಾಭರಣಗಳ ಧೇನುಹಯರಥಗಜಾಂದೋಳಿಕಂಗಳ(ನು) ಜವದೆ ॥
ನನೆಗಣೆಯನರಸಿಯುಂ ಪೋಲ್ವ ದಾಸಿಯರುಗಳ ।
ಕನಕಶಕಟಾದಿನಾನಾವಸ್ತುನಿಚಯಗಳ ।
ಬಿನದದಿಂ ತಹುದೆನಲ್ಕರಸನಾಜ್ಞಾಪಿಸಿದ ಮಾಳ್ಕೆಯೊಳ್ ಬಂದವಾಗ॥ (18)

ಸುತೆಗೆ ನಾನಾವಸ್ತುಕರಿಗಳಂ ಸಂತಸದಿ ।
ಮತಿಯಿಂದಲಿತ್ತು ಜಾಮಾತಂಗೆ ಬಂಧುಗಳಿ ।
ಗತಿಶಯದ ಭೂಷಣಾಂಬರವಾಹನಂಗಳಿಂದುಪಚರಿಸಿ ಪರಿವಾರವುಂ ॥
ವಿತತಾಂಶುಕವ ಧನಂಗಳ ಯಥೋಚಿತವಾಗಿ ।
ಪತಿಕರಿಸಿ ಸಕಲವಿದ್ವಜ್ಜನರ ಸತ್ಕರಿಸಿ ।
ಕ್ಷಿತಿಪತಿಗಳಿಗೆ ಮಾಲ್ಯವಸ್ತ್ರಾನುಲೇಪನಗಳಿತ್ತು ಮನ್ನಿಸುತೆ ಪ್ರಿಯದಿ ॥ (19)

ಮರುದಿವಸ ಶುಭಮುಹೂರ್ತದಲಿ ಧರಣೀನಾಥ ।
ತರಣಿವಂಶಾಗ್ರಣಿಯನುಚಿತಭಾಷೆಗಳಿಂದ ।
ಹರುಷರಸ ತುಳುಕುವಂತುಪಚರಿಸಿ ಪ್ರಸ್ಥಾನಪ್ರಾರಂಭವಂಗೈಸುತ ॥
ತರಳೆಯಂ ನೋಡಿ ವಾತ್ಸಲ್ಯದಿಂ ಗದ್ಗದಂ ।
ಬೆರೆಯೆ ಸರ ಕಂಗಳೊಳ್ವಾರಿ ಮುಂಬರಿಯೆ ಮುಂ ।
ದರಿಯದತಿಕರುಣದಿಂದಿಂತೆಂದ ಮನ್ಮಾತೆಸೀತೆ ಬಾರೆಂದಪ್ಪುತ ॥ (20)

ತೊಡೆಯ ಮೇಲಿಟ್ಟು ಗಲ್ಲಗಳಲುಗಿ ಮಸ್ತಕವ ।
ತಡೆಯದಾಘ್ರಾಣಿಸುತೆ ವಾತ್ಸಲ್ಯರಸಮುಣ್ಮೆ ।
ನುಡಿದನತಿಮೃದುವಾಣಿಯಿಂದ ಪೂರ್ಣೇಂದುನಿಭವಕ್ತ್ರಮಂ ನಿಟ್ಟಿಸುತ್ತೆ ॥
ಉಡುವೆಡೆಯಲೂಡುವೆಡೆಯಲ್ಲಿ ಸೌಹಾರ್ದಮಯ ।
ನುಡಿಗಳಾಡುವ ಸಮಯದಲ್ಲೊರಗುವೆಡೆಯಲ್ಲಿ ।
ಬಿಡದಿನಿಸು ದಿನಮಗಲದಿರ್ದು ಮನ್ಮಾನಸಂ ಕಾಣದೆಂತಿಹುದಂಬಿಕೆ ॥ (21)

ಮರೆಯೆನಿಸಲರೆನಿಮಿಷ ತೊರೆದಪುವು ನಿದ್ರೆಯಂ |
ವರನೇತ್ರಮೂಡುವವಸರದಲ್ಲಿ ಕಾಣದಿರ |
ಲರಿಯದೀ ರಸನೆ ಷಡ್ರುಚಿಗಳ ವಿಲಾಸಮಂ ಚಿರಕಾಲಮಿೂ ಪರಿಯಲಿ ||
ನಿರಿಗೆಯಾದೀ ಸ್ವಾಂತಮೆಂತಿರುವುದಮ್ಮ ಶುಭ |
ಕರಮೂರ್ತಿಯಾಲೋಕನಕ್ಕೆ ಗೋಚರಿಸದಿರೆ |
ಧರಣಿಯೊಳ್ ಕನ್ಯಾಪಿತೃತ್ವ ದುಃಖದ ಬೀಜಮೆಂಬ ನುಡಿ ತಥ್ಯಮಾಯ್ತು || (22)

ಎಂದು ಚಿಂತಿಪ ಮಿಥಿಲೆಯರಸನಂ ನೋಡುತಿಂ |
ತೆಂದನು ಶತಾನಂದನೆಲೆ ರಾಯ ರಾಜ್ಯಸುಖ |
ವೊಂದು ಬ್ರಹ್ಮಾನಂದಮುಭಯಸದ್ಗುಣಮುಳ್ಳ ಪುರುಷಂಗೆ ಪುತ್ರಿಯಿತ್ತ ||
ಬಂಧುರದ ವಿಭವಕೆಣೆಯಿಲ್ಲವೆನಿಸುವ ಗಾಥೆ |
ಯಂದವಡೆದಿರೆ ಬಳಲಲೇತಕೆನೆ ಹರುಷರಸ |
ದಿಂದ ನಂದನೆಯ ಮೊಗನೋಡಿ ಸೀರಧ್ವಜಂ ನಸುನಗುತಲಿಂತೆಂದನು || (23)

ವರತಂತ್ರಭಾಗದೊಳ್ ಮಂತ್ರಿಗಿಮ್ಮಡಿಯೆನಿಸಿ |
ಕರುಣದೊಳ್ ನೆರೆದಾಸ್ಯಭಾವಮಂ ನೆಲೆಗೊಳಿಸಿ |
ಹರುಷದಿಂದನವರತ ಮೃಷ್ಟಸದ್ಭೋಜ್ಯಮಂ ಕೊಡುವಲ್ಲಿ ಜನನಿಯೆನಿಸಿ ||
ಪರಿಶೋಭಿಸುತ್ತಿರ್ಪುದಾತ್ಮೇಶನೊಡವೆರದು |
ನೆರೆವಲ್ಲಿ ರತಿಯೆನಿಸಿ ಕ್ಷಮೆಯೊಳ್ ಧರಿತ್ರಿಯಂ |
ಮರೆಸಿ ನೀಂ ಧರ್ಮಾನುಕೂಲೆಯಾಗಿರ್ದಪುದು ಕೇಳ್ ಮಗಳೆ ನೀನೆಂದನು|| (24)

ಎಂದು ಜನಕಕ್ಷಿತಿಪ ಸೀತಾಪುರಂಧ್ರಿಗಂ |
ನಿಂದು ಸದ್ವಿನಯದಿಂದಿತರಾದಿ ಮಾನುಷ್ಯ |
ನಂದನೆಯರಿಂಗೊಡನೆ ಪೇಳ್ದಂತೆ ಪೇಳ್ದೈದೆ (ಸತ್ಕ)ರಿಸಿ ಕಾರುಣ್ಯದಿಂ ||
ಸಿಂಧುರಾಜಂ ಬಾಲಚಂದಿರನ ಹರಿವರಮ |
ಹೇಂದ್ರನಿಂಗಿತ್ತಂತೆ ಕೈಯಾರೆ ದಶರಥನ |
ರೇಂದ್ರನಿಂಗಿಗರ್ಪಿಸುತ್ತಿರಲು ಬೀಳ್ಕೊಂಡನಾ ಮನ್ನೆಯರ ಗಡಣದಿಂದೆ || (25)

ಬೀಳ್ಕೊಂಡು ಬೇಗನಂ ಭಾಸ್ಕರಾನ್ವಯನೃಪಂ |
ಪಾಲ್ಕಡಲ್ಮೇಲ್ವರಿದ ಮಾಳ್ಕೆಯೊಳ್ಗಜರಥಗ |
ಳಾಳ್ಕುದುರೆ ಸ್ತ್ರೀಸದಳಸನ್ನಾಹಸಮತೆಯೊಳ್ ನೆಲನ್ನೈದೆ ಬೆಸಲಾದೊಲು ||
ನಾಲ್ಕುದೆಸೆಗಳ್ ಪರಿಯೆ ವಾದ್ಯವೈಚಿತ್ರ್ಯರವ |
ಮೇಲ್ವರಿಯೆ ಪದಗತಿಯ ಘಟ್ಟಣೆಗೆ ಧಟ್ಟೈಸೆ |
ಯೇಳ್ಕುದುರೆಯವ ಕಾಣಬಾರದೊಲು ಗಮಿಸಿತ್ತು ಬೀಡೆನಲ್ ಮಧುರಾಜನ ||

ಗಮಿಸುತಿರಲಧ್ವದೊಳಗನ್ನೆಗಂ ಮುನ್ನೆಡೆಯೆ |
ತಮುತಮುಗೆ ಕಲಕಲಾಘೋರಘನರವಗಳ - |
ಭ್ರಮಣಿಯೊಳ್ ನಾನಾವಿಹಂಗಗಳ್ ಚೀರಿದವು ಮೃಗನಿವಹಸಾಮ್ಯದಿಂದೆ ||
ಗಮಕದಿಂದುಬ್ಬೆದ್ದು ಸವ್ಯದಿಂ ಸಂಚರಿಸು |
ತಮುಮ ಕಾಣ್ಬಡಿಸಲ್ಕೆ ಪೇರುರಂ ಗದ್ಗದಿಸು |
ತಮಿತದುಶ್ಚಿತ್ತದಿಂ ಪಂಕ್ತಿರಥ ನಿಟ್ಟಿಸಿ ವಸಿಷ್ಠರೊಡನಿಂತೆಂದನು || (27)

ಏನಿದೇನದ್ಭುತಂ ಖಗರಾಜಘೋರರವ |
ಪೀನದಿಂ ಕೇಳಿಸುತ್ತಿಹುದಕಟ ಮೃಗತತಿ ನಿ |
ಧಾನದಿಂ ಸವ್ಯಮಾಗಲು ಸುಲಕ್ಷಣದಲ್ಲಿ ಚರಿಸುತಿರೆ ಸಮ್ಮುಖದೊಳು ||
ಮೌನೀಂದ್ರ ಪೇಳಿದಂತೆನಗಿನಿಸು ಬಹಳ ದು-|
ಮ್ಮಾನಮಾಗಿರ್ಪುದೆಂದೆನಲು ತನ್ಮೌನೀಶ |
ನಾ ನರೇಂದ್ರಂಗೊಡನೆ ಪರಿಶೋಧನಂಗೈದು ನಸುನಗುತ್ತಿಂತೆಂದನು || (28)

ಕೇಳವನಿಪಾಲಕನೆ ಖಗಗಳಾಭೀಳರವ |
ದೋಳಫಲಮಂ ಪೇಳ್ವೆ ಮುಂದಿನ್ನು ತೋರ್ದಪುದು |
ಪೇಳಲೇಂ ಕರಕಷ್ಟ ಕಷ್ಟಕೆ ನಿವಾರಣವ ಸೂಚಿಪುದು ಮೃಗರಾಜಿಯು ||
ಏಳಿಗೆಯ ಸಾಮ್ಯಕರ ಸವ್ಯಸಚ್ಚಲನೆಯೆಂ |
ದಾಳೋಚಿಸುತ್ತೊಡನೆ ಬರುವಲ್ಲಿ ಸಂವರ್ತ |
ಕಾಲದೊಳ್ ಮೊಗೆವಂತೆ ಜನಿಸಿತೊಂದುದ್ದಂಡಪವಮಾನ ತರು ಮುರಿದವು ||

ಸಿಡಿಲೆರಗೆ ಶಿಖರಿಗಂ ಪೊಡವಿಯುಂ ಗದ್ಗದಿಸ |
ಲುಡಿಯೆ ತರುನಿಕರಮುಂ ಮೂಲಗಳ್ ಮೇಲಾಗಿ |
ಕಡಲ ಪೂರ್ವೋತ್ತರಗಳೊಂದೆನಿಸುವಂದದಿಂ ಜಂಝಾನಿಲಂ ಮೊಳಗಲು ||
ಅಡರೆ ಕೆಂಧೂಳ್ಗಳಾಕಾಶಮಂಡಲವ ಮು - |
ತ್ತುಡುಗಣನವಗ್ರಹಾದಿಗಳು ಧರಣೀಸತಿಯ |
ಪೊಡೆಯೊಳಿಟ್ಟಿಹ ರನ್ನದಂತೆಸೆದವೇನೆಂಬೆನತ್ಯಧಿಕಭೀಕರವನು || (30)

ಕತ್ತಲಿಸಿತೆಣ್ದೆಸೆಯು ಶಶಿರವಿಗಳೆಡೆಯಾಟ |
ಮೆತ್ತಲೆಂದರಿಯದೊಲು ಕಬಳಿಸೆ ರಜೋಭರಂ |
ತತ್ತರಂಗೊಂಡುದಾ ಬಲನೊರ್ವರೊರ್ವರುಂ ಕಾಣದುರೆ ತಲ್ಲಣಿಸುತ ||
ಬಿತ್ತರದ ಪುತ್ಥಳಿಗಳಂದದಿಂದಿರಲಾಗ |
ಲೆತ್ತಲುಂ ಮುಂಗಾಣದತುಲಾತಿಭೀತಿಯಂ |
ಬೆತ್ತು ಪೃಥ್ವೀರಮಣ ನಿಖಿಳಮುನಿತತಿಗಳುಂ ತಲೆಗುತ್ತಿ ಕಂಪಿಸಿದರು || (31)

ವಾರಾಶಿಯೊಳ್ ಬಡಬ ಮೂಡಿದೊಲು ಮೇಘದೊಳ್ |
ಘೋರವಜ್ರಾಕೃತಿಯು ಮಿಂಚಿದೊಲು ಪಂಚಮುಖ |
ನಾ ರವನ ಕುಡಿಗೊಳಿಸಿ ಕಾಲಭೈರವನಂತೆ ತಾಳ್ದ ಭೀಷಣಚಾಪವ ||
ಭಾರಣೆಯ ದಿವ್ಯಾಸ್ತ್ರಯುತನಿಷಂಗವ ಪೃಷ್ಠ |
ಕೋರಂತೆ ಸಡಗರಿಸಿ ಪೆಗಲೊಳ್ ಕುಠಾರಮಂ |
ತೋರಿಸುತೆ ರಣಭೀಮಜಾಮದಗ್ನ್ಯಂ ಸುಳಿದ ಕಲ್ಪಾಂತರುದ್ರನಂತೆ || (32)

ಕಡೆಗಣ್ಣ ಕೆಂಪಿನುರುಛಾಯಮುಂ ದಿಕ್ತಟವ |
ತೊಡರಿತರುಣೋದಯದ ಮಾಳ್ಕೆಯೊಳ್ ದು[1](ಶ್ವಸದ |
ಬಿಡುವಿನೊ)ಳ್ ಪೊಗೆಸುತ್ತಿ ಕೆತ್ತುದೊಡನಂಬರಂ ನಿಸ್ವನಕೆ ಬ್ರಹ್ಮಾಂಡವು ||
ಬಡೆದು ಹೊಡೆಹುಲ್ಲಾದುದೇನೆಂಬೆ ಭಾರ್ಗವನ |
ಕಡುಘಡಾವಣೆಗಮನನಿಷ್ಠುರಕೆ ಸೈನಿಕರ್ |
ಸಿಡಿಮಿಡಿಯುಗೊಂಡಳ್ಕಿ ಪರವಶಂ ಬಳಿಕಾದರೆದೆಯಾರಿ ನಿದ್ರ್ರವದೊಳು || (33)

ಅಹ! ಮಹಾಭೂಭುಜರ ವಂಶದಾರಣ್ಯಮುಂ |
ಬಹಳ ಮೇಣ್ಕಡಿದೊಟ್ಟಿ ಮೆಟ್ಟಿದುನ್ನತಶೌರ್ಯ |
ದ್ರುಹಿಣಸನ್ನಿಭನಪ್ಪ ದೋರ್ದಂಡರಾಮನೆಲೆ ಬಂದನಿದೊಯೆಂದೆನುತ್ತೆ ||
ಗ್ರಹವು ಪೊಡೆದಂತಾ ಸ್ವದೀಪಿತಂ ಕ್ಷಯಗೊಂಡು |
ವಹಿಲಗತಿ ಪಲ್ಲಟಿಸಿ ದಶರಥಮಹೀರಮಣ |
[2]ಬಹು(ಳ)ದುಮ್ಮಾನದಿಂದ್ಧಳವಳಿದು ಚಿಂತಿಸುತೆ ಬಸವಳಿದು ಬೆಪ್ಪಾದನು || (34)

ಒಂದೆಸೆಯಲುರುಜಟಾಮಂಡಲ ವಿಭಾಸಿಸಲ |
ದೊಂದೆಡೆಯ ಶರಚಾಪಭೀಷಣಂ ಪೊಳೆದಪುದ |
ದೊಂದೆಸೆಯಲಜಿನಂ ಕಮಂಡಲಂ ಕಟಿಸೂತ್ರ ಯಜ್ಞಸೂತ್ರಂ ತೋರ್ಪುದು ||
ಪಿಂದೆಸೆಯ ಕ್ರೂರಧಾರಾಕುಠಾರಂ ನಲಿವು |
ದಿಂದು ಶಾಂತಂವೀರರಸಸಾಂಗಮೆಂದೆನಿಸಿ |
ಬಂದುದದ್ಭುತಮಿದೇನೆಂದು ರಘುನಂದನಂ ಬೆಸಗೊಂಡ ಗುರುವರ್ಯನ || (35)

ಬೆಸಗೊಳಲು ರಘುವೀರನೊಡನೆ ಮೌನಿಯು ಪೇಳ್ದ |
ನಸಮುಸಮುರಾಟೋಪ ಕ್ರೌಂಚದಾರಣಬಲವ |
ಮುಸುಳಿಸಿ ಧರಾತಳವ ಕಾಶ್ಯಪಂಗಿತ್ತ ನಿಜಭ್ರೂವಿಭ್ರಮಂಗಳಿಂದೆ ||
ರಸರಾಸಿಗೆಡದಲ್ಲಣಂ ಎನಿಸಿ ಹೈಹಯನ |
ಪೊಸಬಲೋಚ್ಛೇದನಂ ಗೈದ ಭೃಗುವಂಶ ಸಾ |
ಹಸಿ ಕಾರ್ಮುಕಂ ನಿಖಿಳಭೂಭುಜಕುಲಾಂತಕಂ ಭೃಗುರಾಮನಾಮನರಸ|| (36)

---

1 ದುಶ್ವಾಸ | ಬಿಡಿತೊಯೊಳ್. 2 ಬಹುಶ

ನಿಗಮಕೀತನೆ ವದನ ಮಂದಿರಂ ಸಾಹಸದ |
ಹೊಗರಿಗಂ ಭುಜಯುಗ್ಮ ತವರುಮನೆ ರೌದ್ರಕತಿ |
ಸೆಗಳಿಕೆಗೆ ನೇತ್ರ ಮಾತೃಸ್ಥಾನ ಧೃತಿಗಳ್ಗೆ ಸತ್ಕರ[1](ಣಗಳಿಗೆ ಸಿಲಯ) ‖
ಭೃಗುಕುಲೋದ್ಭವಗಧಿಕರಾರ್ಪರೆಲೆ ರಾಮು |
ವಿಗಡ ಮುನಿದಪನೆಂದು ವೈರಂಚಿ ಮುಂಬರಿದು |
ಸೊಗಸಿನಿಂದರ್ಘ್ಯಪಾದ್ಯೋತ್ಕರದಿ ಸತ್ಕರಿಸೆ ಕೈಕೊಂಡು ಮುನಿಗೆಂದನು ‖ (37)

ಕೆಲದಿ ನಿಂದಿಹ ವೀರನಾರಿವಂ ಶಂಕರನ |
ಬಿಲುಮುರಿದ ಬಾಹಿರನೆ ಪೂರ್ವದೊಳ್ ಭೂಭುಜರ |
ಕುಲವ ನಿಧನಂಗೊಳಿಸುವಾಗಿವನ ಮುತ್ತಯ್ಯ ನಾರಿಯರೊಳೊಡಗಲಸಿಯೆ ‖
ಸಲಹಿಕೊಂಡಂ ತನುವ ಜಗವರಿಯೆ ಪಂಕ ಮೇ-|
[2](ಣ್ಬಲಿದು) ಶಿಲೆಯಾದಂತೆ ಜನಿಸಿದಂ ಕಡೆಗಿವಂ |
ಕಲಹಕಿದಿರಾಗುವೈ ಹಿಡಿ ಕೊಡುವೆ ವೈಷ್ಣವಸುಚಾಪಮುಂ ಭಳಿರೆಂದನು ‖ (38)

ಮುಂದರಿಯದೆಳೆಕಂದನಿಂದು ರಘುನಂದನಂ |
ಕೊಂದವಂ ಭೂಭುಜರ ವೃಂದಮುಂ ಭೃಗುರಾಮು |
ಪೊಂದಿಗೆಯೆ ಮಂದರಕೆ ಪೊರಡಿ ಸಾಮ್ಯವೆ ಜೀಯ ಬಾಲಕಂ ತಲೆಗಾಯ್ವುದು‖
ಕಂದುಗೊರಲಂಗಳವೆ ನಿಮಗಳವಿಗೊಡುವದಟು |
ಇಂದ್ರದಿಕ್ಪಾಲಕರಿಗೆಂದುದಿಸದಿವನಳಿಯೆ |
ಒಂದಿಗೆಯೊಳೀ ಕಟಕಸಹಿತಿಲ್ಲಿ ಮುಳುಗುವೇಂ ಎಂದರಸ ಕೈಮುಗಿದನು ‖ (39)

ಬಿನ್ನವಿಪ ದಶರರಥನ ಮಾತ ಲಾಲಿಸದೆ ಮಗು |
ಉನ್ನತದ ರೌದ್ರದಿಂ ಶ್ರೀರಾಮುನಂ ನೋಡಿ |
ತನ್ನ ಭುಜಗಳನೊದರಿಸಿಂತೆಂದನೆಲೆ ರಾಮು ಪೇಳ್ದಪೆಂ ಪೂರ್ವದಲ್ಲಿ ‖
ಮುನ್ನಾದ ಲೋಕಪೂಜಿತದಿವ್ಯಭೀಕರದ |
ಸನ್ನಾದಯುತಚಾಪಮೆರಡನತಿಪ್ರೀತಿಯಿಂ |
ಮುನ್ನ ನಿರ್ಮಿಸಿ ವಿಶ್ವಕರ್ಮ ಗೊರವಂಗೊಂದನಿತ್ತ ಮುಪ್ಪುರಕಜ್ಜದಿ ‖ (40)

ಆವುದಾ ಧನುವೆನಲು ನೀಂ ಭಗ್ನಗೈದುದೇ |
ಪಾವನತುಲಾಭರಣ ನಿಜಹಸ್ತಭೂಷಣ ಸು |
ರಾವಳಿಯು ಶೌರಿಗುಂ ಕೊಟ್ಟರೆರಡನೆಯಮಿತದುರ್ಧರ್ಷ ಸೃಣಿಕವನ್ನು ‖
ಈ ವಸುಧೆಗುತ್ತಮುದ ವೈಷ್ಣವ ಸುಕೋದಂಡ |
ಧೀವರನೆ ತಚ್ಚಾಪನಿಭ ಪೇಳ್ವೆನಿನ್ನೊಂದ |
ದೇವರುಷಿತತಿಗೂಡಿ ಹರಿಹರ ಬಲಾಬಲನ ತಿಳಿಯಲಿಚ್ಛೈಸಿ ಮನದಿ ‖ (41)

---

1 ಸತ್ಕರಣೆಸಜ್ಜಾಗೃಹಂ. 2 ಮೇಣ್ಬರಿದು.

ಸಗ್ಗಿಗರ ಪಿರಿಯನೆಡೆಗೈದಲ್ಕೆ ನೋಡಿ ಸುರ |
ರಗ್ಗಳಮನೋರಥವ ಪದ್ದುದೇರಗೆ ಹರನಿ |
ಗುಗ್ಗಡದ ವೈರಮಂ ಬೆಳಸಲಾದುದು ಸಮರಮಿರ್ವರಿಗೆ ಘೋರಮಾಗಿ ||
ಬಗ್ಗದೊರ್ವರನೊರ್ವರಳವಿಯೊಳ್ ಗೆಲಲೆಂದು |
ಭರ್ಗನಾರಾಯಣರ್ ಪೆಣಗುತಿರಲನಿತರೊಳ್ |
ವೆಗ್ಗಳಿಸಲಾ ವಿಷ್ಣುಚಾಪಟಂಕಾರದಿಂ ಬೆರಗಾದ ಶಿತಿಕಂಠನು || (42)

ಕಂಡುದಾ ಸುರನಿಚಯಮಿರ್ವರಿಹ ಭಾವಮಂ |
ಖಂಡೇಂದುಶೇಖರಗೆ ವಾಸುದೇವಗೆ ನಮಿಸಿ |
ಖಂಡನವನುಳಿದು ತಮ್ಮಂ ಕಾವುದೆಂದೆನುತಲೆರಗಿ ಪ್ರಾರ್ಥನೆಗೈಯಲು ||
ಹಿಂಡುರುಷಿಗಳ ನುಡಿಗೆ ತುಷ್ಟಿಗೊಳಲುಭಯರುಂ |
ಚಂಡವಿಕ್ರಮದೇವನಿಚಯ ಮತ್ತವರ ಬೀ |
ಳ್ಕೊಂಡು ನಿಜಲೋಕಕಂ ಗಮಿಸಿಹರು ಹರಿಬಲಂ ಅಧಿಕಮೆಂದೆನುತ ತಿಳಿದು ||

ಶಶಿಧರಂ ಕೋಪದಿಂದಾ ಚಾಪಮಂ ಬೇಗ |
ವಸುಧೇಶದೇವರಾತಂಗಿತ್ತನಾ ವಿಷ್ಣು |
ಸಸಿನೆ ಭೃಗುಸುತರುಚಿಕಗಿತ್ತಡವ ಜಮದಗ್ನಿಗೀಯಲೆನ್ನಂ ಸಾರ್ದುದು ||
ಬೆಸನೀಯೆ ಹರಿ ಪಿತೃದ್ರೋಹಿಕೃತುವೀರ್ಯಜನ |
ವಸುಧೆಯೊಳ್ ಕೆಡಪಿ ಕ್ಷತ್ರಿಯರ ಕುಲಮಂ ತರಿದು |
ಪೊಸತೆನಲ್ ಯಾಗದಕ್ಷಿಣೆಗಿತ್ತೆ ಪೊಡವಿಯಂ ಕಾಶ್ಯಪಂಗೊಲಿದು ಪ್ರಿಯದಿ ||

ತದನಂತರದಿ ಶಾಂತಿಯಾಂತು ತಪಸಿಗೆ ಗಮಿಸೆ |
ಮುದದಿಂದ ನೀಂ ಮುರಿದ ಕೋದಂಡವಾರ್ತೆಯಂ |
ಮುದದಿ ಸುರಚಾರಣರು ಪೇಳುತಿರಲಂಬರದಿ ಕೇಳ್ದು ಕಡುಗೋಪದಿಂದೆ ||
ಕದನಮಂ ಬೇಡಲೈತಂದೆ ಕ್ಷತ್ರಿಯ ಕುಲದೊ |
ಳುದಿಸಿತತಿಶಯಬಲಂ ಪುರುಷಶಾರ್ದೂಲ ಮ - |
ತ್ತಿದಕೊ ವೈಷ್ಣವಚಾಪ ಕೈಕೊಂಡು ನಿಜಬಲವ ತೋರು ಧರ್ಮವನುಳಿಯದೆ ||

ಶಿವಚಾಪಮಂ ನೆಗ್ಗಿದಗ್ಗಳ ಮಹೋಚ್ಛಲದ |
ವಿವರ ತಿಳಿದಪುದೆಲವೊ ತಚ್ಚಾಪಸದೃಶಧನು |
ಜವದಿಂದೆ ನೀನಿದಂ ಧರಿಸಿ ತಿರುವಂ ತೊಡಿಸೆ ಬಲ್ಲಿದಂ ಮಲ್ಲರಂತೆ ||
ತಿವಿದಾಡಿ ಕರವಜ್ರಮುಷ್ಟಿಯಿಂದುಭಯರ್ಕ |
ಳವಿರಳದಲನುವಿನಿಂ ಸೆಣಸಬಹುದೆಂದು ಭಾ - |
ರ್ಗವರಾಮು ರಾಮನಂ ಮೂದಲಿಸುತಿರಲರಸದಶರಥಂ ಕಂಪಿಸಿದನು || (46)

ಹುರಿಗುದ್ದಿ ಕ್ಷತ್ರಿಯರ ಕಡಲ ದರ್ಪವನಳಿದು |
ಕೊಡಹಿ ಷಾಣ್ಮಾತುರನ ಕೃತಯಾಗದಕ್ಷಿಣೆಗೆ |
ಪೊಡವಿಧಾರೆಯನೆರೆದ ಬಲ್ಲಿದಂ ಎನಗೆಲವೊ ನೀಂ ಬಳಿಕೆ ಸಮುಜೋಳಿಯೆ ||
ಹಿಡಿ ಕೊಡುವೆ ಕಾರ್ಮುಕವನೆಂದುಬ್ಬಿ ಭಾರ್ಗವಂ |
ಘುಡುಘುಡಿಸಿ ನೀಡಲ್ಕೆ ಕಾರ್ಪಣ್ಯದುಕ್ತಿಯಿಂ |
ದಡಿಗೆರಗುವಯ್ಯನಂ ನಿಂದಿರಿಸಿ ತದ್ಧನುವ ರಘುವೀರ ಕೈಕೊಂಡನು || (47)

ತಿರುವನೇರಿಸಿ ಮಿಡಿದು ವೈಷ್ಣವಶರಾಸನಕೆ |
ಸರಳನುಂ ನೆಲೆಗೊಳಿಸಿ ನಸುನಗುತೆ ರಾಘವಂ |
ಕರುಣದಿಂದಿಂತೆಂದ ಬುಧರೊಳುತ್ತಮನಲ್ತೆ ನಿನ್ನ ನಿಧನಂಗೊಳಿಪಡೆ ||
ಕರಣಸಮ್ಮತಗೊಳ್ಳದಿಂತೆಂದು ಸರಳಿಳುಹಿ |
ಬೆರಗಾಗೆ ಭಾರ್ಗವಂ ಪೂರ್ವವೃತ್ತಾಂತಮಂ |
ಸ್ಮರಿಸಿ ನಿಜಚಿತ್ತದೊಳ್ ದಾಶರಥಿ ಶ್ರೀಮಹಾವಿಷ್ಣುವೆಂದರಿತು ನುಡಿದಂ || (48)

ದೇವ ನೀಂ ಪದಿನಾಲ್ಕುಲೋಕಮಂ ಪುಟ್ಟಿಸುವ |
ರೋವಿ ಸಲಹುವರಂತ್ಯಗೈವ ಮುಮ್ಮೂರ್ತಿಗಳ |
ಠಾವೆನಿಸಿ ಮೌನಿಗಣಲೇಖಾಸಮೂಹಮಂ ಸಲಹೆ ಕರುಣಾಳುವಾಗಿ ||
ಈ ವಸುಧೆಯೊಳ್ ಧರಾನಾಥದಶರಥತನಯ |
ಭಾವದಿಂದವತರಿಸಿ ಕುಶಿಕಾದಿಯಮಿಜನರ |
ಪಾವನಂಗೈದ ಪರಮಾನಂದಮಯನೆಂದು ತಿಳಿದು ವಿಜ್ಞಾಪಿಸುವೆನು || (49)

ಭೃಗುವಂಶದೊಳಗಾನು ಜನಿಸಿ ತದನಂತರದಿ |
ಮಿಗೆ ಪರವ ಸಾಧಿಸುವಡೊಮ್ಮನದೊಳೊಂದಿನಂ |
ಬಗೆಬಗೆಯ ಸಾಧನಗಳೊಡಗೊಂಡು ಗಮಿಸಿದೆಂ ಚಕ್ರತೀರ್ಥದ ನಿಕಟಕೆ ||
ತೆಗೆದು ಕರಣಗಳ ದುರ್ವೃತ್ತಿಯಂ ಯೋಗದೊಳ್ |
ಬಗೆಯ ನೆಲೆಗೊಳಿಸಿ ಬಹುಕಾಲಮನ್ನವನುಳಿದು |
ನಿಗಮಗೋಚರನ ನಾರಾಯಣನ ನಿರ್ಮಲನ ಜಾನಿಸಿದೆನೆಡೆವಿಡದೆಯೆ || (50)

ಕ್ರೂರತಪಮೆಸಗೆ ಕರುಣಾವನಧಿಜಗದೀಶ |
ನೋರಂತೆ ಪ್ರೀತಿಯಿಂದೈತಂದು ನುಡಿದಂ ಗ |
ಭೀರತರವಾಣಿಯಿಂದೆಲೆ ವಿಪ್ರ ನಿಜತಪೋನುಷ್ಠಾನಕಾಂ ಮೆಚ್ಚಿದೆಂ ||
ಹಾರೈಸಿದುದನೀವೆ ಬೇಡೆನಲ್ಕಾನು ದುರಿ |
ತಾರಿ ಚಿನ್ಮಯ ಜಗದ್ಗುರು ಭವದ್ವಿಷಯದಾ |
ಕಾರಸುಜ್ಞಾನಂದಮಯನೆನಿಪುದಂ ಕೇಳ್ವೆನೆಂದರಾ ಹರಿ ನುಡಿದನು || (51)

ಕುಲಿಶಕಿಮ್ಮಡಿಯಾದ ಕಠಿಣತಮಹೃದಯಸಂ |
ಕಲಿತಗರ್ವೋದ್ರೇಕ ಪೆರ್ಚಿ ನಿನ್ನಯ ಪಿತನ |
ತಲೆಯನರಿದರ್ಜುನನ ತರಿದರಸುಗಳ ಕುಲವನೇಕವಿಂಶ್ವತ್ಸಂಖ್ಯೆಯೊಳ್ ||
ಕಲಿತನದಿ ಸಂಹರಿಸಿ ತದ್ರಕ್ತವಾಹಿನಿಯೊ |
ಳೊಲಿದು ಪಿತೃತರ್ಪಣವನಿತ್ತಪುದು ಮತ್ಕಳೆಯ |
ತಳೆದು ಭೂತಳದೊಳೆಂದಪ್ಪಣೆಯ ಕೊಡಲಾನು ಬೆದರಿ ಬಿನ್ನಪಗೈದೆನು || (52)

ಪಾರುವರ ಕುಲಕಹಿತವಾದ ದುಷ್ಕರ್ಮ ಸಂ |
ಚಾರಕಾನಧಿಕಾರಿಯೆಂತಪ್ಪೆ ಮೂಜಗದ |
ಲೋರಂತೆ ತೃಣಕೆ ಸಮರೆಂದೆನಿಸಿಯೊ ನೃಪರು ಮಡಿವರೆಂತೆನ್ನಿಂದಲಿ ||
ಆರು ಮೆಚ್ಚುವರತುಲಶಾಂತಮಂ ಬಯಸಿ ಚರ |
ಣಾರವಿಂದಗಳ ಸಂಪ್ರಾರ್ಥಿಸಿದಡೀ ವಿಧವ |
ತೋರಿದಡದೆಂತಪ್ಪುದೆಂದು ವಿಜ್ಞಾಪಿಸಲ್ ಜಗದೀಶನಿಂತೆಂದನು || (53)

ಕಳೆಯೊಂದನಿತ್ತಪೆಂ ಕಡಿವಡೆ ಪರಶ್ವಧಕೆ |
ಕೊಳುಗುಳದಿ ಮಚ್ಚಕ್ರನಿಭಶಕ್ತಿಯಂ ಕೊಡುವೆ |
ಘಳಿಲನೀ ದುರ್ವೃತ್ತರಾಜಮಂಡಲವನೀಂ ಸವರಿ ತದನಂತರದಲಿ ||
ನಳಿನಪೀಠನ ನುಡಿಯ ತಳೆದಾನು ಭೂತಳ - |
ಕ್ಕಿಳಿವೆ ತ್ರೇತಾಯುಗದಿ ದಶರಥಾತ್ಮಜನೆನಿಸಿ |
ಬಳಿಕಲೆನ್ನಯ ಕಳೆಯ ಸ್ವೀಕರಿಸಿ ಮತ್ತೀವೆನಾನಂದಮಯಶಾಂತಮಂ || (54)

ಎಂದುದಕೆ ತೋರ್ಪಡಿಸಿತೆಲೆ ಜಗನ್ಮಯನೆ ನೀ |
ನಿಂದೆನಗೆ ಪ್ರತ್ಯಕ್ಷನಾದೆಲೈ ಲೇಸಾಯ್ತು |
ಸಂದೇಹಮುಡಗಿದುದು ಸರ್ವರಂತರ್ಯಾಮಿ ತಿಳಿದೆನೈ ನಿರ್ಧರದೊಳು ||
ಮುಂದದೆಂತಿರವೇಳ್ಕು ನೇಮಿಸು ಭವತ್ಕಳೆಯು |
ಬಂದುದೇ ನಿಮ್ಮೆದೆಗೆ ದಿವ್ಯಾಸ್ತ್ರಶಸ್ತ್ರಗಳು |
ಕಂದರ್ಪಪಿತ ನಿಮಗೆ ಸಲಲೆಂದು ತಾನಿತ್ತು ಶಾಂತನಂ ಪ್ರಾರ್ಥಿಸಿದನು || (55)

ಮನದ ಹಂಕಾರದುರುಗಿರಿಯನುಂ ಧುಮ್ಮಿಕ್ಕಿ |
ವಿನಯಕವಚವ ತೊಟ್ಟು ಭಕ್ತಿರಸಪೀಯೂಷ |
ವನಧಿಯೊಳಗೀಸಾಡಿ ರೌದ್ರತಿಮಿರವ ಕಳೆದು ಸುಜ್ಞಾನಸೊಡರ ಬೆಳಗಿ ||
ಚಿನುಮಯನ ಚೇತನನ ನಿರ್ಗುಣನಿರಾಮಯನ |
ವನಜಾಕ್ಷವೈಕುಂಠವಾಸನಹ **ರಾಮಪುರಿ** |
ಜನಕಜಾವಲ್ಲಭನ ಮಗುಳೆಮುಗಳೀಕ್ಷಿಸುತೆ ಭಾರ್ಗವಂ ನಿಂದಿರ್ದನು || (56)

ಸಂಧಿ 23ಕ್ಕಂ ಪದಂಗಳ್ 1395.

---

# ಇಪ್ಪತ್ತನಾಲ್ಕನೆಯ ಸಂಧಿ

ಸೂಚನೆ ॥ ಭಯಭರಿತಭಕ್ತಿಯಿಂ ಭಾವಿಸಿದ ಭಾರ್ಗವನ ।
ಭಯವನಿರ್ಕುಳಿಗೈದು ಕರುಣದಿಂ ಬೀಳ್ಕೊಟ್ಟು । [ಪುರಮಂ ॥
ಜಯಮುಖದಿ ರಘುವೀರ ನಿಖಿಲಬಲಪಿತಸಹಿತ ಪೊಕ್ಕ ಸಾಕೇತ

ಮಡದಿಯರ ಮಾಣಿಕವೆ ಕೇಳ್ ಪರಶುರಾಮ ನುಂ ।
ಗಡೆಯೆ ತ್ರಿಜಗತ್ಪತಿಯ ನಿಲಿಸಿ ಪಳಿವಾತಿನಿಂ ।
ದೊಡವೆರೆದ ಶುಭವಾಣಿಯಿಂದ ಸನ್ನುತಿಗೈದನಾನಂದಮಯನಾಗುತೆ ॥
ಮೃಡವಿರಿಂಚಿಪ್ರಮುಖದೇವತಾಸಂದೋಹ ।
ಮಡಿಗಡಿಗೆ ಹೃತ್ಪಯೋಜಾತಮಧ್ಯದೊಳಾವ ।
ನಡಿಗಳಂ ಜಾನಿಸುತೆ ಸೌಖ್ಯವಡೆದಿಹರಾತನಂ ನುತಿಪೆನತಿಭಕ್ತಿಯಿಂ ॥ (1)

ದೇವಾಧಿದೇವರ್ಕಳೀಪ್ಸಿತವನುಂ ಸಲಿಸು ।
ತಾವನುಂ ಪೂರ್ವದೇವಾರಿಗಳ ಶಿಕ್ಷಿಸುತೆ ।
ಸೇವಕಜನಾವಳಿಯ ನಾಮಸಂಕೀರ್ತನೆಯೊಳಾ ನಾದರೂಪೆನಿಸಿಯೆ ॥
ಪಾವನಕೆ ಪಾವನಂ ತಾನಾಗಿ ಕಾರ್ಮುಗಿಲೊ ।
ಳೋವಿ ಬೆಳಗುವ ಮಿಂಚಿನೊಲು ತೋರುತಡಗುತ್ತ ।
ಮಿೂ ವಿಧದೊಳಿಹ ನಿಗಮಗೂಢಚಿದ್ರೂಪನಾದಾತಗಾಂ ವಂದಿಸುವೆನು ॥ (2)

ಜಗತಾಮಧೀಶನಂ ಜನ್ಮಜಡನಾಶನಂ ।
ನಿಗಮಪ್ರಕಾಶನಂ ನೇತ್ರಿತದಿನೇಶನಂ ।
ಸುಗುಣರಿಗೆ ಕೋಶನಂ ಸುರಮುನೀಂದ್ರೇಶನಂ ಸುಜನಸಮುದಯಪೋಷನಂ ॥
ಬಗೆಗೆ ಕಾಣ್ಬಡದನಂ ಬಗೆಯೊಳಗೆ ಪೊಳೆವನಂ ।
ಮಿಗೆಪೊಗಳೆ ನಲಿವನಂ ಮೆಚ್ಚಿದರಿಗೊಲಿವನಂ ।
ಅಗಣಿತಮಹಾಮಹಿಮರಘುಕುಲಲಲಾಮನಂ ಮರೆವೊಕ್ಕೆ ಮಮತೆಯುತನಂ ॥

ಶರಣು ಜಗದಭಿರಾಮ ರಾಮಮಂಗಳನಾಮ ।
ಶರಣು ಅಗಜಾಪ್ರೇಮ ಸೋಮನುತಸುತ್ರಾಮ ।
ಶರಣು ನವನೀರದಶ್ಯಾಮ ಕೃತಕಲಿರಾಮ ತಾಮರಸಪೀಠಜನಕ ॥
ಶರಣು ಕರುಣಾಸಾಂದ್ರ ರಘುಕುಲಾಂಬುಧಿಚಂದ್ರ ।
ಶರಣು ರಣನಿಸ್ತಂದ್ರ ಸನ್ನುತಪ್ರಮಥೇಂದ್ರ ।
ಶರಣು ದುಷ್ಕೃತಮಂದ್ರನಾಶರಗಣಸ್ತಂದ್ರದಾನ ನವಪೂತ ಜಯತು ॥ (4)

ನಿಗಮಗೋಚರನೆ ಗಮನಾಗಮನವರ್ಜಿತನೆ |
ಪೊಗಳುವಣೆಮೂದಿಪ್ರಸಿದ್ಧಗಳ ದಾತಾರ |
ಜಗದಂತರಾತ್ಮಕ ಜಗನ್ಮಯ ಜನಾರ್ದನನೆ ತಾರಕಾಂತಕಜನಕನ ||
ಬಗೆಯೊಳನುದಿನಮಗಲದಗಣಿತಸುನಾಮಾಂಕ |
ಸಗರವಂಶಶಶಾಂಕ ಶಾಶ್ವತಕೃಪಾವನಧಿ |
ಸುಗುಣನಿಧಿಯಣುವಿಗಣು ಘನಕೆಘನದಂತೆಸೆವ ರಾಮ ಲೋಕಾಭಿರಾಮ || (5)

ಪರಿಪೂರ್ಣಕಳೆಯಾಂತು ಧರಣಿಯೊಳಗವತರಿಸಿ |
ಬರುವೆ ತ್ರೇತಾಯುಗದೊಳವಸರದಿ ನೀನೆನ್ನ |
ದರುಶನಕೆ ಬಹೆ ಮಹಾವೈಷ್ಣವಸುತೇಜಮಂ ಒಪ್ಪಗಿಪೆ ತದನಂತರಂ ||
ಚರಿಪೆ ಸಚ್ಛಾಂತಿಯೊಳಗೆಂದೊರೆದ ಸಂಗತಿಯು |
ನಿರತಮಾಯ್ತೀ ಸಮಯದಲ್ಲಿ ನಿನ್ನಯ ಕಳೆಯು |
ಚರಣಮಂ ಪೊಂದಿದುದು ದೊರೆದುದೆನ್ನಭಿಮತವು ತಿಳಿದೆ ನೀಂ ವಿಷ್ಣುವೆಂದು ||

ಹಾಸದಿಂದುದಯಿಸಿದ ಮಾಯೆಯಾವರಿಸಿರ-|
ಲ್ಕೀಸುದಿನಪರಿಯಂತಮಜ್ಞಾಂಧಕಾರದಿಂ |
ದಾಸುರೀಭಾವಮನ್ನನುಕರಿಸಿ ಕ್ರೂರತರನುಡಿಗಳಿಂ ಧಿಕ್ಕರಿಸಿದ ||
ಬೇಸರಕೆ ನಿಷ್ಕೃತಿಯನರಿಯೆ ಮೂಢಂ ದಯಾ |
ರಾಶಿ ನೀನಲ್ತೆ ನುತಿಸಲು ರಸನೆಗಳವಲ್ಲ |
ವೇಸರದ ದೃಙ್ಮನೋವಾಚಾಮಗೋಚರನನಂತನಾದ್ಯಾದ್ವಯನನು || (7)

ಪಾತಕಶತಂಗಳಿಂ ಕಲಿತನಾದರು ಕ್ರೂರ |
ಜಾತನಾದರು ಭವನ್ನಾಮಮನ್ನುಚ್ಚರಿಸಿ |
ವೀತಕಲ್ಮಷನಪ್ಪನಖಿಲಭೂಸುರತಿಲಕನೆನಿಸುವಂ ಮೂಲೋಕದಿ ||
ಸೀತಾಮನೋಹರನೆ ಶರಣೆಂದು ಮರೆಯೊಕ್ಕೆ |
ಪಾತಕಿಗೆ ಭಯ ಜನಿಪುದ್ಯಾತರದು ಸತ್ಕೃಪಾ |
ಸೂತ ಸುಕಟಾಕ್ಷದಿಂದೀಕ್ಷಿಸಿ ಕೃತಾರ್ಥನಂಗೈವೇಳ್ಕುಮೆನುತ ನಮಿಸಿ || (8)

ಮಗುಳೆ ನುತಿಸಿದನಬ್ಜನೇತ್ರಸುಚರಿತ್ರನಂ |
ಪೊಗರುಗುವ ನೀಲನಿಭಗಾತ್ರಸಚ್ಛಾತ್ರನಂ |
ಬಗೆಗಗೋಚರಭಾನುನೇತ್ರನ ಪವಿತ್ರನಂ ಭರ್ಗಸನ್ನುತಿಪಾತ್ರನಂ ||
ನಿಗಮಾಂತಸಂವೇದ್ಯನಿಖಿಲಜನಹೃದ್ಯನಾ |
ಶುಗದ ರಿಪುವಧ್ಯನಂ ನಿರತಾನುವೇದ್ಯನಂ |
ಜಗದೀಶಸಾಧುಜನಬೋಧ್ಯಭುವನಾದ್ಯನಂ ಸದ್ಭಕ್ತಿಗತಿಸಾಧ್ಯನಂ || (9)

ಗತಿಹೀನರಿಗೆ ನೀನೆ ಗತಿಯನಾಥರ ನಾಥ |
ನತಿಶಯುಕ್ಕತಿಶಯನೆ ನಿರ್ಲೇಪ ದೇವಸಂ |
ತತಿಯೊಳೆಚ್ಚರು ಪಶುಗಳೊಳ್ ಕನಸು ಜಡಜೀವಜಾತಸಮುದಯುದಿ ಸಿದ್ರಾ ||
ಕೃತಿ ಮನುಜರೊಳ್ ಸುಪ್ತಿ ಜಾಗ್ರದೊಳ್ ತದ್ರೂಪ |
ತತಿಗೆ ಸಾಕ್ಷಿಕನೆನಿಸಿ ಚತುರದಶಲೋಕಸಂ |
ಗತನಸಂಗತಚಿತ್ಸ್ವರೂಪ ನಿತ್ಯಾನಂದ ರಘುವೀರ ಜಯತುಜಯತು || (10)

ಧರಣಿಜಾವರಲೋಲ ದನುಜಹೃದ್ಗತಶೂಲ |
ತರುಣತುಲಸೀಮಾಲ ತಾರಕಾಹ್ವಯಶೀಲ |
ನರಚರಿತ್ರವಿಶಾಲ ನತಜನೌಘರಸಾಲ ಕರುಣಾಲವಾಲಖೇಲ ||
ಹರಶರಾಸನಭಂಗ ಹರ್ಷವಾರ್ಧಿತರಂಗ |
ದುರಿತತಿಮಿರಪತಂಗ ಧ್ರುವಮೌನಿಹೃದ್ರಂಗ |
ಶರಣರಕ್ಷಾಪಾಂಗ ಶಾಶ್ವತಶುಭಾಂಗ ರಘುವೀರ ಹರಿ ಜಯತುಜಯತು || (11)

ನುತಿಸಲೀ ಪರಿಯೊಳಾ ಜಾಮದಗ್ನ್ಯಂ ಪ್ರಿಯದೊ |
ಳತುಳಹರ್ಷೋದ್ರೇಕದಿಂ ರಾಮನಿಂತೆಂದ |
ಸುತನೆ ಕೇಳೀ ವಿಶ್ವಮೆಲ್ಲ ಮನ್ಮಯಮಲ್ಲದಿಲ್ಲ ಬೇರೆಣಿಸೆ ಸಲ್ಲ ||
ಚತುರಮುಖಹರಿಹರರ್ ಅಷ್ಟದಿಗಧೀಶರುಂ |
ಕ್ಷಿತಿಯ ಪಡದಪ್ಸರರ್ ಗಂಧರ್ವಚಾರಣರ್ |
ಸತತವಸುರುದ್ರಾದಿತೇಯಮನುಮುನಿಗಳಾನೆಂದು ಭಾವಿಪುದು ಬಳಿಕ || (12)

ಮುನಿಯೆ ಕೇಳ್ನಿಖಿಳಭೂತಗಳೊಳ್ ಪ್ರವರ್ತಿ ನಾಂ |
ವಿನಯದಿಂ ಸುಖಕರ ನಿವೃತ್ತಿಯನ್ನಾಕಾರ |
ದನುಮತಂ ಮಂತ್ರಋತ್ವಿಜಪೂಜ್ಯ ಪಶುಹವಿಸ್ಸಾಯಜ್ಞಭೋಕ್ತೃಫಲದ ||
ಅನುಕರಣಮೂಡುವವ ವಿಜ್ಞಾನಮಜ್ಞಾನ |
ಘನತರದ ಮೋಕ್ಷ ತನ್ಮಾರ್ಗಸದ್ವೃತ್ತಿಚೆ-|
ತ್ತಿನಿಸು ನಾನೆಂದರಿವುದೆಲೆ ವಿಪ್ರ ಮೂಲೋಕಮೆನ್ನೊಳಾ ಲೊಕಂಗಳು || (13)

ಸಕಲದೇಹಿಗಳಾದಿಮಧ್ಯಾಂತನಾಂ ಸ್ವರ್ಗ |
ನಿಕರಸುಖವಾಯ್ವಗ್ನಿಯಾಕಾಶಕ್ಷೇತ್ರಜ್ಞ |
ಮಕಳಂಕಗುಣಯುತದೊಳಾಂ ಗುಣಾನಿಧಿಯುತರೊಳುಂ ಪ್ರತಿಭೆ ಬಲದಿಬಲವು ||
ಪ್ರಕಟಿತದ ಬೆಳಗಿನೊಳ್ ಬೆಳಗಾನು ಧರ್ಮಶಾ |
ಸಕರಿಗಧಿನಾಯಕಂ ಪ್ರಕೃತಿಪುರುಷಾಕಾರ |
ಸುಕರದೋಂಕಾರ ನಿರ್ಲಿಪ್ತ ಚಿನ್ಮಾತ್ರಮಾನೆಂದು ತಿಳಿ ವಿಪ್ರೋತ್ತಮ || (14)

ಭೂತಭವ್ಯಂ ಭವಿಷ್ಯತ್ ದೃಷ್ಟಿಗೋಚರವು |
ತೀತಮುಂಟಲ್ಲೆನಿಪವಾದಮುಂಟದ ಸೌಖ್ಯ |
ಜಾತಸದ್ವಸ್ತು(ವಾನೆಂದುಂ[1] ಧರಿತ್ರಿ)ಯಲಿ ಭೂತಿಗಳಿಗಿರವದೆನಿಸಿ ||
ಈ ತತ್ವವಿಧ ಹರಬ್ರಹ್ಮಾದ್ಯರಳವಲ್ಲ |
ನಾ ತಿಳಿವೆನಖಿಳಭೂತಗಳವಸ್ಥೆಗಳೆಲ್ಲ |
ಜಾತಮಾಯಾಸಮಾವೃತ ನನ್ನ ತಿಳಿಯದೀ ಪ್ರಾಣಿಗಳ ನಿಚಯವನಘ || (15)

ಇಂತು ತನ್ನಯ ವಿಭೂತಿಯು ನಿಜವನುರೆ ಬೋಧಿ |
ಸಿಂತೆಂದ ಮುನಿತಿಲಕ ನಿನ್ನ ನುತಿಯಿಂ ಹರ್ಷ |
ಮಾಂತೆ ಬೇಡಿದುದೀವೆ ಯಾಚಿಸೆನಲಾ ಪರಮಪುರುಷನಡಿಗೆರಗಿ ಮುದದಿ ||
ಕಂತುಪಿತ ಕಮಲೇಶ ಭಕ್ತಭಾವನ ಮುನಿ-|
ಸ್ವಾಂತಮಂದಿರ ಜಗತ್ಕಾರಣದಯಾಂಬುಧಿಯ |
ನಂತಶಾಯಿಯೆ ನಿಗಮನೋಂಕಾರ ಪರತತ್ವ ಪರಮಗುರು ಪಾಲಿಸೆನುತ (16)

ನಿನ್ನೊಳೀ ಬ್ರಹ್ಮಾಂಡಕೋಟಿತಂಡಗಳಿಹವು |
ನಿನ್ನೊಳೀ ಮದ್ರಾಮರೇಂದ್ರಸುರಕುಲಮಿಹುದು |
ನಿನ್ನೊಳಗೆ ಮುಮ್ಮೂರ್ತಿನಿಖಿಳಲೋಕಂಗಳುಚರಾಚರಂಗಳ ರಾಸಿಯುಂ ||
ಭಿನ್ನಮೆನಿಸದಲೆ ಓತಪ್ರೋತ ತಂತುಪಟ |
ಮೆನ್ನುವೊಲ್ತೋರುತಿಹವರಸ ಮನುಜಾಕಾರ |
ವನ್ನಾಳ್ದ ಮೂರ್ತಿಯಿದೆ ಸಕಲಕಾರಣಬೀಜಮಲ್ತೆ ರಘುಜಲಧಿಚಂದ್ರ || (17)

ಆವರಣವಿಕ್ಷೇಪವೆರಡು ರೂಪುಗಳೆನಿಸಿ |
ಜೀವಂಗಳನು ಮರುಳ್ಗೊಳಿಸುತಲಿ ಸುಜ್ಞಾನ |
[2](ಭಾವಂಗಳ)ರಿಯದೊಲು ಕರ್ಮಾದಿ ಸುಖದುಃಖಗಳನುಣಿಸಿ ಕುಣಿಸಿ ಮೆರೆಸಿ ||
ಪಾವಗಿದ ಮಂಡೂಕ ತನ್ನಶನಕೆಳಸುವಂ |
ತೀ ವಿಧದಿ ಬಿಸತಂತುಕಲಿತಪಶುಗಳಮಾಡು |
ತಾವರಿಸಿಕೊಂಡಿರ್ಪುದೈ ನಿನ್ನ ಬಗೆಯಿಂದ ಜನಿತವಾಯ್ತು ಶಕ್ತಿಯು || (18)

ಉಂಟೆನಿಸದಿಲ್ಲೆನಿಸದುಂಟಲ್ಲೆನಿಸದಖಿಲ |
ಕಂಟಕದ ಬೀಜಮಾಯಾಯುಕ್ತ ಜೀವರಂ |
ಅಂಟಿ ಕರಕಷ್ಟತತಿಗಳನುಂಡು ಕರ್ತೃತ್ವಭೋಕ್ತೃತ್ವಹಮ್ಮಿನಿಂದ ||
ತಂಟೆಯೊಳು ಕೆಡೆದು ತನ್ನಾಕಾರವುಂ ಮರೆದು |
ಬಂಟನಿಗೆ ಪ್ರತಿಬಂಟನಾದವಾಳ್ಕೆಯೊಳಮೃತ |
ವಿೂಂಟದೀ ಪರಿ ತೊಳಲುವುದನೆಸಗಿಕೊಂಡಿಹುದನಿರ್ವಾಚ್ಯಪ್ರಕೃತಿ ನಿನ್ನ || (19)

---

1 ಸದ್ವಸ್ತುನುನೆಂದದ್ರಿಯಲಿ
2 ಶೀವಗರಿಯದೊಲು

ತಿಳಿಯಲೀಯದಲಂಟಲದರ ಮಾಯೆಯು ನಿನ್ನ |
ಒಲವಿನಿಂ ಸಾಧುಜನಸಂಗ[1](ಸದ್ಬೋಧೆ)ಯಿಂ |
ತಿಳಿದು ನಿಜಮನ್ನಖಿಳಕರ್ಮತತಿಗಳ ತೊಳೆದು ನಿರ್ಮಲತೆತಳೆದು ಮುದದಿ ||
ತಿಳಿದು ಪುಟ್ಟುವ ಹಾದಿಯಂ ಮೆರೆಯಬೇಕಲ್ಲ |
ದಿಳೆಯೊಳಿನ್ನಾವ ಸಾಧನದಿಂದ ಘಟಿಸದಿದು |
ನಳಿನಪತ್ರಾಕ್ಷನೀ ಕೃಪೆವೆತ್ತು ನೋಡದಿರಲನ್ಯಸಾಧನಗಳಿ[2](ಲ್ಲ) || (20)

ಮರೆದು ನಿಜಮಂ ಜೀವಲೋಕಸಂಭೂತನಾ |
ಉರುಮಾಯೆಯಿಂದಹಂಕಾರ ವೆಗ್ಗಳಿಸಿ ಸಿರಿ |
ಚರಣಮೆನ್ನಂತೆನುತ ಗರ್ವಪರ್ವತಮಡರಿ ನಿಟ್ಟುರದಿ ನುಡಿದ ನುಡಿಯು ||
ಬೆರಸಲೀಯದೆ ಚಿತ್ತದೊಳು ದಯಾರ್ದ್ರತೆವೆತ್ತು |
ಶರವ ಕಳುಹಿಸಿ ಬೇಗಲಪ್ಪಣೆಯ ಕೊಡು ತಪಸಿ |
ಗೆರಗುವೆ ಮಹೇಂದ್ರಭೂಧರಕೆಂದು ವಂದಿಸುತ ಮುಗುಳೆಮುಗುಳಿಂತೆಂದನು ||

ಶರಚಾಪಮಂ ಧರಿಸಿದುಭಯಕರದತಿಶಯದಿ |
ಮಿರುಪ ಕುಂಡಲ ಕಿರೀಟಾದಿಗಳ ವೈಭವದಿ |
ಧರಣೀತನೂಜೆಯೆಡದಂಕದೊಳ್ ಸೌಮಿತ್ರಿ ಸಂತಸದೊಳಿರೆ ಬಲದೊಳು ||
ಪರಮಋಷಿಗಣಸಹಿತಲೊಪ್ಪಿರುವ ಶುಭಮೂರ್ತಿ |
ನಿರತಮುಚ್ಚಿತ್ತಮನ್ನಗಲದಿರುವಂದದಿಂ |
ಕರುಣಿಸೆಂದೆರಗಿ ಬಿನ್ನವಿಸೆ ಸಂತಸದಿಂದಲಿತ್ತನಭಯುವ ರಾಮಗೆ || (22)

ಅಪರಾಧ ಸಾಸಿರಂಗಳಮಾಡಿ ಭಾರ್ಗವಂ |
ಜಪಿಸೆ ನಾಮವ ದಯದಿ ಮನ್ನಿಸಿದ ರಘುವೀರ |
ನಪರಿಮಿತಮಹಿಮನಂ ದೇವಗಂಧರ್ವಾದಿಮುನಿಗಳುಂ ಹರುಷದಿಂದೆ ||
ಉಪಮಾವಿದೂರನೆನ್ನುತಲಿ ಪೊಗಳುತಲಿರಲ್ |
ನೃಪಕುಲೋತ್ತಮರಾಮಚಂದ್ರನಪ್ಪಣೆವಿಡಿದು |
ಲಪನಪಂಚಕನಣುಗನೈದಿದಂ ಮಾಹೇಂದ್ರನಾಮಶೈಲೋತ್ತಮಕ್ಕೆ || (23)

ಜಾಮದಗ್ನ್ಯಂ ಪೋಗಲಿತ್ತ ದಶರಥತನಯ |
ಪ್ರೇಮದಿಂ ಕಡಲೊಡೆಯನಂ ಕರೆದು ಕರಕಲಿತ |
ದಾ ಮಹಚ್ಚಾಪಮನ್ನಿತ್ತ ಬೇಡಿದ ಸಮಯದಲ್ಲಿ ನೀಂ ಕೊಡುವುದೆನುತ ||
ಆ ಮಗುಳೆ ಕ[3]ವಿ(ದಂಧಕಾರ) ನಿರ್ಮಲ(ವಾಗೆ) |
ತಾಮರಸಮಿತ್ರ ದಿಕ್ಪ್ರಸನ್ನತ್ವದಿ ಬೆಳಗೆ |
ಸೋಮಗ್ರಹಾದಿಗಳ್ ನಲಿದರತಿಭೀಕರಂ ಪರಿದುದಾಕ್ಷಣ ಜಗತಿಗೆ || (24)

---

1 ಸಂಗದುಬ್ಬೋಧೆಯಿಂ |

2 ಸಾಧನಗಳಿಂದ ||

3 ಕವಿದಾಂಧ್ಯ ಪೋಯಿತು ನಿರ್ಮಲನಾಗಿ |

ಮೊಳಗಿದವು ನಿಸ್ಸಾಳಭೇರಿಗಳ್ ಕಾರ್ಮುಗಿಲ್ |
ಬಳಗ ಮೊರೆವಂದದಿಂದಖಿಳಬಲ ಸಂತೋಷ |
ಜಲಧಿಯೊಳಗಾಳಿದರ್ ಸರಸಮೃದುನುಡಿಗಳಿಂ ನುತಿಸುತಿರೆ ರಘುರಾಮನ ||
ಜಲಧಿಮೇಖಲೆಯರಸದಶರಥ ತನೂಜಮುಖ |
ನಳಿನಮಂ ನೋಡಿ ಮುಗುಳುದಿಸಿದನೆನುತ್ತಕರ |
ನಳಿನಂಗಳಿಂದಲಾಲಿಂಗಿಸುತ ಮಸ್ತಕವನಾಘ್ರಾಣಿಸಿದ ಪ್ರೀತಿಯಿಂ || (25)

ತರುಣೇಂದು ಸ್ವರ್ಭಾನುವಿಂಗೀಡೆ ಸಂಗರಕೆ |
ಪರಶುಧರಗೀಡೆ ನೀಂ ಅರಸುಗಳ ತರಿದವಗೆ |
ತರಳ ನೀಂ ಮತ್ತಾತನವಘಡಿಸೆ ಗೆಲ್ದೆಲೈ ಧರೆಯೊಳಗೆ ವಿಜಯನಾಗಿ ||
ಗುರುಕಟಾಕ್ಷಮೆನುತ್ತೆ ನೃಪ ವಸಿಷ್ಠನ ನೋಡಿ |
ಮರುಳುತನದಿಂದಾಡಿ ವಿಷ್ಣುವಂ ಮಗನೆಂಬ |
ಮರುಕದಿಂದಾನಂದಭಾಷ್ಪಸಂಕಲಿತದಿಂ ಮುಂಡಾಡಿ ನಲವೇರ್ದನು || (26)

ಘನಮನೋಹರ್ಷದುತ್ಸಾಹರಸದಿಣ್ಪಿನಿಂ |
ಜನಕಾತ್ಮಜಳೆ ನಿನ್ನ ತಾಟಂಕಯುಗಮುಹಿಮೆ |
ಯೆನುತರಸ ಸೊಸೆಯ ಕೊಂಡಾಡಿದಂ ಸಂತಸದಿ ದೇವಾದಿಗಣ ನಲಿಯಲು ||
ತನುಪುಳಕದೇಳ್ಗೆಯೊಳ್ ದಶರಥಮಹೀನಾಥ |
ವನಧಿಸದೃಶಮುಮಾದ ಸದಳಚತುರಂಗಸಹ |
ಮಣಿರಥವನೇರ್ದು ಸಾಗಿದ ಪುರಕೆ ನೆಲಕುಸಿಯೆ ದುಂದುಭಿರವಂ ಮೊಳಗಲು ||

ನೃಪತಿಬರವಂ ಕೇಳ್ದು ಸಾಕೇತನಗರಮಂ |
ನಿಪುಣತ್ವದಿಂದಾ ಸುಮಂತ್ರಾಖ್ಯ ಚಳಕದಿಂ |
ದಪರಿಮಿತಸಂರಂಭದಿಂದಾಗಲಂಕರಿಸೆ ಸುರಪುರಕ್ಕೆಣೆಯೆಂಬೊಲು ||
ಚಪಲಾಕ್ಷಿಯ[1](ರು ಅಮಿ)ತಕಲಶಕನ್ನಡಿವಿಭವ |
ದುಪರಿ ನಾನಾವಾದ್ಯತಾಳಮೇಳಪ್ರತತಿ |
ವಿಪುಳಮಾಂಗಲ್ಯದಿಂದಿದಿರ್ಗೊಂಡರೇನೆಂಬೆ ತೂರ್ಯತ್ರಯಗಳಿಂದೆ || (28)

ಗ್ರಾಮಪ್ರವೇಶಮಂ ಗೈದೈದೆ ಸರ್ವರುಂ |
ಸೋಮಸದ್ವೀಧಿಯೊಳ್ ನಡೆಗೊಳಲ್ ಪುರಜನಂ |
ಕಾಮಿನಿಯರಿಟ್ಟಣಿಸುತೊಟ್ಟನಿಂ ನಿಟ್ಟಿಸುತ್ತಿರುತಿರ್ದರಿತ್ತರದೊಳು ||
ಸೌಮಿತ್ರಿಭರತಶತ್ರುಘ್ನಕೌಸಲ್ಯೆಶ್ರೀ |
ರಾಮರಂ ರೌಪ್ಯವರರುಕ್ಮಕೃತಕಾಚಲಗ |
ಳಾ ಮನೋಲ್ಲಾಸದಿಂ ದಡದಡಿಸೆ ಬೆಡಗಿನಿಂ ಮಾಸಾಳ್ಗಳೆನೆ ಮದನನ || (29)

---

1 ಚಪಲಾಕ್ಷಿಯರನೀತ.

ಮಿತ್ರೆಯರ ನೀಲೋತ್ಪಲದಳಾಕ್ಷಿಗಳಪಾಂಗ |
ಸೂತ್ರವಿಡಿದಂತೊಪ್ಪಿ ಭಾಸಿಸಿತ್ತೊಡನುದಯ |
ಗಾತ್ರಕಜ್ಜಾರಿಯುಂ ಸುಳಿಯಲಾಗಮೃತಮಯರೋಚಿಗಳ್ ಮೇಲ್ವರಿಯಲು ॥
ಚೈತ್ರನಾಡುಂಬೊಲಮುದೆಂಬಂತೆ ಬಳಿಕವರ |
ಗಾತ್ರಸೌರಭನಿಚಯದಟ್ಟೈಸಿತಗಲದೆ ವಿ |
ಚಿತ್ರಮಾಗೇರ್ಪಡಿಸಿ ಬೀದಿಬೀದಿಗಳಲ್ಲಿ ನಗರದೊಳ್ ರಘುನಾಥನ ॥ (30)

ಮುಂದುಲಿವ ಪಡಿಹಾರರುಘ್ಘಡಸುಗಾಯಕರ |
ಗೊಂದಣದ ಕೈವಾರ ಬುಧರಶ್ರುತಿನಿರ್ಘೋಷ |
ಗಂಧರ್ವರೂಪಾಂತ ನೀರೆಯರ ಶುಭಗೀತ ಕವಿಗಮಕಿಗಳ ಕಳಕಳ ॥
[1](ಮಂದಿಗಳ) ಸಂದಣಿಯೊಳಮರೇಂದ್ರಭೋಗಮಂ |
ನಂದಿಸುವ ಮಾಳ್ಕೆಯೊಳ್ ದಶರಥಮಹೀರಮಣ |
ಬಂಧುಗಳ ಸಂಕೀರ್ಣಸದಳದಿಂ ನವರತ್ನಮಂದಿರವನೊಳಪೊಕ್ಕನು ॥ (31)

ಕುಸ್ತರಿಸಿ ಗುರುವಸಿಷ್ಠಾದ್ಯಖಿಲಋಷಿತತಿ ಸ |
ಮಸ್ತರನುಮುಚಿತದಪಚಿತಿವಿಧಾನಂಗಳಿಂ |
ಮಸ್ತಕವ ಮಣಿದುಳಿದ ವಿಪ್ರಸಂದೋಹಕುಂ ಗೋದಾನಭೂದಾನವ ॥
ಸ್ವಸ್ಥದಿಂ ಕೈಗೈದು ಸಕಲವಿದ್ವಜ್ಜನರ |
ವಸ್ತ್ರನೈಪಥ್ಯದಿಂ ತುಷ್ಟಿಗೊಳಿಸಿಯೆ ವರಗ |
ಭಸ್ತಿವಂಶಜಮೆರೆದ ಬೀಳ್ಕೊಟ್ಟು ಸರ್ವರಂ ಯಕ್ಷೇಶಗಿಮ್ಮಡಿಯೆನೆ ॥ (32)

ಸಕಲೋಪಚಾರಸಂಸ್ಫುರಣೆಸನ್ಮತಿಯಿಂದ |
ಲಕಳಂಕನಹ ಯುಧಾಜಿತುರಾಯ ಕೆಲವುದಿನ |
ಮಕರಕೇತನನಂತೆ ಬಳಿಕಿರ್ದು ಭರತಶತ್ರುಘ್ನನಿಜಜಾಮಾತರ ॥
ಯುಕುತದಿಂ ಶಾಲಕನ ಬೀಳ್ಕೊಂಡು ರಾಗದಿಂ |
ಶಕಟಗಜವಾಜಿಗಳ ನೆರವಿಯಿಂ ರಿಪುಗಳೆದೆ |
ಚಕಿತಗೊಂಡದುರುವೊಲು ಸಾಗಿದಂ ವೇಗದಿಂದಾ ಕಡೆಯ ಡಾಕದಿಂದೆ ॥ (33)

ಗಂಧರ್ವಪತಿ ಭಾಗಿನೇಯರನ್ನೊಡಗೊಂಡು |
ಬಂಧುಜನವೆರಸಿ ನಿಜರಾಷ್ಟ್ರಕೈದಿದನತ್ತ |
ಕುಂದೇಂದುಹಾರದಿಂದಿರನು ನಿಜಕೀರ್ತಿಯಂ ಮೂಲೋಕವಿಶದಗೈವ ॥
ಬಂಧುರಸುವಿಕ್ರಮಂ ಶ್ರೀರಾಮ ಸಕಲಗುಣ |
ದಿಂದ ಸೌಮಿತ್ರಿಯೊಡವೆರೆದು ಪಿತನಂ ಸೌಖ್ಯ |
ಸಂದಣಿಯೊಳೋಲಾಡಿಸಿದ ಸಕಲನಿವೃತಿಯುಂ ಕೈಸಾರಿತೆಂಬಂದದಿ ॥ (34)

---

1 ಪಂದುಗದ.

ಸಾಮುಜಾಸುರಮಥನ ಸಕಲತತ್ವಸುಕಥನ |
ಸೋಮಧರ ನೀಂ ಪೇಳ್ದ ಕಥೆಯೊಳಚ್ಚರಿಯಾಗಿ |
ಪ್ರೇಮಗೊಳದಿರೆ ಸ್ವಾಂತಮೆಂದೆನಲ್ ಶ್ರೀಹರಿಯನಂತವಿಧದಿಂ ಧರೆಯೊಳು ||
ನೇಮದಿಂದವತಾರಗೈದು ಲೇಖಾಮುನಿ-|
ಸ್ತೋಮಕಾರ್ಯಂಗಳಂ ಕೈಗೈದು ಪೂರ್ವದು-|
ದ್ದಾಮಕೈದೀ ಲೋಕಮಂ ಪಾಲಿಸಿದನೆಂದು ಪೇಳ್ದರಲ್ಲಖಿಳವಿಧದಿ || (35)

ಮೊದಲು ಸ್ವೀಕರಿಸಿದವತಾರಾಂಶಮಂ ಮಗುಳೆ |
[1](ಮುದದೊ)ಳವತರಿಸಿದಾತಂ ಕೊಂಡನೆಂಬುದಂ |
ಮುದದೊಳಾಜ್ಞಾಪಿಸಿದುದಿಲ್ಲಮಿೂಯವಸರದೊಳೀ ಪರಿಯೊಳೊರೆಯಲದರಿಂ ||
ಹೃದಯ ಚಂಚಲಿಸುತ್ತಮಿದೆ ನಿಶ್ಚಯಂಗೊಳ್ಳ |
ಲುದಧಿಶಯನನ ಕಥಾಮೃತವ ಪೇಳೆಂದು ಹಿಮ |
ಕುಧರಸುತೆ ಬೆಸಗೊಳಲ್ ಕಂದುಗೊರಲಂ ಪ್ರಿಯದೊಳಿಂತೆಂದ ಹೈಮವತಿಗೆ ||

ವರದಾನಬಲದೊಳಾಶರನಿಚಯ ಸದ್ಧರ್ಮ |
[2]ವ(ರ)ತು ಗೋಬ್ರಾಹ್ಮಣರ ಬಾಧಿಸಲ್ ಕಮಲಭವ |
ಶರನಿಧಿಗೆ ಪೋಗಿ ನಾರಾಯಣಗೆ ಮೊರೆಯಿಡಲ್ ಕರುಣದಿಂದಂಶಮಾತ್ರ ||
ಭರಿತನೆಂದೆನಿಸಿ ಜಗತಿಯೊಳುದಿಸಿ ಸರ್ವರಂ |
ಪೊರೆದು ವೈಕುಂಠಕುಂ ಗಮಿಸುತಿಹನವತಾರ |
ಧರ ಧರೆಯೊಳಿದು ನಿತ್ಯಮಗಜೆ ಸರಸಿಜಪೀಠಮುಖ್ಯಮುನಿತತಿಗಳೆಲ್ಲ || (37)

ದಶವದನನುಪಟಳಕ್ಕಳ್ಕಿ ಪ್ರಾರ್ಥನೆಗೈಯ್ಯೆ |
ಶಶಿರವಿಸುಲೋಚನಂ ತಾನೆ ರವಿವಂಶಭವ |
ದಶರಥನ ಗರ್ಭದೊಳು ಜನಿಸಿ ಕೌಶಿಕಮುಖವ ಸಲಹಿ ಮುಚ್ಚಾಪವನ್ನು ||
ವಶಗೈದು ಧರಣಿಜೆಯನೊಡಗೊಂಡು ಬರೆ ಪಥದಿ |
ಕುಶಶರಾಸನಚಿನ್ಮಯಾಂತಭಾರ್ಗವತೇಜ |
ವಿಶದಮಂ ಸೆಳೆದು ನಿಜನಗರಕೈದಿದನೆಂದು ಪೇಳ್ವುದಹುದಿದು ನಿಶ್ಚಯಂ|| (38)

ಜಗತಿಯೊಳ್ ಶ್ರೀಮಹಾವಿಷ್ಣು ಪೂರ್ವದೊಳಾಂತ |
ಬಗೆಬಗೆಯ ರೂಪಂಗಳಂಶಸಂಭವರಾಮು |
ನಗಜೆ ಸಂಪೂರ್ಣಕಳೆಯಾಂತ ಸಾಕ್ಷಾತ್‌ಮೂರ್ತಿಯದರಿಂದೆ ಪರಶುಧರನ ||
ಬಗೆಯೊಳಿಟ್ಟಿರ್ದ ತನ್ನಯ ತೇಜಮಂ ಸೆಳೆದ |
ನಿಗಮಪ್ರಸಿದ್ಧಮದರಿಂದನಂತಸುನಾಮು |
ಮಿಗಿಲು ಶ್ರೀರಾಮನಾಮಾಮೃತಮಿದೆಂದೊರೆದೆವೈಸೆ ಪೂರ್ವದೊಳು ನಿನಗೆ|| (39)

---

1 ಮದಿಯೊಳವತರಿಸಿದಾತಂ. (?)
2 ಸದ್ಧರ್ಮ | ವರಿತು

ನಿರತಿಶಯನಿರ್ಲೇಪ ನಿರಘ ನಿತ್ಯಾದ್ವೈತ |
ಪರಿಪೂರ್ಣ ಸಚ್ಚಿದಾನಂದ ತೇಜೋರಾಶಿ |
ಪರಮಮುನಿಹೃತ್ಪಂಕಜಾಲಯಾಂಗುಷ್ಠೋಪಮಿತಪರಂಜ್ಯೋತಿರೂಪ ||
ಸ್ಮರಿಸಲಘತತಿಗಳಪಹರಿಸಿ ಮೋಕ್ಷಗಳೀವ |
ಶರಣ ಶರಣರ ಕಲ್ಪತರು ದಯಾನಿಧಿ ಜಗ-|
ದ್ಭರಿತ ಶ್ರೀರಾಮನೆಂದರಿತು ನಿರತಂ ಭಜಿಪುದಗಜೆ ಮಗುಳನ್ಯಮುಳಿದು || (40)

ಇಂತು ಶ್ರೀರಾಮಚರಿತಾಮೃತವ ನಿಜಸತಿಗೆ |
ಕಂತುಹರ ಬೋಧಿಸಿದ ನಿಖಿಲಶ್ರುತಿಮತವೆನಲ್ |
ಪಿಂತೆ ಕೈಲಾಸಗಿರಿಯೊಳು ಸಭಾಮಧ್ಯದೊಳು ಋಷಿನಿವಹ ನಲಿಯೆ ಮುದದಿ ||
ನಾಂ ತಿಳಿದು ಕೇಳ್ದನಿತ ಪೇಳ್ದೆ ನಿಮಗೋಸುಗಮ |
ನಂತನವ್ಯಯ**ರಾಮಪುರ**ದರಸ ಶ್ರೀರಮಾ |
ಕಾಂತನತುಲಿತಸಚ್ಚರಿತ್ರೆಯಂ ಮುನಿಗಳಿರ ಮುದದಿಂದ ಬೆಸಗೊಳಲ್ಕೆ || (41)

ಸಂಧಿ 24ಕ್ಕಂ ಪದಂಗಳ್ 1436ಕ್ಕಂ

**ಮಂಗಳಂ ಮಹಾಶ್ರೀ**

ಗದ್ಯ ||

ಇದು ಶ್ರೀರಾಮಚಂದ್ರಪಾದಾರವಿಂದವಂದನ ಪವನನಂದನವರಪ್ರಸಾದಾಸಾಧಿತ ಸಾರಸ್ವತಾಸಾಹಿತ್ಯ ಸಾಮ್ರಾಜ್ಯ ಸರ್ವಂಕಷ ಚತುರ್ವಿಧಕವಿತಾ ಪರಿಶೀಲಿತಾತ್ಮ ನಿಷ್ಠಾಗರಿಷ್ಠ ಗಾಂಧರ್ವಕಲಾವಿದ ವಿವಿಧ ವಿದ್ವಜ್ಜನೋಪಲಾಲನೀಯ ರಾಮಪುರಿ ಹಂಪೆಯಾಮಾತ್ಯ ತನೂಭವ ವೆಂಕಾಹ್ವಯ ವಿರಚಿತಮಾದ ಶ್ರೀಮದ್ರಾಮಾಯಣ ಮಹಾಪ್ರಬಂಧದೊಳ್
**ಬಾಲಕಾಂಡಂ ಸಮಾಪ್ತಂ**
|| ಶ್ರೀ ಶ್ರೀ ಶ್ರೀ ||

---

PRINTED AT THE B. N. K. PRESS LTD., MADRAS-26.

